# ಡಾ॥ ಆಲ್ಬರ್ಟ್ ಶ್ವೈಯಿಟ್ಸರ್

ಡಾ॥ ಎಚ್. ಡಿ. ಚಂದ್ರಪ್ಪಗೌಡ





ನವಕರ್ನಾಟಕ ಪ್ರಕಾಶನದ ೧೧೪೫ನೇ ಪ್ರಕಟಣೆ

# ಡಾ॥ ಆಲ್ಬರ್ಟ್ ಶ್ವೆಯಿಟ್ಸರ್

(ಮೆಡಿಕಲ್ ಮಿಷನರಿಯ ಜೀವನ-ಚರಿತ್ರೆ)

ಡಾ॥ ಎಚ್. ಡಿ. ಚಂದ್ರಪ್ಪಗೌಡ

ಕುವೆಂಪು ವಿಶ್ವವಿದ್ಯಾನಿಲಯದ ದ್ವಿತೀಯ ವರ್ಷದ
ಬಿ.ಎ., ಬಿ.ಎಸ್ಸಿ., ತರಗತಿಗಳಿಗೆ ೨೦೦೦-೨೦೦೧ ಮತ್ತು
೨೦೦೧-೨೦೦೨ನೇ ಸಾಲಿಗೆ ಅವಿಸ್ತರ ಕನ್ನಡ ಪಠ್ಯಪುಸ್ತಕ



Dr. ALBERT SCHWEITZER *A Life -Story of Medical Missionary in Kannada by Dr. H. D. Chandrappa Gowda, M.B.B.S., M. S., Mission Compound, Shimoga - 577 201*

**Second Edition : 2000** **Pages : 200** **Price : Rs. 38**

ಎರಡನೇ ಮುದ್ರಣ : 2000



**ಬೆಲೆ : ರೂ. 38**

ಮುಖಚಿತ್ರ : ನವಕರ್ನಾಟಕ ವಿನ್ಯಾಸ

ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001

ಶಾಖೆಗಳು

| ಕೆಂಪೇಗೌಡ ವೃತ್ತ | ಕೆ. ಎಸ್. ರಾವ್. ರಸ್ತೆ | ರಾಮಸ್ವಾಮಿ ವೃತ್ತ | ಸ್ಟೇಷನ್ ರಸ್ತೆ |
|---|---|---|---|
| ಬೆಂಗಳೂರು - 9 | ಮಂಗಳೂರು - 1 | ಮೈಸೂರು - 24 | ಗುಲ್ಬರ್ಗಾ - 2 |

**0206001145** **ISBN 81-7302-421-9**

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore 560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Typeset at Navakarnataka, Bangalore - 560 001

## ಅರ್ಪಣೆ

ಕ್ಷೀರಾಬ್ಧಿಗೂ ಮಿಗಿಲಾಗಿ ಎದೆ ಹಾಲನ್ನಿತ್ತು
ಕಡಲಿಗೂ ಮಿಗಿಲಾಗುವಷ್ಟು ಕಣ್ಣೀರ ಸುರಿಸಿ
ಸಾಕಿ, ಸಲಹಿ, ವಿದ್ಯೆ ಬುದ್ಧಿ ಕಲಿಸಿ ಉದ್ಧರಿಸಿದ
ನನ್ನವ್ವ ಹಾಲಮ್ಮನವರಿಗೆ–

–ನಿನ್ನೊಲುಮೆಯ, "ಚಂದ್ರ"

# ಪರಿವಿಡಿ

# ಅರಿಕೆ

ಈಗ ಅರ್ಧಶತಮಾನದ ಹಿಂದೆ ಮಹಾತ್ಮಾ ಗಾಂಧಿಯವರಂತೆ ಪ್ರಪಂಚದೆಲ್ಲೆಡೆ ಜನಪ್ರಿಯರಾಗಿದ್ದ ಇನ್ನೊಬ್ಬರೆಂದರೆ ಡಾ॥ ಆಲ್ಬರ್ಟ್ ಶ್ವೈಯಿಟ್ಸರ್. ಆಫ್ರಿಕಾದ ಗೊಂಡಾರಣ್ಯದ ನಡುವಿನ ಲ್ಯಾಂಬರೀನೆಯಲ್ಲಿ ನತದೃಷ್ಟ ನೀಗ್ರೋ ಜನರಿಗೆ ೫೦ ವರ್ಷ ನಿಸ್ವಾರ್ಥ ವೈದ್ಯಕೀಯ ಸೇವೆ ಸಲ್ಲಿಸಿ ಡಾ॥ ಶ್ವೈಯಿಟ್ಸರ್ ವಿಶ್ವಮಾನ್ಯರಾದರು. ಜೊತೆಗೆ ಪಾಶ್ಚಾತ್ಯ-ಸಂಗೀತ ಕಲಾಕೋವಿದರು; ಕ್ರೈಸ್ತ ಮತ-ಧರ್ಮ-ತತ್ವಗಳ ಪ್ರಕಾಂಡ ಪಂಡಿತರು; ಭಗವಾನ್ ಏಸುಕ್ರಿಸ್ತನ ಬೋಧನೆಗಳನ್ನು ಅಕ್ಷರಶಃ ತಮ್ಮ ಜೀವನದಲ್ಲಿ ಅಳವಡಿಸಿಕೊಂಡವರು; ಯುದ್ಧ, ಹಿಂಸೆ, ಅತ್ಯಾಚಾರಗಳಿಂದ ಮಾನವ-ನಾಗರಿಕತೆ ವಿನಾಶವಾಗುತ್ತಿರುವುದರ ಬಗೆಗೆ ದೀರ್ಘ-ಚಿಂತನ-ಮಂಥನ ಮಾಡಿದವರು. ''ಜೀವೋಪಾಸನ ಸಿದ್ಧಾಂತ'' (Reverence for life)*ವನ್ನು ನಿರೂಪಿಸಿ ಅದರಂತೆ ಜೀವನ ನಡೆಸಿದವರು. ೧೯೫೦ರ ದಶಕದಲ್ಲಿ ಮಾರಕ ಪರಮಾಣು-ಅಸ್ತ್ರಗಳ ನಿರ್ಬಂಧದ ಒಪ್ಪಂದ ಏರ್ಪಡುವಲ್ಲಿ ಶ್ವೈಯಿಟ್ಸರ್ ಪ್ರಮುಖ ಪಾತ್ರವಹಿಸಿದ್ದರು. ೧೯೫೨ರ ನೊಬೆಲ್ ಶಾಂತಿ-ಪಾರಿತೋಷಕ ಲಭಿಸಿದಾಗ ಅವರ ಹೆಸರು ಪ್ರಪಂಚದೆಲ್ಲೆಡೆ ಮನೆಮಾತಾಯಿತು.

ವೈದ್ಯಕೀಯ ವಿದ್ಯಾರ್ಥಿಯಾಗಿದ್ದಾಗಿನಿಂದಲೂ ಡಾ॥ ಶ್ವೈಯಿಟ್ಸರ್ ಬಗೆಗೆ ನನ್ನಲ್ಲಿ ಆಸಕ್ತಿ ಮೂಡಿತ್ತು. ಅವರ ವಿಷಯ ಹೆಚ್ಚು ತಿಳಿದುಕೊಳ್ಳಬೇಕೆಂದು ಹಂಬಲಿಸುತ್ತಿದ್ದೆ. ಆದರೆ ಬಹಳ ಸಮಯ ಅವರ ಬಗೆಗಿನ ಸಾಹಿತ್ಯ ನನಗೆ ಲಭ್ಯವಾಗಲಿಲ್ಲ. ೧೯೭೭ರಲ್ಲಿ ದೊರೆತ ಅವರ ಜೀವನ ಚರಿತ್ರೆಯ ಒಂದು ಕಿರುಹೊತ್ತಗೆಯ ಅಭ್ಯಾಸ ಶ್ವೈಯಿಟ್ಸರ್ ಬಗೆಗಿನ ದಾಹವನ್ನು ಹೆಚ್ಚಿಸಿತು. ಕೆಲವು ಖ್ಯಾತ ಪುಸ್ತಕ-ಭಂಡಾರಗಳೂ ಹಾಗೂ ಪುಸ್ತಕ ವ್ಯಾಪಾರಿಗಳೊಡನೆ ಪತ್ರ ವ್ಯವಹಾರ ಮಾಡಿದೆ. ಹೆಚ್ಚು ಪ್ರಯೋಜನವಾಗಲಿಲ್ಲ. ಅವರ ಕಾರ್ಯಕ್ಷೇತ್ರವಾಗಿದ್ದ ಲ್ಯಾಂಬರೀನೆಯ ಆಸ್ಪತ್ರೆಗೇ ಪತ್ರ ಬರೆದೆ. ಡಾ॥ ಶ್ವೈಯಿಟ್ಸರ್ ಆತ್ಮಚರಿತ್ರೆ ಮತ್ತು ಕೆಲವು ಪುಸ್ತಕಗಳು ಅಲ್ಲಿಂದ ಬಂದವು. ಶ್ವೈಯಿಟ್ಸರ್ ಬಗೆಗೆ ನನಗಿದ್ದ ಆಸಕ್ತಿಯ ವೈದ್ಯ-ಬಂಧುವೊಬ್ಬರು, ಅವರ ಜೀವನ ಚರಿತ್ರೆಯ ಗ್ರಂಥವನ್ನು ಇಂಗ್ಲೆಂಡಿನಿಂದ

---

* REVERENCE FOR LIFE, ನುಡಿಗಟ್ಟಿಗೆ ಜೀವ-ಕಾರುಣ್ಯ, ಜೀವದಯೆ, ಮುಂತಾದ ಪದಗಳು ಅಕ್ಷರಶಃ ಭಾಷಾಂತರವಾಗಬಹುದು. ಆದರೆ ಡಾ॥ ಶ್ವೈಯಿಟ್ಸರ್ ನಿರೂಪಿಸಿದ ಆ ಸಿದ್ಧಾಂತದಲ್ಲಡಗಿರುವ ಸಕಲ ಜೀವರಾಶಿಯನ್ನೂ ಪೂಜನೀಯ ಮತ್ತು ಪವಿತ್ರಭಾವನೆಯಿಂದ ಪರಿಗಣಿಸುವ ದೃಷ್ಟಿಕೋನವನ್ನು ಅವು ಪ್ರತಿಬಿಂಬಿಸಲಾರವೆಂದು ''ಜೀವೋಪಾಸನ'' ಎಂಬ ಪದವನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

ಕಳುಹಿಸಿದರು. ಹೀಗೆ ದೊರೆತ ಪುಸ್ತಕಗಳನ್ನೆಲ್ಲಾ ಅಭ್ಯಾಸ ಮಾಡಿದೆ. ಅವರ ಜೀವನದ ಬಗೆಗೆ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಲೇಖನಗಳನ್ನು ಬರೆದೆ. ಆದರೂ ನನಗೆ ತೃಪ್ತಿಯಾಗಲಿಲ್ಲ. ಮುಂದೆ ಕಿರು ಪುಸ್ತಕವನ್ನು ಬರೆಯುವ ಸಾಹಸಕ್ಕಿಳಿದೆ. ಸಾಹಿತ್ಯ ಕ್ಷೇತ್ರದಲ್ಲಿ ಅಷ್ಟೇನೂ ಅನುಭವವಿರದ ವೈದ್ಯನೊಬ್ಬ ಡಾ|| ಆಲ್ಬರ್ಟ್ ಶ್ವೈಯಿಟ್ಸರ್‌ರಂಥ ಮಹಾನ್ ವೈದ್ಯನ ಬಗೆಗೆ ತಾಳಿದ ಗೌರವ ಆದರಗಳೇ ಈ ಕೃತಿಗೆ ಪ್ರೇರಣೆ. ಅವರಂತಹ ವಿಶ್ವಮಾನವನ ಆದರ್ಶ ಮತ್ತು ಸಂದೇಶಗಳು ಸಹೃದಯಿ ಕನ್ನಡಿಗರಿಗೆ ತಲುಪುವಂತಾದರೆ ನನ್ನ ಈ ಪ್ರಯತ್ನ ಸಾರ್ಥಕವೆಂದುಕೊಳ್ಳುತ್ತೇನೆ.

ಈ ಸಾಹಸಕ್ಕೆ ಮುಂದಡಿಯಿಡಲು ಮಾರ್ಗದರ್ಶನ ಮಾಡಿದ ಮದ್ರಾಸಿನ ಅಮೆರಿಕನ್ ಲೈಬ್ರರಿ, ಬೆಂಗಳೂರಿನ ಬ್ರಿಟಿಷ್ ಲೈಬ್ರರಿ ಮತ್ತು ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ವರ್ಲ್ಡ್-ಕಲ್ಚರ್ (ಬಸವನಗುಡಿ) ಅವರನ್ನು ಈ ಸಮಯದಲ್ಲಿ ಸ್ಮರಿಸುತ್ತೇನೆ. ದೂರದ ಲ್ಯಾಂಬರೀನೆಯಿಂದ ಗ್ರಂಥಗಳನ್ನು ಕಳುಹಿಸಿದ ಡಾ|| ಆಲ್ಬರ್ಟ್ ಶ್ವೈಯಿಟ್ಸರ್ ಆಸ್ಪತ್ರೆಯ ಪ್ರಮುಖರಿಗೆ ನಾನು ಎಷ್ಟು ಋಣಿಯಾಗಿ ಇದ್ದರೂ ಸಾಲದು. ಇಂಗ್ಲೆಂಡಿನಿಂದ ಶ್ವೈಯಿಟ್ಸರ್ ಜೀವನ-ಚರಿತ್ರೆಯ ಗ್ರಂಥವನ್ನು ಕಳುಹಿಸಿದ ಡಾ|| ಎಚ್. ಎಂ. ಪುಟ್ಟಸ್ವಾಮಿಯವರನ್ನು ಈ ಸಮಯದಲ್ಲಿ ನೆನೆಯದಿರಲಾರೆ.

ಹಸ್ತಪ್ರತಿಯನ್ನು ಪರಿಶೀಲಿಸಿ ಉಪಯುಕ್ತ ಸಲಹೆಗಳನ್ನಿತ್ತ ಡಾ|| ಶ್ರೀಕಂಠ ಕೂಡಿಗೆ ಮತ್ತು ಶ್ರೀ ಎನ್. ಶ್ರೀನಿವಾಸ ಉಡುಪರಿಗೂ ತುಂಬಾ ಆಭಾರಿಯಾಗಿದ್ದೇನೆ. ಪ್ರಕಟಣೆಗೆ ಹಲವು ವಿಧಗಳಲ್ಲಿ ಸಹಕರಿಸಿದ ಡಾ|| ಕೆ. ಎ. ಅಶೋಕ ಪೈ ಮತ್ತು ಶ್ರೀ ಜೆ. ಎಲ್. ಪದ್ಮನಾಭರಿಗೂ ನನ್ನ ಕೃತಜ್ಞತೆಗಳು.

ಈ ಪುಸ್ತಕವನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಿ ಮುನ್ನುಡಿಯನ್ನು ಬರೆದು ಅನುಗ್ರಹಿಸಿದ ಖ್ಯಾತ ಸಾಹಿತಿ ಡಾ|| ಹಾ.ಮಾ. ನಾಯಕ ಅವರಿಗೆ ನಾನು ಚಿರ ಋಣಿಯಾಗಿದ್ದೇನೆ.

ಸಾಹಿತ್ಯ ಕ್ಷೇತ್ರಕ್ಕೆ ಅಪರಿಚಿತನಾದವನೊಬ್ಬನ ಕೃತಿಯನ್ನು ಪ್ರಕಟಿಸಲು ಪ್ರಚೋದನೆ ನೀಡಿದ ನಾಡಿನ ಖ್ಯಾತ ವಿಮರ್ಶಕರಾದ ಶ್ರೀ ಕೀರ್ತಿನಾಥ ಕುರ್ತಕೋಟಿಯವರಿಗೂ ಹಾಗೂ ಧಾರವಾಡದ ಮನೋಹರ ಗ್ರಂಥಮಾಲೆಯ ಹಿರಿಯ ಚೇತನ ಶ್ರೀ ಜಿ. ಬಿ. ಜೋಶಿಯವರಿಗೂ ನನ್ನ ಹೃತ್ಪೂರ್ವಕ ನಮನಗಳು ಸಲ್ಲುತ್ತವೆ. ಪ್ರಕಟಣೆಯಲ್ಲಿ ಎದುರಾದ ಹಲವು ಅಡೆ-ತಡೆಗಳನ್ನು ನಿಭಾಯಿಸಿ ಕೊಂಡು, ನನ್ನ ನಿರಂತರ ಆತಂಕಗಳಿಗೆ ಸಾಂತ್ವನ ನೀಡುತ್ತಾ ಪುಸ್ತಕವನ್ನು ಮುದ್ದಾಗಿ ಹೊರತರುವಲ್ಲಿ ಗ್ರಂಥಮಾಲೆಯ ವ್ಯವಸ್ಥಾಪಕರಾದ ಡಾ|| ರಮಾಕಾಂತ ಜೋಶಿಯವರ ಪಾತ್ರ ಅವಿಸ್ಮರಣೀಯ. ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಶಿವಮೊಗ್ಗ

ಡಾ|| ಎಚ್. ಡಿ. ಚಂದ್ರಪ್ಪಗೌಡ

# ವಿಭೂತಿ ಪೂಜೆ

ಅರ್ಧ ಶತಮಾನದ ಹಿಂದೆ ನಾನು ಮೇಗರವಳ್ಳಿ (ತೀರ್ಥಹಳ್ಳಿ ತಾಲ್ಲೂಕು) ಮಾಧ್ಯಮಿಕ ಶಾಲೆಗೆ ಹೋದಾಗ ಎಚ್. ಡಿ. ಚಂದ್ರಪ್ಪಗೌಡರು ಅಲ್ಲಿ ಹಿರಿಯ ವಿದ್ಯಾರ್ಥಿಯಾಗಿದ್ದರು. ತಮ್ಮ ಸನ್ನಡತೆಯಿಂದಲೂ, ಜಾಣ್ಮೆಯಿಂದಲೂ ಅವರು ಅಧ್ಯಾಪಕ ವರ್ಗದ ಹಾಗೂ ಇತರ ವಿದ್ಯಾರ್ಥಿಗಳ ಆದರ ವಿಶ್ವಾಸಗಳನ್ನು ಗಳಿಸಿದ್ದರು. ಗಣಿತವೆಂದರೆ ನನಗೆ ಮೊದಲಿನಿಂದಲೂ ಬೇಸರ, ತಲೆನೋವು; ಮಾಧ್ಯಮಿಕ ಶಾಲೆಯಲ್ಲೂ ಅದು ಹೊರಲಾರದ ಹೊರೆಯಾಗಿತ್ತು! ಅನೇಕ ಸಂದರ್ಭಗಳಲ್ಲಿ ನಾನು ಗೌಡರಿಂದ ಲೆಕ್ಕ ಹೇಳಿಸಿಕೊಂಡ ನೆನಪಿದೆ. ಅವರು ಬೇಸರ ಪಡದೆ ಗಣಿತವನ್ನು ಸುಲಭವಾಗಿಸಲು ಪ್ರಯತ್ನಿಸುತ್ತಿದ್ದರು.

ಮುಂದೆ ಅವರು ವಿಜ್ಞಾನವನ್ನು ಐಚ್ಛಿಕ ವಿಷಯವನ್ನಾಗಿ ಆರಿಸಿಕೊಂಡರು; ನಾನು ಮಾನವಿಕಗಳನ್ನು ಆಯ್ದುಕೊಂಡೆ. ಅವರು ವೈದ್ಯರಾದರು; ನಾನು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕನಾದೆ. ಅವರು ನಿವೃತ್ತರಾಗಿ ಎರಡು ಮೂರು ವರ್ಷಗಳು ಕಳೆದವು; ನಾನು ನಿವೃತ್ತಿಯ ಹಾದಿಯಲ್ಲಿದ್ದೇನೆ. ಈ ನಡುವೆ ನಾವು ಭೇಟಿಯಾಗುತ್ತಿದ್ದ ಸಂದರ್ಭಗಳೇ ಇರಲಿಲ್ಲ. ಈಚಿನ ವರ್ಷಗಳಲ್ಲಿ ಅವರು ಜನಪ್ರಿಯ ವೈದ್ಯ ವಿಜ್ಞಾನದ ಲೇಖನಗಳನ್ನು ಬರೆದು ಪ್ರಸಿದ್ಧರಾಗಿದ್ದಾರೆ. ಕೆಲವು ವರ್ಷಗಳ ಹಿಂದೆ ನಾನು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ನಿಯತಕಾಲಿಕಗಳ ಪ್ರಧಾನ ಸಂಪಾದಕನಾಗಿದ್ದಾಗ ಡಾ|| ಚಂದ್ರಪ್ಪಗೌಡರು ತಮ್ಮ ಕೆಲವು ಲೇಖನಗಳನ್ನು ಪ್ರಕಟಣೆಗಾಗಿ ನನ್ನ ಕಡೆ ಕಳುಹಿಸಿದ್ದರು. ಅವನ್ನು ಓದಿ ನಾನು ಸಂತೋಷಿಸಿ ಸಂಪಾದಕರ ಕಡೆ ಕಳಿಸಿದೆ.

ಅದೇ ಗೌಡರ ಬರವಣಿಗೆಯ ಪ್ರಾರಂಭ ಎಂದು ನನ್ನ ಭಾವನೆ. ಮುಂದೆ ಅವರು ಬೇಕಾದಷ್ಟು ಬರೆದಿದ್ದಾರೆ; ಜನಪ್ರಿಯ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ನಮ್ಮಲ್ಲಿ ವೈಜ್ಞಾನಿಕ ವಿಷಯಗಳನ್ನು ಕುರಿತು ಬರೆಯುವವರು ಕಡಿಮೆ. ಅದರಲ್ಲೂ ಇಂಜಿನಿಯರಿಂಗ್, ವೈದ್ಯಕೀಯ ವಿಷಯಗಳ ಬಗೆಗೆ ಬರೆಯುವವರು ಇನ್ನೂ ಕಡಿಮೆ. ವೈದ್ಯಕೀಯ ವಿಷಯಗಳ ಲೇಖಕರ ಸಮ್ಮೇಳನಗಳೇ ವ್ಯವಸ್ಥೆಗೊಳ್ಳುತ್ತಿದ್ದರೂ, ಲೇಖಕರ ಸಂಖ್ಯೆ ಒಟ್ಟಾರೆ ಕಡಿಮೆ ಎಂದೇ ನನ್ನ ಭಾವನೆ. ಇಂಥ ವಿರಳ ಲೇಖಕರಲ್ಲಿ ಡಾ|| ಚಂದ್ರಪ್ಪಗೌಡರು ಒಬ್ಬರು. ಅವರು ಹಲವಾರು ಲೇಖನಗಳನ್ನೂ ಕೆಲವು ಪುಸ್ತಕಗಳನ್ನೂ ಪ್ರಕಟಿಸಿದ್ದಾರೆ. ಇಂಥ ಕ್ಷೇತ್ರಗಳಲ್ಲಿನ ಒಂದು ಅಗತ್ಯ ಎಂದರೆ ಲೇಖಕರಿಗೆ ವಿಷಯಜ್ಞಾನ ಚೆನ್ನಾಗಿರಬೇಕು; ಒಳ್ಳೆಯ ಬರವಣಿಗೆ ದಕ್ಕಿರಬೆಕು. ಆದರೆ

ವಿಷಯ ಬಲ್ಲ ಎಷ್ಟೋ ಜನರಿಗೆ ಬರವಣಿಗೆ ಇಲ್ಲ; ಬರೆಯಬಲ್ಲ ಹಲವರ ವಿಷಯ ಜ್ಞಾನ ಪ್ರಶ್ನಾರ್ಥಕವಾಗಿರುತ್ತದೆ. ಎರಡೂ ಸೇರಿರುವಂಥವರು ತೀರಾ ವಿರಳ.

ಚಂದ್ರಪ್ಪಗೌಡರು ತಮ್ಮ ಅನುಭವ, ಅಧ್ಯಯನಗಳಿಂದ ಸಾಕಷ್ಟನ್ನು ತಿಳಿದಿದ್ದಾರೆ; ಬರೆಯಬಲ್ಲ ಶಕ್ತಿಯನ್ನೂ ಸಂಪಾದಿಸಿದ್ದಾರೆ. ಕಳೆದ ವರ್ಷ ಯಾವುದೋ ಒಂದು ಕಾರ್ಯಕ್ರಮಕ್ಕಾಗಿ ಶಿವಮೊಗ್ಗೆಗೆ ಹೋಗಿದ್ದಾಗ ಡಾ|| ಚಂದ್ರಪ್ಪಗೌಡರು ತಾವು ಡಾ|| ಆಲ್ಬರ್ಟ್ ಶ್ವೈಯಿಟ್ಸರ್ ಅವರ ಜೀವನ ಚರಿತ್ರೆಯೊಂದನ್ನು ಬರೆದಿರುವುದಾಗಿಯೂ, ಅದಕ್ಕೆ ಮುನ್ನುಡಿಯ ನಾಲ್ಕು ಮಾತುಗಳನ್ನು ಬರೆದುಕೊಡಬೇಕೆಂದೂ ವಿಶ್ವಾಸಪೂರ್ವಕವಾಗಿ ಕೇಳಿದರು. ನಾನು ಒಪ್ಪಿಕೊಂಡೆ. ಬಾಲ್ಯದ ಸ್ನೇಹಿತರೊಬ್ಬರ, ಅದರಲ್ಲೂ ಸಾಹಿತ್ಯರಂಗಕ್ಕೆ ನೇರವಾಗಿ ಸೇರಿದವರ, ಕನ್ನಡದ ಬೆಳವಣಿಗೆಗೆ ಅಗತ್ಯವಾದ ಬರವಣಿಗೆಯನ್ನು ಕೈಗೊಂಡು ಶ್ರಮಿಸುತ್ತಿರುವವರ ಪುಸ್ತಕವೊಂದಕ್ಕೆ ಮೆಚ್ಚುಗೆಯ ನಾಲ್ಕು ಮಾತು ಬರೆಯುವುದು ಸಂತೋಷದ ಸಂಗತಿ ಮಾತ್ರವಲ್ಲ, ಕನ್ನಡ ಭಾಷೆಯ ಬಹುಮುಖ ಅಭಿವೃದ್ಧಿಯನ್ನು ಹಂಬಲಿಸುವ ನನ್ನಂಥವರಿಗೆ ಅದೊಂದು ಕರ್ತವ್ಯವೂ ಹೌದು. ಆದ್ದರಿಂದಲೇ ನಾನು ಈ ಕೆಲವು ಮಾತುಗಳನ್ನು ಬರೆಯುತ್ತಿದ್ದೇನೆ; ಮೆಚ್ಚುಗೆಯನ್ನು ಸೂಚಿಸುತ್ತಿದ್ದೇನೆ.

ಈ ಶತಮಾನದ ಮಹಾ ವಿಜ್ಞಾನಿಗಳಲ್ಲಿ ಒಬ್ಬರಾದ ಡಾ|| ಆಲ್ಬರ್ಟ್ ಐನ್‌ಸ್ಟೀನರನ್ನು ಯಾರೋ ಕೇಳಿದರಂತೆ : ''ಈ ಶತಮಾನದ ಅತ್ಯಂತ ಶ್ರೇಷ್ಠ ವ್ಯಕ್ತಿಗಳು ಯಾರು ?'' ಅದಕ್ಕೆ ಐನ್‌ಸ್ಟೀನ್ ಮರುಪ್ರಶ್ನೆ ಹಾಕಿದರಂತೆ : ''ಮಹಾತ್ಮಾ ಗಾಂಧಿ ಮತ್ತು ಆಲ್ಬರ್ಟ್ ಶ್ವೈಯಿಟ್ಸರ್ ಅಲ್ಲದೆ ಇನ್ನು ಯಾರು ?'' ಈ ಮಾತೇ ಸಾಕು, ಶ್ವೈಯಿಟ್ಸರ್ ಎಷ್ಟು ದೊಡ್ಡವರು ಎಂದು ಹೇಳುವುದಕ್ಕೆ. ಕಗ್ಗತ್ತಲೆಯ ಆಫ್ರಿಕದಲ್ಲಿ ಪ್ರಜ್ವಲಿಸುತ್ತಿರುವ ಸೂರ್ಯ ಎಂದು ವರ್ಣಿತರಾಗಿರುವ ವ್ಯಕ್ತಿ; ಗಾಂಧಿಯವರಂತೆಯೇ ಮಾನವೀಯತೆಯನ್ನು ಪ್ರತಿಪಾದಿಸಿದ, ಅನುಷ್ಠಾನಗೊಳಿಸಿದ ಮಹಾನುಭಾವ. ''ದುಃಖ ತುಂಬಿದ ಈ ಜಗತ್ತಿನಲ್ಲಿ ಒಬ್ಬ ಮಹಾತ್ಮನಿದ್ದಾನೆ'' ಎಂದು ಐನ್‌ಸ್ಟೀನ್ ಹೇಳಿದರು. ದುಃಖವನ್ನು ಸಂಪೂರ್ಣವಾಗಿ ತೊಡೆದುಹಾಕುವುದು ಯಾರಿಂದಲೂ ಸಾಧ್ಯವಿಲ್ಲ. ಆದರೆ ಸಾಧ್ಯವಾದಷ್ಟೂ, ದುಃಖವನ್ನು ಕಡಿಮೆ ಮಾಡುವವರು ಕೆಲವರಾದರೂ ಇದ್ದಾರೆ. ಅವರಲ್ಲಿ ಶ್ವೈಯಿಟ್ಸರ್ ಅತಿ ಗಣ್ಯ. ಇಂಥವರೇ ಬದುಕಿಗೆ ಆಸೆಯನ್ನೂ, ಭರವಸೆಯನ್ನೂ ನೀಡಬಲ್ಲವರು. ದುಃಖಮಯ ಜೀವನ ಅಷ್ಟೋ ಇಷ್ಟೋ ಸಹನೀಯವಾಗಿರುವುದು ಕೂಡ ಇಂಥವರಿಂದಲೇ.

ಶ್ವೈಯಿಟ್ಸರ್ ಜೀವನ ಸಾಧನೆಗಳು ಅದ್ಭುತವಾದವು. ಅವನ ಜೀವನ ಆಸಕ್ತಿಗಳು ನಾಲ್ಕು ಮುಖದವು. ವೈದ್ಯಕೀಯ ಶಾಸ್ತ್ರ, ತತ್ವಶಾಸ್ತ್ರ, ಧರ್ಮಶಾಸ್ತ್ರ ಮತ್ತು ಸಂಗೀತ ಕ್ಷೇತ್ರಗಳಲ್ಲಿ ಅವನು ಸಾಕಷ್ಟು ಕೆಲಸ ಮಾಡಿ ಹೆಸರುಗಳಿಸಿ ಜನಪ್ರಿಯನಾಗಿದ್ದ.

ಮೂರು ಕ್ಷೇತ್ರಗಳಲ್ಲಿ ಅವನು 'ಡಾಕ್ಟರ್' ಗೌರವವನ್ನು ಗಳಿಸಿದ್ದ; ತನ್ನ ಜೀವನಕ್ಕೆ ಅವನು ಯಾವುದೇ ಒಂದು ಕ್ಷೇತ್ರವನ್ನು ಅವಲಂಬಿಸಿದ್ದರೂ ಸಾಕಾಗಿತ್ತು. ಆದರೆ ಹಣ ಗಳಿಸುವುದರಲ್ಲಿ ಅವನಿಗೆ ಆಸಕ್ತಿಯಿರಲಿಲ್ಲ. 'ಸೇವೆ' ಎನ್ನುವುದು ಅವನ ಜೀವನದ ಉಸಿರಾಗಿತ್ತು; ಧ್ಯೇಯವಾಗಿತ್ತು. ಮನುಷ್ಯನ ನೋವಿನಲ್ಲಿ ಪಾಲುಗಾರ ನಾಗುವುದು ತನ್ನ ಕರ್ತವ್ಯವೆಂದು ಅವನು ಭಾವಿಸಿದ್ದ. ಅದಕ್ಕಾಗಿಯೇ ಅವನು ನೋವು ಕಳೆಯುವ ಡಾಕ್ಟರನಾದ !

ಮನುಷ್ಯನ ನೋವು ಪರಿಹಾರವಾಗಬೇಕೆಂದು ಅಪೇಕ್ಷಿಸುವವರು ಅನೇಕರು ಇದ್ದಾರೆ. ಅದರಲ್ಲಿ ಪಾಲುಗೊಳ್ಳುವವರು ಮಾತ್ರ ತೀರಾ ವಿರಳ. ಇಲ್ಲೇ ಶ್ವೈಯಿಟ್ಸರ್‌ನ ಮಹತ್ವದ ಗುಟ್ಟು ಇದೆ. ಅವನು ಮೂಕ ಪ್ರೇಕ್ಷಕನಲ್ಲ; ತತ್ವ, ಧ್ಯಾನ, ಚಿಂತನೆಗಳ ಮದ್ದು ಹೇಳುವವನಲ್ಲ; ಅವನೊಬ್ಬ ಭಾಗಿ; ಇದೇ ಅವನ ಹಿರಿಮೆ, ಇದರಿಂದಲೇ ಅವನೊಬ್ಬ ಪುರಾಣಪುರುಷನೆನ್ನಿಸಿದ. ಈ ಸೇವಾನಿಷ್ಠ, ತ್ಯಾಗಶೀಲ ವ್ಯಕ್ತಿತ್ವದ ಸುತ್ತ ವಾದ ವಿವಾದಗಳು ಹೆಣೆದುಕೊಂಡದ್ದೂ ಉಂಟು; ಅವನು ತೀರಿಕೊಂಡಾಗ ತೊಂಬತ್ತೊಂದು ವರ್ಷ ವಯಸ್ಸಾಗಿತ್ತು. ಅದಕ್ಕಿಂತ ಎರಡು ದಶಕಗಳ ಮೊದಲೇ ಅವನು 'ಟೈಮ್' ನಿಯತಕಾಲಿಕದ ಮುಖಪುಟದ ಮೇಲೆ ಕಾಣಿಸಿಕೊಂಡು 'ಜಗತ್ತಿನ ಬಹುದೊಡ್ಡ ವ್ಯಕ್ತಿ' ಎಂಬ ಪ್ರಶಂಸೆಗೂ ಪಾತ್ರನಾದ. ವಿಚಿತ್ರವೆಂದರೆ ಅವನ ಕೆಲಸ ನಾನಾ ಅನುಮಾನಗಳಿಗೂ ಆಸ್ಪದ ಮಾಡಿಕೊಟ್ಟಿತು ! ಯಾರು ಏನೇ ಹೇಳಿದರೂ, ಅವನು ಮಾಡಿದ ಕೆಲಸ ಎದುರಿಗೇ ಇದ್ದುದರಿಂದ ಅದನ್ನು ತಪ್ಪಾಗಿ ನೋಡುವುದು ಔದಾರ್ಯರಹಿತ ವರ್ತನೆಯಾಗಿತ್ತು.

ಅಜ್ಞಾನ, ಬಡತನ ಮತ್ತು ರೋಗ ರುಜಿನಗಳಿಂದ ನರಳುತ್ತಿದ್ದ ಆಫ್ರಿಕೆಯ ಜನರಿಗೆ ತನ್ನ ಕೈಲಾದ ಮಟ್ಟಿಗೆ ನೆರವಾಗಬೇಕೆಂಬುದು ಶ್ವೈಯಿಟ್ಸರನ ಮೂಲ ಉದ್ದೇಶ ವಾಗಿತ್ತು. ಈ ಉದ್ದೇಶವನ್ನು ಈಡೇರಿಸಲು ಅವನು ತೆಗೆದುಕೊಂಡ ಕ್ರಮ ತುಂಬ ಅನಿರೀಕ್ಷಿತವಾದದ್ದು ಹಾಗೂ ನಾಟಕೀಯವೆನಿಸುವಂಥದು. ತನ್ನ ಅಧ್ಯಯನವನ್ನೆಲ್ಲ ಮುಗಿಸಿ ಜೀವನದಲ್ಲಿ ಕಂಡುಕೊಳ್ಳಬೇಕಾಗಿದ್ದ ಹಾದಿಯನ್ನು ನಿರ್ಧರಿಸುವ ಸಮಯದಲ್ಲಿ ಅವನು ಆಫ್ರಿಕಾಕ್ಕೆ ಹೋಗುವ ನಿರ್ಧಾರ ಮಾಡಿದ. ಅದಕ್ಕಾಗಿಯೇ ಅವನು ವೈದ್ಯಕೀಯ ಕಾಲೇಜಿನ ವಿದ್ಯಾರ್ಥಿಯಾಗಿ ಅಧ್ಯಯನ ಮಾಡಿ, ಪದವಿ ಪಡೆದುಕೊಂಡ ! ಆಫ್ರಿಕಾದ ಒಂದು ಪುಟ್ಟ ಹಳ್ಳಿಗೆ ಹೋಗಿ ಧರ್ಮಾರ್ಥ ಆಸ್ಪತ್ರೆಯೊಂದನ್ನು ಸ್ಥಾಪಿಸಿ ತನ್ನ ಸೇವಾಕಾರ್ಯವನ್ನು ಆರಂಭಿಸಿದ. ವ್ಯಕ್ತಿಯೊಬ್ಬ ಸಂಸ್ಥೆಯಾದ. ಮುಂದಿನದೆಲ್ಲ ಪವಾಡಸದೃಶ ! ಅವನ ಹೆಸರು ಜಗತ್ತಿನಾದ್ಯಂತ ಮನೆ ಮಾತಾಯಿತು. ಶ್ವೈಯಿಟ್ಸರ್ 'ಸೇವೆ'ಗೆ ಇನ್ನೊಂದು ಹೆಸರಾದ.

ತನ್ನ ಮೂವತ್ತನೇ ವಯಸ್ಸಿಗೂ ಮೊದಲೇ, ತತ್ವಶಾಸ್ತ್ರ, ಧರ್ಮಶಾಸ್ತ್ರ ಮತ್ತು

ಸಂಗೀತಗಳಲ್ಲಿ ಅಂತರರಾಷ್ಟ್ರೀಯ ಮಾನ್ಯತೆ ಪಡೆದಿದ್ದ ಶ್ವೈಯಿಟ್ಸರ್ ಅವುಗಳಲ್ಲಿನ ತನ್ನ ಆಸಕ್ತಿಯನ್ನು ಎಂದೂ ಕಳೆದುಕೊಳ್ಳಲಿಲ್ಲ. ಆದರೆ ಅವನ ಸೇವಾವ್ರತ ಲೋಕದ ಗಮನ ಸೆಳೆಯಿತು. ಅದರಿಂದಲೇ ನೊಬೆಲ್ ಶಾಂತಿ ಪ್ರಶಸ್ತಿಯನ್ನೂ ಪಡೆಯುವಂತಾಯಿತು. ಅವನು ಮನುಕುಲದ ಮನಸ್ಸಾಕ್ಷಿಯ ರಕ್ಷಕರಲ್ಲಿ ಒಬ್ಬನೆನ್ನಿಸಿದ್ದ. ಅವನಿಗೆ ತನ್ನ ಉದ್ದೇಶದ ಸಫಲತೆ ಮುಖ್ಯವಾಗಿತ್ತೇ ಹೊರತು ಕೀರ್ತಿ ಪ್ರಶಸ್ತಿಗಳಲ್ಲ. ಒಂದು ದಿನ ಅವನು ತನ್ನ ಆಸ್ಪತ್ರೆಯ ಛಾವಣಿ ದುರಸ್ತಿಯಲ್ಲಿ ತೊಡಗಿದ್ದಾಗ ಅಪರಿಚಿತನೊಬ್ಬ ಬಂದ. ತಾನು ಸ್ಟಾಕ್‌ಹೋಂನಿಂದ ಬರುತ್ತಿರುವುದಾಗಿ ತನ್ನ ಪರಿಚಯ ಹೇಳತೊಡಗಿದ. ಶ್ವೈಯಿಟ್ಸರ್ ಆ ಆಗಂತುಕನ ಮಾತನ್ನು ತಡೆದು ''ಒಳ್ಳೆಯ ಸಮಯಕ್ಕೆ ಬಂದೆ, ಇರಲಿ. ಹೀಗೆ ಬಂದು ಈ ತಗಡಿನ ತುದಿಯನ್ನು ಒತ್ತಿ ಹಿಡಿದುಕೋ'' ಎಂದ! ಬಂದವನು ಒಂದು ಕ್ಷಣ ಅವಾಕ್ಕಾದ. ಆದರೂ ಶ್ವೈಯಿಟ್ಸರ್ ಹೇಳಿದ ಕೆಲಸ ಮಾಡಿದ. ಬಂದವನು ನೊಬೆಲ್ ಪಾರಿತೋಷಕ ಸಮಿತಿಯ ಪ್ರತಿನಿಧಿಯಾಗಿದ್ದ; ಶ್ವೈಯಿಟ್ಸರ್‌ನಿಗಾಗಿ ಅವನು ಒಳ್ಳೆಯ ಸುದ್ದಿಯನ್ನೂ ತಂದಿದ್ದ; ಆದರೇನು ? ಶ್ವೈಯಿಟ್ಸರ್ ಅದರಲ್ಲಿ ವಿಶೇಷ ಆಸಕ್ತನಾಗಿರಲಿಲ್ಲ; ತನ್ನ ಕೆಲಸ ಮುಗಿಸುವುದು ಅವನಿಗೆ ಮುಖ್ಯವಾಗಿತ್ತು. ಆ ಘಳಿಗೆಯಲ್ಲಿ ಅವನು ಹೇಳಿದ್ದು: ''ಬಹುಮಾನ ಬಂದದ್ದು ಸಂತೋಷ. ಕುಷ್ಠರೋಗಿಗಳ ವಸಾಹತಿನ ನಿರ್ಮಾಣಕ್ಕೆ ಹಣದ ಅಗತ್ಯವಿದೆ; ಬಹುಮಾನ ಸ್ವೀಕರಿಸಲು ನಾನು ಬರಲಾರೆ; ಕೈತುಂಬ ಕೆಲಸವಿದೆ.'' ಈ ಪ್ರಸಂಗ ಶ್ವೈಯಿಟ್ಸರನ ಜೀವನದ ಬಗೆಯನ್ನೇ ಸಂಕೇತಿಸುತ್ತದೆ.

ಆಲ್ಬರ್ಟ್ ಶ್ವೈಯಿಟ್ಸರ್ ಒಬ್ಬ ಆಧುನಿಕ ಋಷಿ. ಸೇವೆಯನ್ನೇ ತನ್ನ ತಪಸ್ಸನ್ನಾಗಿ ಒಪ್ಪಿಕೊಂಡಿದ್ದ. ಅವನು ದಯಾಮಯನೂ, ಕರುಣಾಸಾಗರನೂ ಆಗಿದ್ದ. ಮನುಷ್ಯರನ್ನಷ್ಟೇ ಅಲ್ಲ ಪಶು-ಪಕ್ಷಿಗಳನ್ನೂ ಅವನು ಪ್ರೀತಿಸುತ್ತಿದ್ದ; ಅವುಗಳ ಸೇವೆಯನ್ನೂ ಮಾಡುತ್ತಿದ್ದ. ಗಾಯಗೊಂಡಿದ್ದ ಪೆಲಿಕಾನ್ ಪಕ್ಷಿಯೊಂದನ್ನು ಅವನೊಮ್ಮೆ ಹೊಲಿಗೆ ಹಾಕಿ ಉಪಚರಿಸಿ ಕಾಡಿಗೆ ಬಿಟ್ಟಿದ್ದ. ಆದರೆ ಅದು ಅವನನ್ನು ಬಿಡಲು ಸಿದ್ಧವಾಗಿರಲಿಲ್ಲ; ತನ್ನ ಸಂಗಾತಿಯೊಡನೆ ಅದು ಆಗಾಗ ಆಸ್ಪತ್ರೆಗೆ ಬಂದು ಇದ್ದು ಹೋಗುತ್ತಿತ್ತಂತೆ. ಶ್ವೈಯಿಟ್ಸರನ ಜೀವನದಲ್ಲಿ ಇಂಥ ಪ್ರಸಂಗಗಳು ಎಷ್ಟೋ.

ಸಾಮಾನ್ಯ ಮನುಷ್ಯನಾಗಿದ್ದುಕೊಂಡು ಅಸಾಮಾನ್ಯ ಕೆಲಸ ಮಾಡಿಹೋದ ಶ್ವೈಯಿಟ್ಸರನ ಬಗೆಗೆ ಕನ್ನಡದಲ್ಲಿ ಇದುವರೆಗೆ ಇಷ್ಟು ದೊಡ್ಡ ಪುಸ್ತಕ ಪ್ರಕಟವಾಗಿರಲಿಲ್ಲ. ಎರಡು ಮೂರು ಲೇಖನಗಳೂ, ಒಂದೆರಡು ಕಿರುಪುಸ್ತಿಕೆಗಳೂ ಪ್ರಕಟವಾಗಿದ್ದಂತೆ ನೆನಪು. ಆ ಮಹಾ ಜೀವನ, ವ್ಯಕ್ತಿತ್ವಗಳಿಗೆ ಇವು ಏನೂ ಸಾಲದು. ಒಂದು ಜೀವನ ವಿಧಾನವನ್ನೇ ಸೃಷ್ಟಿಸಿ ಹೋದ ಶ್ವೈಯಿಟ್ಸರನ ಈ ಪೂರ್ಣ ಪ್ರಮಾಣದ ಜೀವನ ಚರಿತ್ರೆಯನ್ನು ಬರೆದು ಡಾ॥ ಚಂದ್ರಪ್ಪಗೌಡರು ದೊಡ್ಡ ಉಪಕಾರ ಮಾಡಿದ್ದಾರೆ.

ಶ್ವೈಯಿಟ್ಸರನ ಜೀವನ ಆರದ ಬೆಳಕು. ಆ ಬೆಳಕಿನ್ನಿಂದ ಯಾರೂ ತಮ್ಮ ಬದುಕಿನ ಹಾದಿಯನ್ನು ಕಂಡುಕೊಳ್ಳಬಹುದು. ಇಂಥದೊಂದು ಶ್ರೇಷ್ಠ ಬದುಕಿನ ಕಥೆ ತಡವಾಗಿ ಯಾದರೂ ಕನ್ನಡದಲ್ಲಿ ಪ್ರಕಟವಾಗುತ್ತಿರುವುದು ಸಂತೋಷದ ಸಂಗತಿ. ಜೀವನವನ್ನು ರೂಪಿಸುವುದರಲ್ಲಿ ಜೀವನ ಚರಿತ್ರೆಗಳು ಮಹತ್ವದ ಪಾತ್ರವಹಿಸುತ್ತವೆ. ಕನ್ನಡದ ತರುಣ ಓದುಗರಿಗೆ ಇಲ್ಲಿ ಒಂದು ಆದರ್ಶಪ್ರಾಯವಾದ ಜೀವನದ ಕಥೆಯಿದೆ.

ಡಾ|| ಚಂದ್ರಪ್ಪಗೌಡರು ಶ್ವೈಯಿಟ್ಸರನ ಆತ್ಮಕಥೆಯನ್ನೂ ಅನೇಕ ಜೀವನ ಚರಿತ್ರೆಗಳನ್ನೂ ಆಳವಾಗಿ ಅಧ್ಯಯನ ಮಾಡಿ ಈ ಕೃತಿಯನ್ನು ರಚಿಸಿದ್ದಾರೆ. ಅವರು ಈ ರಚನೆಯಲ್ಲಿ ಜೇಮ್ಸ್ ಬ್ರಾಬರ್ಝೋನನ 'ಆಲ್ಬರ್ಟ್ ಶ್ವೈಯಿಟ್ಸರ್' ಎಂಬ ಪುಸ್ತಕವನ್ನು ಹೆಚ್ಚಾಗಿ ಆಧರಿಸಿರುವಂತೆ ತೋರುತ್ತದೆ. ಅದು ಶ್ವೈಯಿಟ್ಸರನ ಬದುಕನ್ನು ಸಮಗ್ರವಾಗಿಯೂ, ವಿವರವಾಗಿಯೂ ಚಿತ್ರಿಸಿದೆ. ಅಲ್ಲಿ ಸಂಗ್ರಹಗೊಂಡಿರುವ ಸಾಮಗ್ರಿ ಆಶ್ಚರ್ಯಗೊಳಿಸುವಷ್ಟರಮಟ್ಟಿಗೆ ಹೇರಳವಾಗಿದೆ. ಇಂಥ ಬೃಹತ್ತಾದ ಆಕರಗಳನ್ನು ನಮ್ಮ ಅಗತ್ಯಕ್ಕೆ ತಕ್ಕಂತೆ ಬಳಸಿಕೊಳ್ಳುವುದು ಸುಲಭವಲ್ಲ. ಅದಕ್ಕೆ ಜಾಣ್ಮೆ ಬೇಕು. ಇದರಲ್ಲಿ ಡಾ|| ಚಂದ್ರಪ್ಪಗೌಡರು ಸಫಲರಾಗಿದ್ದಾರೆಂದು ನನ್ನ ಭಾವನೆ.

ಈ ಜೀವನ ಚರಿತ್ರೆಯ ನಿರೂಪಣೆ ಸ್ವಾರಸ್ಯವಾಗಿದೆ. ಕುತೂಹಲಕಾರಿ ಯಾಗಿದೆ. ಇದನ್ನು ಓದುವಾಗ ಯಾವುದೋ ಕಥೆಯನ್ನೋ, ಕಾದಂಬರಿಯನ್ನೋ, ಓದುತ್ತಿದ್ದೇವೆಂಬ ಭಾವನೆ ಬಂದರೆ ಆಶ್ಚರ್ಯವಲ್ಲ. ಶ್ವೈಯಿಟ್ಸರ್ ಅವರಂಥವರ ಜೀವನ ಪ್ರಸಂಗಗಳು ಯಾವ ಕಥೆ ಕಾದಂಬರಿಗಳಿಗೂ ಕಡಿಮೆಯಲ್ಲ. ಡಾ|| ಗೌಡರು ಇದನ್ನು ಬಲ್ಲವರು. ಆದ್ದರಿಂದಲೇ ಅವರ ಆಯ್ಕೆಯಲ್ಲಿ ಸ್ವಾರಸ್ಯ ಉಕ್ಕುತ್ತದೆ. ಜೀವನ ಚರಿತ್ರೆಗಳನ್ನು ಬರೆಯುವವರು, ಬಹು ಸಂದರ್ಭದಲ್ಲಿ, ತಮ್ಮ ನಾಯಕನ ಬೆನ್ನುಹಿಂದೆ ಕಣ್ಣಪಟ್ಟಿ ಕಟ್ಟಿಕೊಂಡು ಓಡುತ್ತಾರೆ. ಡಾ|| ಚಂದ್ರಪ್ಪಗೌಡರು ಹಾಗೆ ಮಾಡಿಲ್ಲ ಎನ್ನುವುದು ಸಂತೋಷದ ಸಂಗತಿ. ಒಂದು ಜೀವನ ಮತ್ತು ಅದರ ಸಾಧನೆ ಹೇಗೆ ರೂಪುಗೊಳ್ಳುತ್ತದೆಂಬುದೂ ಮುಖ್ಯವಾದ ಮಾತು. ಈ ರೂಪುಗೊಳ್ಳುವಿಕೆಯಲ್ಲಿ ತಿಳಿದೋ ತಿಳಿಯದೆಯೋ ನೂರಾರು ಕೈಗಳು, ಹೃದಯಗಳು, ಮನಸ್ಸುಗಳು ಭಾಗವಹಿಸಿರುತ್ತವೆ. ಇದೆಲ್ಲವೂ ಯಾವ ರೀತಿಯಲ್ಲಿ ಉಳಿ ಚಾಣಗಳ ಕೆಲಸ ಮಾಡಿ ನಾಯಕ ಮೂರ್ತಿಯನ್ನು ಕೆತ್ತಿ ನಿಲ್ಲಿಸುತ್ತವೆಂಬುದನ್ನು ಸಮರ್ಥರು ಮಾತ್ರ ಗ್ರಹಿಸುತ್ತಾರೆ. ಈ ಗ್ರಹಿಕೆಯನ್ನು ನಾವು ಪ್ರಸ್ತುತ ಕೃತಿಯಲ್ಲಿ ಸ್ಪಷ್ಟವಾಗಿ ಕಾಣಬಹುದು.

ಈ ಜೀವನ ಚರಿತ್ರೆಯಲ್ಲಿ ಎಲ್ಲೋ ಒಂದು ಕಡೆ ಶ್ವೈಯಿಟ್ಸರನ ಮಾತೇ ಬಂದಿದೆ: ''ಭೂಗರ್ಭದಲ್ಲಿ ಹರಿಯುವ ನೀರೇ ಮೇಲೆ ಬುಗ್ಗೆಯಾಗಿ ಬಂದದ್ದನ್ನು ನೋಡಿದಾಗ ನಮಗೆ ಸಂತೋಷವಾಗುವುದು ಸಹಜವೇ. ನಾವೂ ಹಾಗೆ ಭೂಮಿಯೊಳ

ಗಡೆಯಿಂದ ಬುಗ್ಗೆಯಾಗಿ ಬಂದು ಇತರರ ಬಾಯಾರಿಕೆಯನ್ನು ಹೋಗಲಾಡಿಸುವಂತಾಗಬೇಕು.'' ಶ್ವೈಯಿಟ್ಸರನ ಜೀವನದುದ್ದಕ್ಕೂ ಈ ಗುರಿಯ ಕಡೆಗೇ ತುಡಿಯುತ್ತಿದ್ದ ಏನ. ಡಾ॥ ಚಂದ್ರಪ್ಪಗೌಡರು ಇಲ್ಲಿ ಇಂಥದೊಂದು ಜೀವನವನ್ನು ನಮಗೆ ಪರಿಚಯಿಸಿಕೊಟ್ಟಿದ್ದಾರೆ. ಈ ಕೆಲಸದಲ್ಲಿ ಅವರು ವೈಯಕ್ತಿಕ ಪ್ರೀತಿ, ಗೌರವಗಳನ್ನಿರಿಸಿಕೊಂಡಿರುವುದರಿಂದ ಬರವಣಿಗೆಯಲ್ಲಿ ಒಂದು ಬಗೆಯ ಆತ್ಮೀಯತೆಯ ಸ್ಪರ್ಶವಿದೆ. ಈ ಬರವಣಿಗೆ ವಿಭೂತಿಪೂಜೆ. ಇದಕ್ಕಾಗಿ ನಾನು ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಅವರಿಗೆ ಎಲ್ಲ ಬಗೆಯ ಶುಭಗಳನ್ನೂ ಕೋರಿ, ಅವರ ಬರಲಿರುವ ಕೃತಿಗಳನ್ನು ಆಸೆ ಭರವಸೆಗಳಿಂದ ನಿರೀಕ್ಷಿಸುತ್ತೇನೆ.

ಮಾರ್ಚ್ ೧, ೧೯೯೦ — **ಹಾ. ಮಾ. ನಾಯಕ**
'ಗೋಧೂಳಿ'
ಜಯಲಕ್ಷ್ಮೀಪುರಂ
ಮೈಸೂರು - ೫೭೦ ೦೧೨

* * *

## ಎರಡನೇ ಮುದ್ರಣಕ್ಕೆ ಮುನ್ನುಡಿ

ಮನೋಹರ ಗ್ರಂಥಮಾಲಾ ಧಾರವಾಡದವರಿಂದ ೧೯೯೦ರಲ್ಲಿ ಪ್ರಕಟವಾದ ಈ ಕೃತಿ ಜನಪ್ರಿಯವೂ ಆಗಿತ್ತು. ಮರುಮುದ್ರಣದ ಬಗೆಗೆ ಬೇಡಿಕೆಗಳಿದ್ದರೂ ಹಲವು ಕಾರಣಗಳಿಂದ ಸಾಧ್ಯವಾಗಿರಲಿಲ್ಲ. ಕುವೆಂಪು ವಿಶ್ವವಿದ್ಯಾನಿಲಯದವರು ಮುಂದೆ ಎರಡು ವರ್ಷಗಳ ಅವಧಿಗೆ ಬಿ.ಎ.; ಬಿ.ಎಸ್ಸಿ ; ತರಗತಿಗಳಿಗೆ ಅವಿಸ್ತರ ಪಠ್ಯಪುಸ್ತಕವನ್ನಾಗಿ ನಿಗದಿಪಡಿಸಿದ್ದರಿಂದ ಈ ಆವೃತ್ತಿ ಹೊರಬರುತ್ತಿರುವುದು ಸಂತಸದ ವಿಷಯ.

ಪಠ್ಯಪುಸ್ತಕವಾಗಿ ಆಯ್ಕೆ ಮಾಡಲು ಸಹಕರಿಸಿದ ಪಠ್ಯಪುಸ್ತಕ ಸಮಿತಿಯವರಿಗೂ, ಕುವೆಂಪು ವಿಶ್ವವಿದ್ಯಾನಿಲಯದ ಅಧಿಕಾರ ವರ್ಗದವರಿಗೆಲ್ಲಾ ಈ ಬಗೆಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಪುಸ್ತಕವನ್ನು ಅಂದವಾಗಿ ಮುದ್ರಿಸಿ, ಅಚ್ಚುಕಟ್ಟಾಗಿ ಪ್ರಕಟಿಸಲು ಸಹಾಯ ಮಾಡಿದ ನವಕರ್ನಾಟಕ ಪ್ರಕಾಶನದ ಶ್ರೀ ಆರ್. ಎಸ್. ರಾಜಾರಾಮ್ ಮತ್ತು ಅವರ ಸಂಸ್ಥೆಯವರಿಗೆ ಆಭಾರಿಯಾಗಿದ್ದೇನೆ.

ಶಿವಮೊಗ್ಗ — **ಎಚ್. ಡಿ. ಚಂದ್ರಪ್ಪಗೌಡ**
೧೩-೫-೨೦೦೦

# ೧. ಘೋರಾರಣ್ಯದಲ್ಲಿ ನಡು-ರಾತ್ರಿ ಸಂಗೀತ

ಘೋರಾರಣ್ಯದ ನಡುವೆ ಮರಗಿಡಗಳಿಂದ ತೆರಪಾದ ಪ್ರದೇಶ; ಭೋರ್ಗರೆದು ಹರಿಯುವ ನದಿಯ ಆರ್ಭಟದ ಶಬ್ದ ಒಂದು ಕಡೆ; ಕಿವಿಗೊಟ್ಟು ಆಲಿಸಿದರೆ ಇಂಪಾದ ಸಂಗೀತ, ಮಂದ ಬೆಳಕಿನ ಕುಟೀರ ಒಂದರಿಂದ ತೇಲಿಬರುತ್ತದೆ; ಕಾಡಿನ ಕಡೆ ಕಿವಿ ತಿರುಗಿಸಿದರೆ ಮೃಗಪಕ್ಷಿಗಳ ನಡಿಗೆ ಹಾರಾಟದ ಸಪ್ಪಳ, ಕೆಲಸಾರಿ ಆರಾರ್ಭಟದ ಕೂಗಾಟ ಕೂಡ.

ಕಾಡಿನ ಈ ಪ್ರದೇಶದಲ್ಲಿ ಹಲವಾರು ಗುಡಿಸಿಲಿನಂಥ ಕಟ್ಟಡಗಳಿವೆ. ನಡುರಾತ್ರಿಯ ಮಂಧ ಬೆಳಕು ಮತ್ತು ಪಿಯಾನೋ-ಸಂಗೀತದ ಉಲಿ ಕೇಳಿ ಬರುತ್ತಿರುವುದು ಅಂಥ ಗುಡಿಸಿಲೊಂದರಿಂದಲೇ. ಅದರೊಳಗೆ ಇಣಿಕಿ ನೋಡಿದರೆ ಮುಖ ಸುಕ್ಕುಗಟ್ಟಿದ, ಬಡಕಲು ದೇಹದ ಮುದುಕ ಪಿಯಾನೋ ನುಡಿಸುವುದರಲ್ಲಿ ತಲ್ಲೀನನಾಗಿದ್ದಾನೆ. ಹಗಲು-ರಾತ್ರಿಗಳ ವ್ಯತ್ಯಾಸದ ಅರಿವೇ ಅವನಿಗಿದ್ದಂತಿಲ್ಲ.

ಪಿಯಾನೋ ನುಡಿಸುವುದನ್ನು ಒಂದು ಕ್ಷಣ ನಿಲ್ಲಿಸಿ, ಅಲ್ಲೇ ಎದುರಿಗಿದ್ದ ರೇಡಿಯೋ ಸ್ವಿಚ್ಚನ್ನು ಆ ವೃದ್ಧ ತಿರುಗಿಸುತ್ತಾನೆ. ಗೊರಗೊರ ಶಬ್ದದಿಂದ ಆರಂಭವಾದ ರೇಡಿಯೋದಿಂದ ಇಂಗ್ಲಿಷ್ ಭಾಷಣ ಕೇಳಿಬರುತ್ತದೆ. ಆಕ್ಸ್‌ಫರ್ಡ್‌ನ ತತ್ವಜ್ಞಾನಿ ಡಾ॥ ನೆಥೇನಿಯಲ್ ಮಿಕ್ಲೆಮ್, ಲಂಡನ್‌ನ ಬಿ.ಬಿ.ಸಿ. ಬಾನುಲಿಯಿಂದ ಬಿತ್ತರಿಸುತ್ತಿದ್ದ ಭಾಷಣ ಅದು : 'ಐತಿಹಾಸಿಕ ಏಸುವಿನ ಅನ್ವೇಷಣೆ' ಎಂಬ ಗ್ರಂಥದ ವ್ಯಾಖ್ಯಾನ, ಭಾಷಣದ ವಿಷಯ. ರೇಡಿಯೋ ಸ್ವಲ್ಪ ಸಮಯ ಹಠಾತ್ತನೆ ಸ್ತಬ್ಧವಾಗುತ್ತದೆ. ಶಿಶುವೊಂದರ ಚೀರಾಟ ಹತ್ತಿರದ ಇನ್ನೊಂದು ಗುಡಿಸಿಲಿನಿಂದ ಕೇಳಿಬರುತ್ತದೆ. ಆಗತಾನೇ ಅವತರಿಸಿದ ಮಾನವ-ಜೀವಿಯೊಂದರ ಆಗಮನದ ಸಂಕೇತವದು. ರೇಡಿಯೋ ಮತ್ತೆ ಆರಂಭವಾಗುತ್ತದೆ. ಸೊಗಸಾದ ಆರ್ಗನ್ ಸಂಗೀತ ಬಿತ್ತರವಾಗುತ್ತದೆ.

ಬಿ.ಬಿ.ಸಿ. ಬಾನುಲಿಯ ಕಾರ್ಯಕ್ರಮ ಕೊನೆಗೊಳ್ಳುವ ಸೂಚನೆ: "ಶ್ರೋತೃಗಳೇ, ಕಾರ್ಯಕ್ರಮ ಈಗ ಕೊನೆಗೊಳ್ಳುವುದರಲ್ಲಿದೆ. ನಮ್ಮ ಕಾಲದ ಅತ್ಯಂತ ಶ್ರೇಷ್ಠ ಹಾಗೂ ಪ್ರತಿಭಾನ್ವಿತ ವ್ಯಕ್ತಿ ಡಾ॥ ಆಲ್ಬರ್ಟ್ ಶ್ವೆಯಿಟ್ಸರ್‌ರ ಎಪ್ಪತ್ತನೇ ಜನ್ಮದಿನದ ಗೌರವಾರ್ಥ ಕಾರ್ಯಕ್ರಮ ಇದೆಂಬುದು ನಿಮ್ಮ ನೆನಪಿನಲ್ಲಿ ಇರಲಿ. ದೂರದಧ ಆಫ್ರಿಕಾದ ಅರಣ್ಯದ ನಡುವೆ ಇರುವ ಅವರಿಗೂ ನಮ್ಮ ಈ ನಮನ ತಲುಪುತ್ತದೆಂದು ನಂಬಿದ್ದೇವೆ. ಸನ್ಮಾನ್ಯ ಡಾ॥ ಶ್ವೆಯಿಟ್ಸರ್‌ರವರೇ ನಿಮಗಿದೋ ನಮ್ಮ ಪ್ರಣಾಮಗಳು. ಜನ್ಮದಿನದ ಶುಭಾಶಯಗಳು."

ಹಣೆಯ ಮೇಲೆ ಮೂಡಿದ್ದ ಬೆವರಿನ ಹನಿಗಳನ್ನು ಮುದುಕ ಒರಸಿಕೊಳ್ಳುತ್ತಾನೆ. ರೇಡಿಯೋ ಸ್ಥಗಿತಗೊಳ್ಳುತ್ತದೆ. ಅವನಿಗೇ ಅಚ್ಚರಿಯಾಗುತ್ತದೆ. ಎಳೆಯ ವಯಸ್ಸಿನಲ್ಲಿ ತಾನೇ ಬರೆದ ''ಐತಿಹಾಸಿಕ ಏಸುವಿನ ಅನ್ವೇಷಣೆ'' (THE QUEST OF THE HISTORICAL JESUS) ಗ್ರಂಥದ ವಿಮರ್ಶೆ, ತಾನೇ ನುಡಿಸಿದ ಆರ್ಗನ್-ಸಂಗೀತದ ಧ್ವನಿ ಮುದ್ರಣ ರೇಡಿಯೋದಲ್ಲಿ ಕೇಳಿಸಿದ್ದು. ಕಾಲ ಎಷ್ಟು ಬೇಗ ಸರಿದು ಹೋಯಿತು ! ತನಗೀಗ ಎಪ್ಪತ್ತು ವರ್ಷಗಳಾದುವೆಂದರೆ ನಂಬುವುದು ಹೇಗೆ ? ಮಾಡಬೇಕಾದ ಕೆಲಸಗಳು ಇನ್ನೂ ರಾಶಿರಾಶಿಯಾಗಿವೆ. ಅದಿರಲಿ, ಈಗ ಜಾಗ್ರತೆ ಮಲಗಿ ಬೆಳಿಗ್ಗೆ ಮುಂಚೆ ಏಳಬೇಕಲ್ಲವೇ ? ರಾತ್ರಿ ಸೇರಿದ ಹರ್ನಿಯ ಕಾಯಿಲೆಯವನ ಪಾಡೇನಾಯಿತೆಂಬುದನ್ನು ಮೊದಲು ವಿಚಾರಿಸಬೇಕು......

ನಡುರಾತ್ರಿಯ ಈ ಪ್ರಸಂಗ ಜರುಗಿದ್ದು ಕಗ್ಗತ್ತಲೆಯ ಖಂಡ ಆಫ್ರಿಕಾದಲ್ಲಿ-ಭೂಮಧ್ಯರೇಖೆ ಹಾದು ಹೋಗುವ ಫ್ರೆಂಚ್ ವಸಾಹತಾಗಿದ್ದ ಗೇಬನ್ ಪ್ರಾಂತ್ಯದ ಘೋರಾರಣ್ಯದ ನಡುವೆ ತೆರಪಾದ ಜಾಗ ಲ್ಯಾಂಬರೀನೆಯಲ್ಲಿ; ೧೯೪೫ರಲ್ಲಿ ಜನವರಿ ತಿಂಗಳ ೧೪ರ ನಡುರಾತ್ರಿ. ತತ್ವಶಾಸ್ತ್ರ, ಧರ್ಮಶಾಸ್ತ್ರ ಮತ್ತು ಸಂಗೀತ ಕಲೆಯಲ್ಲಿ ಅಗಾಧ ಪಾಂಡಿತ್ಯಗಳಿಸಿ, ಸುಖ ಜೀವನದ ಹೊಸ್ತಿಲಿನಲ್ಲಿದ್ದ ಆಲ್ಬರ್ಟ್ ಶ್ವೆಯಿಟ್ಸರ್ ತನ್ನ ಜೀವನದ ಮಾರ್ಗವನ್ನೇ ಬದಲಾಯಿಸುತ್ತಾನೆ. ಆಫ್ರಿಕಾದ ನತದೃಷ್ಟ ಮೂಲನಿವಾಸಿಗಳ ಧಾರುಣ ಪರಿಸ್ಥಿತಿಯ ಅರಿವು ಉಂಟಾದಾಕ್ಷಣ ವೈದ್ಯನಾಗಿ ಅಲ್ಲಿಗೆ ಹೋಗುವ ನಿರ್ಧಾರಕ್ಕೆ ಬರುತ್ತಾನೆ. ಹಾಗೆ ಬಂದು ಲ್ಯಾಂಬರೀನೆಯಲ್ಲಿ ನೆಲಸಿದ್ದ ಡಾ॥ ಆಲ್ಬರ್ಟ್ ಶ್ವೆಯಿಟ್ಸರ್‌ನೇ ಆ ರಾತ್ರಿ ಪಿಯಾನೋ ನುಡಿಸುತ್ತಿದ್ದ ವಯೋವೃದ್ಧ.

ನಾಗರಿಕ ಜಗತ್ತಿನ ಸುಖಮಯ ಆಡಂಬರಗಳಿಂದ ದೂರವಿದ್ದು, ಆಫ್ರಿಕಾದ ಅನಾಗರಿಕರ ನಡುವೆ ತನ್ನ ಜೀವಮಾನವನ್ನೆಲ್ಲಾ ಸವೆಸಿದ ಈ ಮುದುಕನ ಮಹತ್ವವೆಷ್ಟಿರಬಹುದು ? ಈ ಶತಮಾನದ ಅತ್ಯಂತ ಶ್ರೇಷ್ಠ ವ್ಯಕ್ತಿಗಳಾರೆಂದು ಹೆಸರಾಂತ ವಿಜ್ಞಾನಿ ಡಾ॥ ಆಲ್ಬರ್ಟ್ ಐನ್‌ಸ್ಟೀನ್‌ರನ್ನು ಕೇಳಿದಾಗ ಮಹಾತ್ಮಾಗಾಂಧಿ ಮತ್ತು ಡಾ॥ ಆಲ್ಬರ್ಟ್ ಶ್ವೆಯಿಟ್ಸರ್‌ಗಳಲ್ಲದೆ ಮತ್ಯಾರು ಎಂದು ಮರುಪ್ರಶ್ನೆ ಹಾಕಿದರಂತೆ. ಅದೇ ರೀತಿ ಪ್ರಪಂಚದಲ್ಲೆಲ್ಲಾ ಗಣ್ಯರೆನಿಸಿದ ಕೆಲವು ಮಹಿಳೆಯರನ್ನು ಅವರಿಗೆ ಮೆಚ್ಚಿಗೆಯಾದ ಮುಖ ಯಾರದ್ದೆಂದಾಗ ಅವರೆಲ್ಲಾ ಆಲ್ಬರ್ಟ್ ಶ್ವೆಯಿಟ್ಸರ್ ಎಂದರಂತೆ ! ಸೌಂದರ್ಯದ ದೃಷ್ಟಿಯಿಂದಲ್ಲ, ಶ್ವೆಯಿಟ್ಸರ್ ಸಾಧಿಸಿದ ಮಹೋನ್ನತ ಕಾರ್ಯಗಳಿಂದಾಗಿ.

ಡಾ॥ ಶ್ವೆಯಿಟ್ಸರ್ ಈ ಕಾಲದ ಅತ್ಯಂತ ಹೆಸರಾದ ಮೆಡಿಕಲ್ ಮಿಷನರಿ, ''ಜೀವೋಪಾಸನೆ ತತ್ವ'' (REVERENCE FOR LIFE)ದ ಪ್ರತಿಪಾದಕ,

''ಮಹಾನ್ ಕ್ರಿಶ್ಚಿಯನ್'' ಎಂದೆಲ್ಲಾ ಪ್ರಸಿದ್ಧಿ ಪಡೆದ ಮಹಾನ್ ಚೇತನ. ಅವನ ವೈವಿಧ್ಯಮಯ ಜೀವನದ ಅಭ್ಯಾಸ ಮತ್ತು ಅನುಸರಣೆ ಈಗಿನ ಗೊಂದಲಮಯ ಪ್ರಪಂಚದಲ್ಲಿ ಜೀವಿಸುವ ನಮಗೆಲ್ಲಾ ದಾರಿದೀಪವಾಗಬಹುದು.

# ೨. ಬಾಲ್ಯ

ಮಾರ್ಟಿನ್ ಲೂಥರ್, ಕ್ರೈಸ್ತಮತ ಸುಧಾರಣೆಗಾಗಿ ಹದಿನಾರನೇ ಶತಮಾನದಲ್ಲಿ ನಡೆಸಿದ ಆಂದೋಲನದ ಪರಿಣಾಮಗಳು ಯುರೋಪಿನ ಹಲವಾರು ದೇಶಗಳಲ್ಲಿ ಇನ್ನೂ ತಹಬಂದಿಗೆ ಬಂದಿರದ ಕಾಲ. ಸ್ವಿಟ್ಸರ್‌ಲ್ಯಾಂಡಿನಲ್ಲಂತೂ ಮೂವತ್ತು ವರ್ಷಗಳಿಂದಲೂ ಅಂತರ್ಯುದ್ಧ ನಡೆಯುತ್ತಲೇ ಇತ್ತು. ಅಲ್ಲಿನ ಜನಜೀವನ ಅಸ್ತವ್ಯಸ್ತವಾಗಿತ್ತು. ಇದರಿಂದ ಬೇಸತ್ತ ಕೆಲವು ಕುಟುಂಬಗಳು ಆಗ ಪ್ರಶಾಂತ ವಾತಾವರಣವಿದ್ದ ನೆರೆಯ ದೇಶದ ಆಲ್‌ಸೇಶ್ (ALSACE) ಪ್ರಾಂತ್ಯಕ್ಕೆ ವಲಸೆ ಹೋದರು. ಸ್ವಿಟ್ಸರ್‌ಲೆಂಡಿನಿಂದ ಬಂದವರಾದುದರಿಂದ ಅವರೆಲ್ಲಾ ''ಶ್ವೆಯಿಟ್ಸರ್'' (SCHWEITZER)ಗಳೆಂದೇ ಮುಂದೆ ಪ್ರಸಿದ್ಧರಾದರು. ಅವರಲ್ಲಿ ಹೆಚ್ಚಿನವರು ವ್ಯವಸಾಯ ಮತ್ತು ಹೈನುಗಾರಿಕೆ ಉದ್ಯೋಗದವರು; ಕಷ್ಟಸಹಿಷ್ಣುಗಳು, ಸುಸಂಸ್ಕೃತರು. ಒಳ್ಳೆಯ ಕೃಷಿ ಮಾಡಿ, ಕೆಲವರು ಸ್ಥಿತಿವಂತರೂ ಆದರು. ಆ ಪ್ರಾಂತ್ಯದ ಜನಜೀವನದಲ್ಲಿ ಬೆರೆತು ಕಾಲಕ್ರಮೇಣ ಅವರೂ ಆಲ್‌ಸೇಶಿಯನ್ನರೇ ಆಗಿಹೋದರು.

ಆಲ್‌ಸೇಶ್ ನಮ್ಮ ಮಲೆನಾಡಿನ ಪರಿಸರದಂಥ ಪ್ರದೇಶ. ಎತ್ತರದ ಗುಡ್ಡಗಳು; ಸಮೃದ್ಧಿಯಾದ ವನರಾಶಿ; ಸದಾ ಮೈದೋರುವ ಹಿಮರಾಶಿ; ಕಣ್ಮನಗಳಿಗೆ ಹರ್ಷವನ್ನೀಯುವ ತಾಣ. ಪಶ್ಚಿಮಕ್ಕೆ ವೋಸ್‌ಜೇಸ್ ಪರ್ವತ ಶ್ರೇಣಿ; ಪೂರ್ವಕ್ಕೆ ರೈನ್ ನದಿ. ಫ್ರಾನ್ಸ್ ಮತ್ತು ಜರ್ಮನ್ ದೇಶಗಳ ಸರಹದ್ದಿನಲ್ಲಿ ಅಡಗಿ ಕುಳಿತ ಕಣಿವೆ-ಪ್ರದೇಶ. ಇಂಥ ಪ್ರಕೃತಿ ಸೌಂದರ್ಯ ಮತ್ತು ಫಲವತ್ತಾದ ಪ್ರದೇಶದ ಒಡೆತನ ಯಾರಿಗೆ ತಾನೇ ಬೇಡ ? ಫ್ರಾನ್ಸ್ ಮತ್ತು ಜರ್ಮನಿ ಅದಕ್ಕಾಗಿ ಆಗಾಗ್ಗೆ ಕಾದಾಡುತ್ತಿದ್ದುದು ವಾಡಿಕೆಯಾಗಿತ್ತು. ಹೀಗಾಗಿ ಆಲ್‌ಸೇಶ್ ಕೆಲಕಾಲ ಜರ್ಮನ್ನರ ವಶದಲ್ಲಿದ್ದರೆ ಮತ್ತೆ ಕೆಲ ಸಮಯ ಫ್ರೆಂಚರ ಒಡೆತನದಲ್ಲಿರುತ್ತಿದ್ದುದು ಅಲ್ಲಿನ ಜನರಿಗೆ ಒಗ್ಗಿಹೋಗಿತ್ತು. ಇಂಥ ಕಾದಾಟಗಳಿಂದ ಆಗಾಗ್ಗೆ ಕಷ್ಟನಷ್ಟಗಳಿಗೊಳಗಾಗುತ್ತಿದ್ದರೂ, ಆ ಎರಡೂ ದೇಶಗಳ ರಾಜಕೀಯ ಸಮಸ್ಯೆಗಳ ಬಗೆಗೆ ಅಲ್ಲಿನ ಜನ ಎಂದೂ ತಲೆ ಕೆಡಿಸಿಕೊಂಡವರಲ್ಲ. ಕೆಲವು ವರ್ಷ ಅವರು ಜರ್ಮನ್ನರಾಗಿದ್ದು, ಮತ್ತೆ ಕೆಲಕಾಲ ಫ್ರೆಂಚರಾಗುತ್ತಿದ್ದುದು ಅವರಿಗೆ ಅಭ್ಯಾಸವಾಗಿಹೋಗಿತ್ತು. ಅವರಾಡುವ ಭಾಷೆಯೂ

ಫ್ರೆಂಚ್-ಜರ್ಮನ್ ಭಾಷೆಗಳ ಸಮ್ಮಿಶ್ರಣವೇ ಆಯಿತು. ಕ್ಯಾಥೋಲಿಕ್ ಮತ್ತು ಪ್ರಾಟೆಸ್ಟೆಂಟ್ ಪಂಗಡಗಳ ಜನ ಅಲ್ಲಿ ಹೆಚ್ಚು ಕಡಿಮೆ ಸರಿಸಮಾನ ಪ್ರಮಾಣದಲ್ಲಿದ್ದರು. ಇದ್ದ ಒಂದೇ ಚರ್ಚಿನಲ್ಲಿ ಅವರ ಪ್ರಾರ್ಥನಾವಿಧಿಗಳು ಸರದಿ ಪ್ರಕಾರ ನಡೆಯುತ್ತಿದ್ದವು. ಅಲ್ಲಿನ ಪರಿಸರ ಮತ್ತು ಜೀವನದ ವಿವಿಧ ರಂಗಗಳಲ್ಲಿ ವಿರೋಧಾಭಾಸಗಳಿರುವಂತಿದ್ದರೂ, ರಾಜ್ಯಗಳುದಿಸಿ ರಾಜ್ಯಗಳಳಿದರೂ ತಮ್ಮ ಕಾರ್ಯಗಳನ್ನು ಕೈಬಿಡದ ಕರ್ಮಯೋಗಿಗಳಾಗಿದ್ದರು. ಸಾಹಿತ್ಯ ಸಂಗೀತದಂಥ ಕಲಾಪ್ರಪಂಚದಲ್ಲೂ ಯುರೋಪಿನ ಇತರ ಪ್ರದೇಶಗಳವರಿಗಿಂತ ಮುಂದಿದ್ದು, ಸುಸಂಸ್ಕೃತ ಜನಾಂಗದವರೆಂಬ ಹೆಸರು ಗಳಿಸಿದ್ದರು. ಹಲವಾರು ಹೆಸರಾಂತ ಮತ ಗುರುಗಳು, ಶಿಕ್ಷಕರು, ಸಾಹಿತಿಗಳು ಮತ್ತು ಸಮಾಜ ಸುಧಾರಕರನ್ನು ಯುರೋಪಿಗೆ ನೀಡಿದ ಹಿರಿಮೆ ಆಲ್‌ಸೇಶ್ ಪ್ರದೇಶದ್ದು. ಈ ಶತಮಾನದ ಪ್ರತಿಭಾವಂತರಲ್ಲಿ ಅಗ್ರಮಾನ್ಯರಾದ ಡಾ|| ಆಲ್ಬರ್ಟ್ ಶ್ವೆಯಿಟ್ಸರ್ ಮತ್ತು ಜೀನ್ ಪಾಲ್ ಸಾರ್ತ್ರ ಸಹಾ ಆ ಪ್ರಾಂತ್ಯದವರೆ. ಅವರಿಬ್ಬರೂ ಹತ್ತಿರದ ಸಂಬಂಧಿಗಳೂ ಆಗಿದ್ದರು.

**ಮನೆ, ಪರಿಸರಗಳ ಪ್ರಭಾವ**

ಆಲ್ಬರ್ಟ್ ಶ್ವೆಯಿಟ್ಸರ್ ಜನಿಸಿದ್ದು ಆಲ್‌ಸೇಶ್ ಪ್ರಾಂತ್ಯದ ಕೇಸರ್ಸ್ ಬರ್ಗ್ ಎಂಬ ಸಣ್ಣದೊಂದು ಹಳ್ಳಿಯಲ್ಲಿ- ೧೪ ಜನವರಿ, ೧೮೭೫. ತಂದೆ ಲೂಯಿಸ್ ಶ್ವೆಯಿಟ್ಸರ್, ಅಲ್ಲಿನ ಲುಥಿರಿಯನ್ ಚರ್ಚಿನ ಪಾದ್ರಿ. ಲುಥಿರಿಯನ್ ಪಂಗಡಕ್ಕೆ ಸೇರಿದವನಾಗಿದ್ದರೂ, ಪಾದ್ರಿ ಲೂಯಿಸ್ ಇತರ ಎಲ್ಲಾ ಪಂಗಡದವರೊಡನೆ ಸೌಹಾರ್ದಭಾವನೆಯಿಂದ ಇದ್ದು ಅತ್ಯಂತ ಜನಪ್ರಿಯ ವ್ಯಕ್ತಿಯಾಗಿದ್ದ. ಆ ಹಳ್ಳಿಯ ದಕ್ಷಿಣಕ್ಕೆ ಸ್ವಲ್ಪ ದೂರದ ಇನ್ನೊಂದು ಹಳ್ಳಿಯ ಪಾದ್ರಿ ಶಿಲ್ಲಿಂಗರ್‌ನ ಪುತ್ರಿ ಅಡಿಲೀ, ಅವನ ಧರ್ಮಪತ್ನಿ. ಆಲ್ಬರ್ಟ್ ಈ ದಂಪತಿಗಳ ಎರಡನೆ ಮಗ. ಅವನಿಗಿಂತ ಮೊದಲು ಲೂಯಿಸ್ ಜನಿಸಿದ್ದಳು. ಮುಂದೆ ತಮ್ಮ ಪಾಲ್, ತಂಗಿಯರಾದ ಅಡಿಲೀ ಮತ್ತು ಮಾರ್ಗರೇಟ್ ಜತೆಗೂಡಿದರು.

ಆಲ್ಬರ್ಟ್ ಜನಿಸಿದ ಸ್ವಲ್ಪ ಸಮಯದಲ್ಲೇ ಪಾದ್ರಿ ಲೂಯಿಸ್‌ಗೆ ಆ ಕಣಿವೆಯ ಗನ್ಸ್‌ಬಾಕ್ ಎಂಬ ಊರಿಗೆ ವರ್ಗಾವಣೆಯಾಯಿತು. ಅಡಿಲೀಯ ತವರುಮನೆ ಹತ್ತಿರದಲ್ಲೇ ಇತ್ತು. ಪ್ರಾಟೆಸ್ಟೆಂಟ್‌ರೇ ಹೆಚ್ಚಿನ ಸಂಖ್ಯೆಯಲ್ಲಿದ್ದ ಅಲ್ಲಿಯ ವಾತಾವರಣ ಹಾಯಾಗಿತ್ತು. ಜನಿಸುವಾಗಲೇ ಮೂಳೆ-ಚರ್ಮಗಳ ಹಂದರವಾಗಿದ್ದ ಆಲ್ಬರ್ಟ್ ಬದುಕಿ ಉಳಿಯುವುದೇ ಅನುಮಾನವಾಗಿತ್ತು. ತನ್ನ ಪುತ್ರರತ್ನ ಕೈಬಿಡುವುದೇ ಎಂಬ ದುಃಖ ತಾಯಿಯನ್ನು ಆವರಿಸಿಕೊಂಡಿದ್ದು ಸದಾ ಕಣ್ಣೀರು ಕೂಳು. ಹೊಸ ಪಾದ್ರಿಯ ಕುಟುಂಬವನ್ನು ಪರಿಚಯಿಸಿಕೊಳ್ಳಲು ಅವರ ಮನೆಗೆ ಬರುತ್ತಿದ್ದ ಮಹಿಳೆಯರು ಕೂಸಿನ ಭವಿಷ್ಯದ ಬಗೆಗೆ ಆಡುತ್ತಿದ್ದ ಕನಿಕರದ ಮಾತುಗಳು ಅವಳ

ಮನಃಸ್ಥೈರ್ಯವನ್ನು ಕೆಡಿಸುತ್ತಿದ್ದವು. ಆದರೆ ಆಲ್ಬರ್ಟ್, ಅವರೆಲ್ಲರ ನಿರೀಕ್ಷೆಯನ್ನೂ ಮೀರಿ ಚೇತರಿಸಿಕೊಂಡ. ನೆರೆಮನೆಯವರು ಒದಗಿಸುತ್ತಿದ್ದ ಅಪ್ಪಟ ಹಾಲು-ಮೊಸರುಗಳಿಂದ ಅವನು ಮೈತುಂಬಿ ಬೆಳೆದ.

ಶ್ವೈಟ್ಸರ್ ಮನೆತನದಲ್ಲಿ ಧಾರ್ಮಿಕ ವಾತಾವರಣ ಹಲವಾರು ತಲೆಮಾರುಗಳಿಂದ ನೆಲೆಯೂರಿತ್ತು. ಅತ್ತ ತಾಯಿಯ ಮನೆತನದಲ್ಲೂ ಅದೇ ಸಂಪ್ರದಾಯ. ತಂದೆಯಂತೂ ಧಾರ್ಮಿಕ ವಿಷಯಗಳಲ್ಲಿ ಅತ್ಯಂತ ಶ್ರದ್ಧಾವಂತ. ದೈವಭಕ್ತಿ, ಧರ್ಮಶ್ರದ್ಧೆಗಳ ವಿಷಯದಲ್ಲಿ ಯಾರಿಂದಲೂ ಅನಾದರಣೆಯನ್ನು ಸಹಿಸಲಾರದವ; ಸಹನಶೀಲ ಹಾಗೂ ಮೃದುಸ್ವಭಾವದವ. ವಿದ್ಯಾಭ್ಯಾಸ, ಶಿಸ್ತು, ನಡೆವಳಿಕೆಗಳ ಬಗೆಗೆ ಅವನದೇ ಆದ ಕಟ್ಟುನಿಟ್ಟಿನ ನಿಯಮಗಳನ್ನು ರೂಪಿಸಿದ್ದು, ಮಕ್ಕಳೂ ಅವುಗಳನ್ನು ಅನುಸರಿಸಬೇಕೆಂಬ ಖಚಿತಾಭಿಪ್ರಾಯ ಉಳ್ಳವ. ಹೀಗಾಗಿ ಮೂರನೇ ವರ್ಷದಿಂದಲೇ ಆಲ್ಬರ್ಟ್ ತಂದೆಯ ಕೈಹಿಡಿದು ಚರ್ಚ್‌ಗೆ ಹೋಗುವ ಪರಿಪಾಠವಾಯಿತು.

ಬಾಲಕ ಆಲ್ಬರ್ಟ್‌ಗೆ ಚರ್ಚ್‌ನಲ್ಲಿ ಜರುಗುತ್ತಿದ್ದ ಹಲವಾರು ಸಂಗತಿಗಳ ಬಗೆಗೆ ಒಂದೊಂದು ಸಾರಿ ಕುತೂಹಲ, ಮತ್ತೆ ಕೆಲ ಸಾರಿ ಗಾಬರಿ. ಸಾಮೂಹಿಕ ಪ್ರಾರ್ಥನೆ ಮುಗಿಯುತ್ತಿದ್ದಂತೆ ಆರ್ಗನ್ ನುಡಿಸುತ್ತಿದ್ದ ಡಾಡಿ ಇಲ್ಟಿಸ್ (DADDY ILTIS) ಎದ್ದು ನಿಲ್ಲುತ್ತಿದ್ದ. ಆ ಸಮಯದಲ್ಲಿ ಇಲ್ಟಿಸ್‌ನ ಎದುರಿನ ಗೋಡೆಯಲ್ಲಿ ಆಲ್ಬರ್ಟ್‌ಗೆ ಭೂತದರ್ಶನವಾದ ಅನುಭವ. ದೇವಮಂದಿರದಲ್ಲಿ ಭೂತಗಳಿರುವುದಿಲ್ಲ ಎಂದು ತಂದೆ ಎಷ್ಟೋ ಸಾರಿ ಸಮಜಾಯಿಷಿ ಹೇಳುತ್ತಿದ್ದರೂ, ಈ ವಿರೋಧಾಭಾಸ ಅವನನ್ನು ಚಕಿತಗೊಳಿಸುತ್ತಿತ್ತು. ಇಲ್ಟಿಸ್‌ನ ಎದುರಿನ ಗೋಡೆಯಲ್ಲಿ ನೆಟ್ಟಿದ್ದ ವಿಚಿತ್ರ ತರಹೆಯ ಕನ್ನಡಿಯಲ್ಲಿ ಅವನ ಮುಖ ವಿಕಾರವಾಗಿ ಪ್ರತಿಬಿಂಬಿಸುವುದೇ ಅದಕ್ಕೆ ಕಾರಣವೆಂಬುದನ್ನು ಅರಿಯಲು ಆಲ್ಬರ್ಟ್‌ಗೆ ಹಲವು ವರ್ಷಗಳೇ ಬೇಕಾದವು. ರುದ್ರಭೂಮಿಯ ಕಾವಲುಗಾರ ಜಿಗಲೆ, ಮನೆಗೆ ಬಂದಾಗಲೆಲ್ಲಾ ಆಲ್ಬರ್ಟ್‌ನ ತಲೆ ನೇವರಿಸಿ ಕೋಡು ಬೆಳೆಯುತ್ತಿವೆ ಎಂದು ತಮಾಷೆ ಮಾಡುತ್ತಿದ್ದ. ದೆವ್ವ-ಭೂತಗಳ ಚಿತ್ರಪಟಗಳಲ್ಲಿ ಕೋಡುಗಳನ್ನು ಗಮನಿಸಿದ್ದ ಆಲ್ಬರ್ಟ್ ತಾನೂ ಹಾಗೇ ಆಗಬಹುದೆಂಬ ಆತಂಕದಿಂದ ಕೆಲ ಸಾರಿ ಕೊರಗುತ್ತಿದ್ದ. ಕೆಲಕಾಲದ ನಂತರ ತಂದೆ ಸಮರ್ಪಕ ವಿವರಣೆ ನೀಡಿದ ಮೇಲೆ ಆತಂಕ ಕಡಿಮೆಯಾಯಿತು. ಆ ವಯಸ್ಸಿನಲ್ಲಿ ಆಲ್ಬರ್ಟ್‌ನ ಮನಸ್ಸು ಇಂಥ ಹಲವಾರು ತುಯ್ತಗಳಲ್ಲಿ ತೊಳಲಾಡುತ್ತಿತ್ತು.

ಕುಟುಂಬದ ಪ್ರಥಮ ಗಂಡು ಮಗು, ಆಲ್ಬರ್ಟ್ ಸ್ವಾಭಾವಿಕವಾಗಿ ಎಲ್ಲರ ಪ್ರೀತಿ ವಿಶ್ವಾಸಗಳ ಕೇಂದ್ರಬಿಂದುವಾಗಿದ್ದ. ಅಕ್ಕ, ತಮ್ಮ, ತಂಗಿಯರ ಒಡನಾಟದಿಂದ ಮನೆಯ ವಾತಾವರಣ ಸದಾ ಸಂತೋಷದಿಂದ ತುಂಬಿರುತ್ತಿತ್ತು. ಶಾಲೆಗೆ ಸೇರುವ

ಸಮಯ ಬಂದಾಗಲಂತೂ ಇಂಥ ಪರಿಸರವನ್ನು ತೊರೆಯುವುದು ಬಹಳ ಕಷ್ಟವೆನಿಸಿತು. ಮನೆಯ ಮುಕ್ತ ವಾತಾವರಣದಲ್ಲಿ ಬೆಳೆದ ಆಲ್ಬರ್ಟ್‌ಗೆ ಶಾಲೆಯ ಶಿಸ್ತಿನ ನಿಯಮಗಳು ಅಷ್ಟಾಗಿ ಹಿಡಿಸಲಿಲ್ಲ. ಅಲ್ಲಿನ ಓದು-ಬರಹಗಳಲ್ಲಿ ಆಸಕ್ತಿಯನ್ನು ತೋರಿಸದೆ ಹಿಂದೆ ಬೀಳುತ್ತಿದ್ದ ಆಲ್ಬರ್ಟ್, ಮನೆಯಲ್ಲಿ ತಂದೆಯ ಶಿಕ್ಷೆಗೆ ಆಗಾಗ್ಗೆ ಗುರಿಯಾಗಬೇಕಾಗುತ್ತಿತ್ತು.

ಶ್ವೆಯಿಟ್ಸರ್ ಕುಟುಂಬದಲ್ಲಿ ಧಾರ್ಮಿಕ ವಿಚಾರಗಳಂತೆ ಸಂಗೀತದ ವಾತಾವರಣ ಸಹಾ ತಲೆತಲಾಂತರಗಳಿಂದ ನೆಲೆಯೂರಿತ್ತು. ತಂದೆ ಮತ್ತು ತಾಯಿ, ಎರಡೂ ಕಡೆಯ ಪೂರ್ವಿಕರು ಹೆಸರಾಂತ ಸಂಗೀತಕೋವಿದರಾಗಿದ್ದರು. ತಾತ ಶಿಲ್ಲಿಂಗರ್ ಪಿಯಾನೋ ಮತ್ತು ಆರ್ಗನ್‌ಗಳನ್ನು ನುಡಿಸುವುದರಲ್ಲಿ ಪ್ರವೀಣನಾಗಿದ್ದ. ಅವುಗಳ ರಚನೆಯಲ್ಲಿ ಹಲವಾರು ಸುಧಾರಣೆಗಳನ್ನು ಜಾರಿಗೆ ತಂದು ಹೆಸರುವಾಸಿಯಾಗಿದ್ದ. ಮನೆಯಲ್ಲಿ ತಂದೆ ಪಿಯಾನೋ ನುಡಿಸುವಾಗ ಎಳೆಯ ಆಲ್ಬರ್ಟ್ ಕುತೂಹಲದಿಂದ ಆಲಿಸುತ್ತಿದ್ದ ಶಾಲೆಗೆ ದಾಖಲಾಗುವ ಮೊದಲೇ ಪಿಯಾನೋದಲ್ಲಿ ಕೈಯಾಡಿಸಿ, ಕೆಲವು ಕೀರ್ತನೆಗಳನ್ನು ನುಡಿಸುವ ಅಭ್ಯಾಸವಾಗಿತ್ತು. ಬೇರೆಲ್ಲಾ ವಿಷಯಗಳಿಗಿಂತ ಶಾಲೆಯಲ್ಲಿ ಸಂಗೀತದಲ್ಲಿ ಅವನೇ ಎಲ್ಲರಿಗಿಂತ ಮುಂದು. ಸಂಗೀತದ ಶಿಕ್ಷಕಿಗಿಂತಲೂ ಕೆಲಸಾರಿ ಚೆನ್ನಾಗಿ ಪಿಯಾನೋ ನುಡಿಸಿ, ಆಕೆಯನ್ನು ಪೇಚಿಗೆ ಸಿಕ್ಕಿಸುವುದರಲ್ಲಿ ಅವನಿಗೆ ಎಲ್ಲಿಲ್ಲದ ಖುಷಿ! ಬುದ್ಧಿ ತಿಳಿದ ನಂತರ ಆ ತೆರನ ವರ್ತನೆ ಸರಿಯಾದದ್ದಲ್ಲವೆಂದು ಅರಿತ ಆಲ್ಬರ್ಟ್ ಶ್ವೆಯಿಟ್ಸರ್ ಮುಂದೊಂದು ಸಾರಿ ಆಕೆಯ ಕ್ಷಮೆ ಕೇಳಿದನಂತೆ.

ಪಾದ್ರಿ ಲೂಯಿಸ್ ಬೈಬಲ್ಲಿನ ಜಾನಪದ ದಂತಕತೆಗಳನ್ನು ಸಂಗ್ರಹಿಸಿ ಬಾಲಕರಿಗೆ ಅರ್ಥವಾಗುವ ರೀತಿಯಲ್ಲಿ ಪುಸ್ತಕ ಪ್ರಕಟಿಸಿದ್ದ. ಅತ್ಯಂತ ಆಸಕ್ತಿಯಿಂದ ಆಲ್ಬರ್ಟ್, ಅವುಗಳನ್ನು ಬಾಯಿಪಾಠ ಮಾಡಿಕೊಂಡಿದ್ದ. ಪ್ರಕೃತಿ ಸೌಂದರ್ಯದ ಆರಾಧಕಳಾಗಿದ್ದ ತಾಯಿ ಅಡಿಲೀ, ಗನ್ಸ್ ಬಾಕ್‌ನ ಸುತ್ತಲ ಗುಡ್ಡಬೆಟ್ಟಗಳಲ್ಲಿ ತನ್ನ ಮಕ್ಕಳನ್ನು ತಿರುಗಾಡಿಸಿ ಪ್ರಕೃತಿ-ಪಾಠ ಹೇಳಿಕೊಡುತ್ತಿದ್ದಳು. ಆಲ್ಬರ್ಟ್ ಶ್ವೆಯಿಟ್ಸರ್ ಕೂಡ ಮುಂದೆ ಪ್ರಕೃತಿಯ ಆರಾಧಕನೇ ಆದ.

ಬಾಲಕ ಆಲ್ಬರ್ಟ್‌ಗೆ ಶಾಲೆಯ ಪಾಠ-ಪ್ರವಚನಗಳಲ್ಲಿ ಆಸಕ್ತಿ ಅಷ್ಟಕ್ಕಷ್ಟೆ. ಆದರೆ ಆತನ ಜೀವನದ ಮೇಲೆ ಪ್ರಭಾವ ಬೀರುವ ಅನೇಕ ಸಂಗತಿಗಳು ಜರುಗಿದುದು ಈ ಸಮಯದಲ್ಲಿಯೇ ಎಂಬುದು ಗಮನಾರ್ಹ.

ಒಮ್ಮೆ ಶಾಲೆಯಿಂದ ಹಿಂದಿರುಗುವಾಗ ದಾರಿಯಲ್ಲಿ ಸಹಪಾಠಿ ಜಾರ್ಜ್ ನಿಶ್ಚೆಲಂನೊಡನೆ ವಾದ-ವಿವಾದಗಳಾಗಿ ಕುಸ್ತಿಗಿಳಿಯಬೇಕಾಯಿತು. ವಯಸ್ಸಿನಲ್ಲಿ ಹಿರಿಯನೂ, ಗಾತ್ರದಲ್ಲಿ ದಪ್ಪಗಿದ್ದ ಜಾರ್ಜ್‌ನನ್ನು ಆಲ್ಬರ್ಟ್ ನಿರಾಯಾಸವಾಗಿ

ಕೆಳಗುರುಳಿಸಿ ಅವನ ಎದೆಯ ಮೇಲೆ ಕುಳಿತ. ಜಾರ್ಜ್ ದೈನ್ಯದಿಂದ– ''ಆಲ್ಬರ್ಟ್, ನಿನ್ನಂತೆ ಪ್ರತಿದಿನ ಮಾಂಸಾಹಾರ ದೊರೆಯುವ ಅವಕಾಶವಿದ್ದಿದ್ದರೆ ನಾನು ಸೋತು ಕೆಳಗೆ ಬೀಳುತ್ತಿರಲಿಲ್ಲ'' ಎಂದು ನರಳಿ ಕೊಸರಾಡಿದ. ಜಾರ್ಜ್‌ನ ಪರಿಸ್ಥಿತಿಗೆ ಆಲ್ಬರ್ಟ್ ಮರುಗಿದ. ಇತರ ಬಾಲಕರಿಗಿಂತ ಸ್ಥಿತಿವಂತ ಪಾದ್ರಿಯ ಮಗನಾದ ತನಗೆ ದೊರೆಯುವ ಪೌಷ್ಟಿಕ ಆಹಾರ-ಸಾಮಗ್ರಿ ಮತ್ತು ಜೀವನದ ಇತರ ಸೌಲಭ್ಯಗಳು, ಅವರಿಗೆಲ್ಲ ದೊರೆಯುತ್ತಿಲ್ಲವೆಂಬುದರ ಅರಿವು ಅಂದೇ ಅವನಿಗಾಗಿದ್ದು. ಜಾರ್ಜ್‌ನ ಎದೆಯ ಮೇಲಿಂದ ತತ್‌ಕ್ಷಣ ಕೆಳಗಿಳಿದು ಅವನ ಕ್ಷಮೆ ಕೇಳಿದ !

ಈ ಘಟನೆ ಮೇಲ್ನೋಟಕ್ಕೆ ತೀರಾ ಸಾಮಾನ್ಯವೆನ್ನಿಸಿದರೂ, ಅದು ಎಳೆಯ ಆಲ್ಬರ್ಟ್‌ನ ಮನಸ್ಸನ್ನು ಗೊಂದಲಕ್ಕೀಡುಮಾಡದಿರಲಿಲ್ಲ. ಅವನ ಶಾಲೆಗೆ ಬರುತ್ತಿದ್ದ ಹೆಚ್ಚು ಮಂದಿ ಮಕ್ಕಳು ಬಡಕುಟುಂಬದವರೇ ಆಗಿರುತ್ತಿದ್ದರು. ಒಳ್ಳೆಯ ಆಹಾರದ ಕೊರತೆಯೇ ಅಲ್ಲದೆ ಬೆಚ್ಚನೆಯ ಉಡುಪುಗಳೂ ಅವರಲ್ಲಿರುತ್ತಿರಲಿಲ್ಲ. ಕೆಲವರು ಚಳಿಯಲ್ಲಿ ನಡುಗುತ್ತಿರುವುದನ್ನು ಅವನು ಕಣ್ಣಾರೆ ನೋಡಿದ್ದ. ಅವರಿಗೆಲ್ಲಾ ಸಹಾನುಭೂತಿ ತೋರುವ ಮನೋಭಾವ ಅಂದೇ ಅವನಲ್ಲಿ ಅಂಕುರಿಸಿತು. ಆ ದಿನ ರಾತ್ರಿ ಬಡಿಸಿದ ಮಾಂಸದ ಭಕ್ಷ್ಯಗಳನ್ನು ನಿರಾಕರಿಸಿದ. ತಾಯಿಯ ನಲ್ಮೆಯ ಒತ್ತಾಯಕ್ಕೂ ಅವ ಮಣಿಯಲಿಲ್ಲ. ಮುಂದೆ ಅವನ ಆಹಾರ ಸೇವನೆಯ ಕ್ರಮ ತುಂಬಾ ಸರಳವಾಯಿತು. ಕ್ರಿಸ್‌ಮಸ್ ಹಬ್ಬಕ್ಕೆ ಹೊಸ ಉಡುಪನ್ನು ಹೊಲಿಸಲು ದರ್ಜಿಯನ್ನು ಮನೆಗೆ ಕರೆಸಿದಾಗ ಅದಕ್ಕೂ ನಿರಾಕರಣೆ; ಅಳತೆ ಕೊಡಲು ತಕರಾರು. ಹೊರಗಡೆ ಆಪ್ತೇಷ್ಟರ ಮನೆಗೆ ಹೋಗುವ ಸಂದರ್ಭಗಳಲ್ಲಿ ಪಾದ್ರಿಯ ಅಂತಸ್ತಿಗೆ ಸರಿ ದೂಗುವ ಬಟ್ಟೆ ಧರಿಸುವುದು ಸಂಪ್ರದಾಯ. ಆದರೆ ಆಲ್ಬರ್ಟ್ ಇದಕ್ಕೆ ವಿರುದ್ಧ. ಕುಟುಂಬದ ಗೌರವಕ್ಕೆ ಕುಂದುಂಟಾಗುತ್ತದೆಂದು ಪರಿಪರಿಯಿಂದ ಯಾಚಿಸಿದರೂ ಅವನ ಹಠ ಬಿಡಲಾರ; ಸಾಮಾನ್ಯ ಬಟ್ಟೆಗಳನ್ನೇ ಧರಿಸಿ ಅವರ ಜತೆಗೂಡುವನು. ಮಗನ ಮೊಂಡುತನದಿಂದಾಗಿ ತಂದೆ-ತಾಯಿಗೆ ಅವನ ಭವಿಷ್ಯದ ಬಗೆಗೆ ಸದಾ ಆತಂಕ.

ಒಡನಾಡಿಗಳ ಉಡುಗೆ-ತೊಡಿಗೆಗಳ ಬಗೆಗೆ ಸಹಾನುಭೂತಿ ತೋರುತ್ತಿದ್ದ ಆಲ್ಬರ್ಟ್, ಅವರ ನಡೆ-ನುಡಿಗಳನ್ನು ಅನುಕರಿಸುವುದೂ ಸಹಜವೇ. ವೃದ್ಧ ಹಾಗೂ ಕುರೂಪಿಯಾಗಿದ್ದ ಯಹೂದ್ಯರ ಮಾಶ್ಚೆ (MAUSCHE), ಕತ್ತೆ ಗಾಡಿ ನಡೆಸಿ ಕೊಂಡು ಬೀದಿಯಲ್ಲಿ ಹೋಗುತ್ತಿದ್ದಾಗಲೆಲ್ಲಾ ಇತರ ಹುಡುಗರ ಜತೆ ತಾನೂ ಸೇರಿಕೊಂಡು ಅವನನ್ನು ಅಣಕಿಸಿ ಗೇಲಿ ಮಾಡುತ್ತಿದ್ದುದುಂಟು. ಶಾಲೆಗೆ ಹೊಸದಾಗಿ ಬಂದ ಶಿಕ್ಷಕಿಯೊಬ್ಬರನ್ನು ಕುಂಟಿಯೆಂದು ಒಮ್ಮೆ ಹೀಯಾಳಿಸಿದ್ದ. ಸ್ವಂತ ವಿವೇಚನೆ ಇಲ್ಲದೆ ಸಹಪಾಠಿಗಳ ಜತೆ ಸೇರಿ ಇತರರ ಮನಸ್ಸನ್ನು ನೋಯಿಸುವುದು ಸರಿಯಲ್ಲವೆಂಬುದರ ಅರಿವು ಅವನಿಗಾಗಲು ಬಹಳ ಕಾಲ ಹಿಡಿಯಲಿಲ್ಲ. ಮುಂದೆ

ಅವರಿಬ್ಬರನ್ನೂ ಪ್ರತ್ಯೇಕವಾಗಿ ಭೆಟ್ಟಿಯಾಗಿ ಕ್ಷಮೆ ಕೇಳಿ ತನ್ನ ನಡೆವಳಿಕೆಯನ್ನು ತಿದ್ದಿಕೊಂಡ.

ಆಲ್ಬರ್ಟ್, ಒಮ್ಮೆ ಬೆಟ್ಟದ ತಪ್ಪಲಿನಲ್ಲಿ ಸ್ನೇಹಿತನೊಡನೆ ವಿಹರಿಸುತ್ತಿದ್ದ. ಮರದ ರೆಂಬೆಯ ಮೇಲೆ ಕುಳಿತಿದ್ದ ಸುಂದರ ಪಕ್ಷಿಯೊಂದನ್ನು ಹೊಡೆದುರುಳಿಸಲು, ಸ್ನೇಹಿತ ತನ್ನಲ್ಲಿದ್ದ ಚಾಟರಿ-ಬಿಲ್ಲಿನಿಂದ ಹವಣಿಸುತ್ತಿದ್ದ ಆ ಸಮಯದಲ್ಲಿ ದೂರದಿಂದ ತೇಲಿ ಬಂದ ಚರ್ಚ್‌ನ ಘಂಟಾನಾದ ಆಲ್ಬರ್ಟ್‌ನನ್ನು ಹೊಡೆದೆಚ್ಚರಿಸಿದಂತಾಯಿತು: ''ಯಾವ ಜೀವಿಯನ್ನೂ ಅನವಶ್ಯ ಕೊಲ್ಲಬೇಡ'' ಎಂಬ ಬೈಬಲ್‌ವಾಣಿ ಅವನ ಕಿವಿಯಲ್ಲಿ ಮೊರೆಯಿತು. ಗೆಳೆಯ ಕಲ್ಲೆಸೆಯುವುದರೊಳಗೇ ಮರವನ್ನಲ್ಲಾಡಿಸಿ ಪಕ್ಷಿ ಹಾರುವಂತೆ ಮಾಡಿ ಅದರ ಜೀವ ಉಳಿಸಿದ. ಸ್ನೇಹಿತ ಛೀಮಾರಿ ಹಾಕಿದರೂ ಒಂದು ಜೀವವನ್ನು ಉಳಿಸಿದ ಸಂತೋಷ ಅವನದಾಗಿತ್ತು.

**ಕೋಲ್ಮಾರ್**

ಹತ್ತಿರದ ಕೋಲ್ಮಾರ್ ಪಟ್ಟಣದಲ್ಲಿ ಆಲ್ಬರ್ಟ್‌ನ ಚಿಕ್ಕಮ್ಮ ಇದ್ದರು. ಅವರನ್ನು ನೋಡಲು ಅಲ್ಲಿಗೆ ಹೋಗುವ ಅವಕಾಶಗಳು ಆಗಾಗ್ಗೆ ಒದಗುತ್ತಿದ್ದವು. ಗನ್ಸ್‌ಬಾಕ್‌ನ್ನೇ ಮಹಾಜಗತ್ತೆಂದು ಗ್ರಹಿಸಿದ್ದ ಬಾಲಕನಿಗೆ ಅದಕ್ಕಿಂತ ದೊಡ್ಡ ಪಟ್ಟಣ ಕೋಲ್ಮಾರ್‌ನ ಜೀವನಕ್ರಮ ಬೆರಗುಗೊಳಿಸಿತು. ಅಲ್ಲಿನ ಅಂಗಡಿ ಮುಂಗಟ್ಟುಗಳು, ವಸ್ತುಸಂಗ್ರಹಾಲಯ ಮತ್ತು ಉದ್ಯಾನವನಗಳ ದೃಶ್ಯ ಹೊಸ ಜಗತ್ತೊಂದನ್ನು ತೆರೆದಿಟ್ಟಿತ್ತು. ಉದ್ಯಾನವನದಲ್ಲಿದ್ದ ನೀಗ್ರೋ ಯುವಕನ ಶಿಲ್ಪವೊಂದು ಆಲ್ಬರ್ಟ್‌ನನ್ನು ಸೂಜಿಗಲ್ಲಿನಂತೆ ಅದರತ್ತ ಪದೇ ಪದೇ ಸೆಳೆಯುತ್ತಿತ್ತು. ಕಂದುಬಣ್ಣದ ಸುಂದರ ಹಾಗೂ ದೃಢಕಾಯದ ಯುವಕ, ತಲೆಬಗ್ಗಿಸಿ, ಚಿಂತಾಕ್ರಾಂತನಾಗಿ ಕುಳಿತಿದ್ದ ದೃಶ್ಯ ಅವನ ಮನಸ್ಸಿನಲ್ಲಿ ಅಚ್ಚೊತ್ತಿತ್ತು. ಗಂಟೆಗಟ್ಟಲೆ ಮೂಕವಿಸ್ಮಿತನಾಗಿ ಆ ಶಿಲಾ ವಿನ್ಯಾಸವನ್ನು ಆಲ್ಬರ್ಟ್ ವೀಕ್ಷಿಸುತ್ತಾ ನಿಲ್ಲುವುದು ಕೋಲ್ಮಾರ್‌ಗೆ ಹೋದಾಗಲೆಲ್ಲಾ ಹವ್ಯಾಸವಾಗಿಬಿಟ್ಟಿತ್ತು.

ಒಂಬತ್ತನೇ ವರ್ಷದ ವಯಸ್ಸಾಗುವಷ್ಟರಲ್ಲಿ ಅವನ ಕಾಲುಗಳು ಚರ್ಚ್‌ನ ಆರ್ಗನ್ನಿನ ಪೆಡಲುಗಳಿಗೆ ತಗಲುವಂತಾದದ್ದು, ಸಂಗೀತದ ಹೊಸತೊಂದು ಆಯಾಮವನ್ನು ತೆರೆದಿಟ್ಟಂತಾಯಿತು. ಅದರ ವಾರಸುದಾರ ಡಾಡಿ ಇಲ್ಟಿಸ್‌ನಲ್ಲಿ ಮೊದಲೇ ಸಲಿಗೆಯಿದ್ದು ಪುರುಸೊತ್ತಿದ್ದಾಗಲೆಲ್ಲಾ ಆಲ್ಬರ್ಟ್ ಅದರಲ್ಲಿ ಅಭ್ಯಾಸ ಮಾಡಲು ಅವಕಾಶ ಮಾಡಿಕೊಡುತ್ತಿದ್ದ. ಒಂದು ವರ್ಷದ ಅಭ್ಯಾಸದ ನಂತರ ಇಲ್ಟಿಸ್ ಊರಲ್ಲಿರದಿದ್ದಾಗಲೆಲ್ಲ ಚರ್ಚ್‌ನ ಅಧಿಕೃತ ಸಮಾರಂಭಗಳಲ್ಲಿ ಆರ್ಗನ್ ನುಡಿಸುವ ಜವಾಬ್ದಾರಿ ಈ ಪೋರನದೇ ಆಯಿತು.

ಡಾಡಿ ಇಲ್ಟಿಸ್‌ನೇ ಶಾಲೆಯ ತರಗತಿಗಳಲ್ಲಿ ಧರ್ಮಬೋಧನೆ ಮಾಡುತ್ತಿದ್ದುದೂ

ಆಲ್ಬರ್ಟ್‌ಗೆ ಅನುಕೂಲವೇ ಆಯಿತು. ಧರ್ಮದ ವಿಷಯಗಳನ್ನು ಇಲ್ಟಿಸ್ ಬೋಧಿಸುತ್ತಿದ್ದ ರೀತಿ ಆಲ್ಬರ್ಟ್‌ಗೆ ಖುಷಿಯುಂಟುಮಾಡುತ್ತಿತ್ತು. ಈ ಸಮಯದಲ್ಲೇ ತಂದೆ ಹೊಸ ಬೈಬಲನ್ನು ಕೊಡಿಸಿದ್ದು ಅವನ ಅಭ್ಯಾಸಕ್ಕೆ ಇನ್ನೂ ಸಹಾಯಮಾಡಿತು. ಅಂದಿನಿಂದಲೇ ಅದರ ನಿರಂತರ ಅಭ್ಯಾಸ ಮುಂದುವರಿಯಿತು. ಅದರಲ್ಲಿದ್ದ ದಂತಕತೆಗಳು ಅವನ ಎಳೆಯ ಮನಸ್ಸಿನಲ್ಲಿ ಹಲವು ಅಲೆಗಳನ್ನು ಎಬ್ಬಿಸಿದವು. ಆ ಕತೆಗಳಲ್ಲಿ ಹೇಳಿರುವುದೆಲ್ಲಾ ನಿಜವಾಗಿ ನಡೆದ ಸಂಗತಿಗಳೇ ಎಂಬ ಬಗೆಗೆ ಸಂದೇಹಗಳೂ ಮೂಡದಿರಲಿಲ್ಲ. ಸೃಷ್ಟಿಯ ಆದಿಯಲ್ಲಿ ೪೦ ದಿನ್ನ ಹಗಲೂ ರಾತ್ರಿ ಸತತ ಮಳೆ ಬಿದ್ದು ಬೆಟ್ಟಗುಡ್ಡಗಳೆಲ್ಲಾ ನೀರಿನಲ್ಲಿ ಮುಳುಗಿಹೋಗಿದ್ದವು; ಅರ್ಧ ಚಂದ್ರಾಕಾರದ ಆಕೃತಿಯೊಂದರಲ್ಲಿ ನೋಹಾ (NOAH'S ARC) ತೇಲಿಕೊಂಡಿದ್ದನೆಂದು ಬೈಬಲ್‌ನ ದಂತಕತೆಯೊಂದು ಹೇಳುತ್ತದೆ. ಒಂದು ಸಾರಿ ಆಲ್‌ಸೇಶ್‌ನಲ್ಲೂ ಅದೇ ರೀತಿ ಮಳೆ ಬಿದ್ದರೂ ಬೆಟ್ಟಗುಡ್ಡಗಳೇಕೆ ನೀರಿನಲ್ಲಿ ಮುಳುಗಲಿಲ್ಲ ಎಂಬ ಸಂದೇಹ ಆಲ್ಬರ್ಟ್‌ನದು. ಪುರಾಣಗಳ ಪಾಠ ಹೇಳುತ್ತಿದ್ದ ಶಿಕ್ಷಕನಿಂದ ಅದಕ್ಕೆ ಸಮಂಜಸ ಉತ್ತರ ದೊರೆಯಲಿಲ್ಲ. ಆ ಕಾಲದಲ್ಲಿ ಬಕೆಟ್ಟಿನಿಂದ ಸುರಿದ ಹಾಗೆ ಮಳೆ ಬೀಳುತ್ತಿತ್ತೆಂದು ತಂದೆ ಹೇಳಿದ ಸಮಜಾಯಿಷಿ ಕೆಲಕಾಲಮಾತ್ರ ಅವನಿಗೆ ತೃಪ್ತಿಯುಂಟುಮಾಡಿತ್ತಷ್ಟೆ. ಏಸುಕ್ರಿಸ್ತನ ಜೀವನದ ಕಾಲ ಮತ್ತು ಅವನ ಸುತ್ತ ಹೆಣೆದ ದಂತಕತೆಗಳೂ ಅವನ ಅನುಮಾನಕ್ಕೊಳಗಾಗುತ್ತಿದ್ದವು. ಈ ಬಗೆಗೆ ತಂದೆ ಆಗಾಗ್ಗೆ ನೀಡುತ್ತಿದ್ದ ವಿವರಣೆಗಳಿಂದ ಅವನ ಸಂದೇಹಗಳು ನಿವಾರಣೆಯಾಗುತ್ತಿರಲಿಲ್ಲ. ಅವುಗಳ ಸತ್ಯಾಸತ್ಯತೆಗಳನ್ನರಿಯಲು ಮುಂದೆ ಸಂಶೋಧನೆಗಳನ್ನು ನಡೆಸಬೇಕೆಂಬ ಹಂಬಲ ಎಳೆಯ ವಯಸ್ಸಿನಲ್ಲಿಯೇ ಮೂಡಿತ್ತು.

ಜೀವನದ ಎರಡನೇ ದಶಕಕ್ಕೆ ಕಾಲಿಡುತ್ತಿದ್ದ ಆಲ್ಬರ್ಟ್ ಸಂಗೀತ ಮತ್ತು ಧಾರ್ಮಿಕ ವಿಚಾರಗಳಲ್ಲಿ ಆ ವಯಸ್ಸಿನ ಇತರರಿಗಿಂತ ಬಹಳ ಮುಂದುವರೆದಿದ್ದ. ಯಾವುದೇ ವಿಷಯವಾದರೂ ಅದರ ಸತ್ಯಾಸತ್ಯತೆಯನ್ನು ಅರಿಯಲು ಅದನ್ನು ವೈಚಾರಿಕವಾಗಿ ಬಿಡಿಸಿ ತಿಳಿಯಬೇಕೆಂಬ ಹವ್ಯಾಸ ಅವನಲ್ಲೀಗ ಮೊಳಕೆಯೊಡೆಯುತ್ತಿತ್ತು. ಆದರೆ ತನ್ನ ಅನಿಸಿಕೆಗಳನ್ನು ಬಹಿರಂಗವಾಗಿ ಹೊರಗೆಡಹಿ, ಧೈರ್ಯದಿಂದ ಚರ್ಚಿಸಲು ಮುಂದಾಗಲಾರದ ನಾಚಿಕೆ ಹಾಗೂ ಅಂಜಿಕೆ-ಸ್ವಭಾವ ಅವನದು. ಎಂದೂ ಆಡಂಬರಕ್ಕೆ ಮಣಿಯದ ಸರಳ ಜೀವನ ಕ್ರಮ ಈಗಾಗಲೇ ರೂಢಿ ಆಗಿತ್ತು. ವಿದ್ಯಾಭ್ಯಾಸದಲ್ಲಿ ಹೆಮ್ಮೆಪಡುವಂತ ಸಾಧನೆ ಇನ್ನೂ ಆಗಿರಲಿಲ್ಲ. ದೊಡ್ಡವನಾದ ಮೇಲೆ ತಂದೆಯಂತೆ ಪಾದ್ರಿಯಾಗುವನೋ ಅಥವಾ ಇನ್ನಾವುದಾದರೂ ವೃತ್ತಿಯನ್ನು ಅವಲಂಬಿಸುವನೋ ಎಂಬುದರ ಬಗೆಗೂ ನಿರ್ಧಾರ ಅವನಿಂದ ಆಗಿನ್ನೂ ಸಾಧ್ಯವಾಗಿರಲಿಲ್ಲ. ಸಂಗೀತದಲ್ಲಿ ಹೆಚ್ಚಿನ ಅಭಿರುಚಿ ಇರುವಂತಿದ್ದರೂ, ಅದನ್ನೇ

ಮುಂದುವರೆಸುವ ದೃಢಮನಸ್ಸೂ ಕಂಡುಬರುತ್ತಿರಲಿಲ್ಲ. ತಂದೆ-ತಾಯಿ ಅವನ ಒಲವಿನ ಬಗೆಗೆ ವಿಚರಿಸಿದಾಗ ದೊರೆಯುತ್ತಿದ್ದುದು ದಿನಕ್ಕೊಂದು ಉತ್ತರ. ಪಾದ್ರಿಯ ಸಂಸಾರವೂ ಈಗ ದೊಡ್ಡದಾಗಿ ಬೆಳೆಯುತ್ತಿದ್ದು, ಮಕ್ಕಳೆಲ್ಲರ ವಿದ್ಯಾಭ್ಯಾಸ ಮತ್ತು ಸಂಸಾರ ನಿರ್ವಹಣೆಯ ವೆಚ್ಚಗಳನ್ನು ಭರಿಸುವುದೂ ಕಷ್ಟವಾಗಿತ್ತು.

## ೩. ಪ್ರೌಢ ವ್ಯಾಸಂಗ

ಬಾಲಕ ಆಲ್ಬರ್ಟನ ಭವಿಷ್ಯದ ಬಗೆಗಿನ ಚಿಂತೆ ಶ್ವೈಯಿಟ್ಸರ್ ಕುಟುಂಬವನ್ನು ಆವರಿಸಿಕೊಂಡಿರುವ ಸಮಯದಲ್ಲೇ ಪಾದ್ರಿ ಶ್ವೈಯಿಟ್ಸರ್‌ನ ಮಲಸಹೋದರ ಲೂಯಿಸ್ ಶ್ವೈಯಿಟ್ಸರ್ (ಹಿರಿಯ), ಅವರ ಮನೆಗೆ ಆಗಮಿಸಿದ. ಹತ್ತಿರದ ಮುಲ್‌ಹೌಸ್ ನಗರದಲ್ಲಿ ಶಾಲಾ-ತನಿಖಾಧಿಕಾರಿ ಆಗಿದ್ದ ಲೂಯಿಸ್ ಬಂದಾಗ ಅವರಿಬ್ಬರ ಸಂಸಾರ ತಾಪತ್ರಯಗಳು ಚರ್ಚೆಗೆ ಬರುವುದು ಸ್ವಾಭಾವಿಕ. ಮುಲ್‌ಹೌಸ್‌ನ ಹಿರಿಯ ಲೂಯಿಸ್‌ನದು ಮಕ್ಕಳಿಲ್ಲದ ಮನೆಯಾದರೆ, ಗನ್ಸ್‌ಬಾಕ್ ಪಾದ್ರಿ ಲೂಯಿಸ್‌ನದು ಮನೆತುಂಬ ಮಕ್ಕಳಿದ್ದ ಸಂಸಾರ. ತಮ್ಮನ ಹಿರಿಯ ಮಗ ಆಲ್ಬರ್ಟ್‌ನ ವಿಚಿತ್ರ ನಡೆವಳಿಕೆ ಮತ್ತು ವಿದ್ಯಾಭ್ಯಾಸದಲ್ಲಿ ಅವನಿಗಿದ್ದ ಅನಾದರಣೆ ಹಿರಿಯ ಲೂಯಿಸನ ಗಮನ ಸೆಳೆಯದಿರಲಿಲ್ಲ. ಕುಟುಂಬದ ಹಿರಿಯನಾದ ಅವನು ಆಲ್ಬರ್ಟ್‌ನ ಬಗೆಗೆ ಜವಾಬ್ದಾರಿ ವಹಿಸುವುದು ಸರಿಯೆನಿಸಿತು. ಕೆಲವು ವರ್ಷಗಳು ತನ್ನ ಜೊತೆ ಇರಿಸಿಕೊಂಡು ಓದಿಸುವಂತಾದರೆ ಬಾಲಕನ ದೃಷ್ಟಿಕೋನ ಬದಲಾಗಬಹುದೆಂಬ ನಂಬಿಕೆ ಅವನದು. ಒಬ್ಬಂಟಿ ಜೀವನ ನಡೆಸುತ್ತಿರುವ ಪತ್ನಿ ಸೋಫಿಯಾಳಿಗೂ ವಯಸ್ಸಾಗುತ್ತಿದ್ದು, ಮನೆಯಲ್ಲಿ ಬಾಲಕನೊಬ್ಬನಿದ್ದರೆ ಅವಳ ಮನಸ್ಸಿಗೂ ನೆಮ್ಮದಿಯುಂಟಾದೀತೆಂಬ ಆಶಯ ಕೂಡ ಅವನಲ್ಲಿತ್ತು. ಆಲ್ಬರ್ಟ್‌ನನ್ನು ಮುಲ್‌ಹೌಸ್‌ಗೆ ಕರೆದುಕೊಂಡು ಹೋಗುವ ವಿಷಯ ಪ್ರಸ್ತಾಪಿಸಿದಾಗ ಪಾದ್ರಿಗೂ ಅದು ಸಮಂಜಸವೆನಿಸಿತು. ಗನ್ಸ್‌ಬಾಕ್‌ನಲ್ಲಿ ಅಂತರ್ಮುಖಿಯಾಗಿ ಕಾಲಕಳೆಯುತ್ತಿದ್ದ ಆಲ್ಬರ್ಟ್‌ಗೆ ಈ ಸಲಹೆ ಮೊದಲು ಹಿಡಿಸಲಿಲ್ಲ. ಆದರೆ ಹಿರಿಯರ ಒತ್ತಾಯಕ್ಕೆ ಮಣಿದು ಮುಲ್‌ಹೌಸ್‌ಗೆ ದೊಡ್ಡಪ್ಪನ ಜತೆ ಪ್ರಯಾಣ ಮಾಡುವುದು ಅನಿವಾರ್ಯವಾಯಿತು.

ಮುಲ್‌ಹೌಸ್, ವ್ಯಾಪಾರೋದ್ಯಮ ಮತ್ತು ಕೈಗಾರಿಕೆಗಳಿಂದ ಸದಾ ಗಲಾಟೆ, ಗಡಿಬಿಡಿಯ ವಾತಾವರಣದ ನಗರ. ಶಾಲಾವಠಾರದಲ್ಲೇ ದೊಡ್ಡಪ್ಪನ ಸಂಸಾರದ ವಸತಿ. ಗನ್ಸ್‌ಬಾಕ್‌ನ ಧಾರ್ಮಿಕ ವಾತಾವರಣಕ್ಕೆ ವ್ಯತಿರಿಕ್ತವಾಗಿ ಇಲ್ಲಿ ಸದಾ ವಿದ್ಯಾರ್ಥಿಗಳು ಮತ್ತು ಶಾಲೆಗಳ ಪರಿಸರ. ದೊಡ್ಡಮ್ಮ ಸೋಫಿಯಾ ಅವನನ್ನು

ಪ್ರೀತಿಸುತ್ತಿದ್ದಳು. ಆದರೆ ಸಲಿಗೆ ತೋರಿಸುತ್ತಿರಲಿಲ್ಲ. ಅವಳ ನಡೆನುಡಿಗಳು ಕರಾರುವಾಕ್ಕು. ಪ್ರತಿಯೊಂದರಲ್ಲೂ ಶಿಸ್ತು ಸಂಯಮವಿರಬೇಕು ಅವಳಿಗೆ. ಅನವಶ್ಯಕ ಸಮಯ ಕಳೆಯುತ್ತಿರಲಿಲ್ಲ. ಪುರುಸೊತ್ತಿದ್ದಾಗ ಕಸೂತಿ ಇಲ್ಲವೇ ಪಿಯಾನೋಗೆ ಅಂಟಿಕೊಂಡಿರುವ ಗೀಳು. ಮಕ್ಕಳಿಲ್ಲದ ಮನೆಯಲ್ಲಿ ರೂಪಿತವಾದ ಜೀವನಕ್ರಮ ! ಪ್ರಕೃತಿ ಸೌಂದರ್ಯ ಮತ್ತು ಶಾಂತಿಯ ನೆಲವೀಡಿನಲ್ಲಿ ಸ್ವತಂತ್ರ ಜೀವನ ನಡೆಸಿದ ಆಲ್ಬರ್ಟ್‌ಗೆ ಇಲ್ಲಿಯ ವಾತಾವರಣ ಮೊದಲಿಗೆ ಹಿಡಿಸಲಿಲ್ಲ. ಆದರೆ ಹೊಂದಿಕೊಳ್ಳುವುದು ಅನಿವಾರ್ಯವಾಯಿತು.

ಆಲ್ಬರ್ಟ್‌ನ ಗೊಂದಲಮಯ ಜೀವನಕ್ರಮದಲ್ಲಿ ಶಿಸ್ತು ಮೂಡಿಸಬೇಕೆಂಬ ಸೋಫಿಯಾಳ ಆಶಯ. ಶಾಲೆಯಲ್ಲಿ ನಿಗದಿಮಾಡಿದ ಮನೆಗೆಲಸ ಕಡ್ಡಾಯವಾಗಿ ಮುಗಿಸಬೇಕು. ನಂತರ ಪಿಯಾನೋ ಅಭ್ಯಾಸ. ವಾರ್ತಾಪತ್ರಿಕೆಗಳನ್ನೋದ ಬೇಕೆಂಬಾಸೆ ಆಲ್ಬರ್ಟ್‌ಗೆ; ಅವುಗಳಲ್ಲಿನ ಕೊಲೆ, ದರೋಡೆ, ಪತ್ತೇದಾರಿ ಕತೆಗಳು ಆಲ್ಬರ್ಟ್‌ನ ತಲೆಕೆಡಿಸಬಹುದೆಂಬುದು ದೊಡ್ಡಮ್ಮನ ಅಭಿಪ್ರಾಯ. ಒಳ್ಳೆಯ ಸಾಹಿತ್ಯದ ಗ್ರಂಥಗಳನ್ನು ಓದುವುದಕ್ಕೆ ಅವಳ ಅಭ್ಯಂತರವಿರಲಿಲ್ಲ. ಆದರೂ ದೊಡ್ಡಮ್ಮನ ಗಮನ ತಪ್ಪಿಸಿ ವೃತ್ತಪತ್ರಿಕೆ ಓದುವುದನ್ನು ಬಿಟ್ಟಿರುತ್ತಿರಲಿಲ್ಲ. ಕೆಲಸಾರಿ ಸಿಕ್ಕಿ ಹಾಕಿಕೊಂಡು ಛೀಮಾರಿಯೂ ಆಗುತ್ತಿತ್ತು.

ಕಲಿಕೆಯಲ್ಲಿ ಗನ್ಸ್‌ಬಾಕ್‌ನ ಪ್ರವೃತ್ತಿ ಇಲ್ಲಿಯೂ ಮುಂದುವರೆಯಿತು. ಗಣಿತ ಕಬ್ಬಿನ ಕಡಲೆಯಾದರೆ, ಲ್ಯಾಟಿನ್ ತುಂಬಾ ನೀರಸ; ವಿಜ್ಞಾನದ ವಿಷಯಗಳೇನೋ ಕುತೂಹಲಕಾರಿ, ಆದರೆ ಬೋಧಕರ ಸತ್ವರಹಿತ ಬೋಧನೆ ತಲೆಚಿಟ್ಟು ಹಿಡಿಸು ವಂತಿದ್ದವು; ಇತಿಹಾಸದ ಪಾಠಗಳಲ್ಲಿ ಮಾತ್ರ ಎಲ್ಲಿಲ್ಲದ ಆಸಕ್ತಿ. ಒಟ್ಟಿನಲ್ಲಿ ಶಾಲಾ ವರದಿಗಳು ನಿರಾಶಾದಾಯಕವಾಗಿರುತ್ತಿದ್ದು, ದೊಡ್ಡಮ್ಮ ಆಗಾಗ್ಗೆ ಕುಪಿತಗೊಳ್ಳು ತ್ತಿದ್ದಳು. ಅವನ ಶಾಲೆಯ ಪ್ರಗತಿಯ ಬಗೆಗೆ ಗಂಡನಿಗೂ ದೂರಿತ್ತಳು. ವಾರ್ತಾ ಪತ್ರಿಕೆಗಳ-ಕೊಲೆ ದರೋಡೆ, ಪತ್ತೇದಾರಿ ಲೇಖನಗಳನ್ನು ಅವನು ಹೆಚ್ಚು ಗಮನಹರಿ ಸುವುದೇ ಇದಕ್ಕೆ ಕಾರಣವೆಂಬ ಒಗ್ಗರಣೆ ಬೇರೆ. ಒಂದು ದಿನ ರಾತ್ರಿ ಭೋಜನದ ಸಮಯದಲ್ಲಿ ದೊಡ್ಡಪ್ಪನಿಂದ ಆಲ್ಬರ್ಟ್‌ನ ವಿಚಾರಣೆ. ಪತ್ರಿಕೆಗಳನ್ನು ಓದುವುದನ್ನು ಒಪ್ಪಿಕೊಂಡರೂ, ಅವನು ಗಮನಹರಿಸುವುದು ಪ್ರಚಲಿತ ರಾಜಕೀಯ ಮತ್ತು ಪ್ರಪಂಚದ ವಿದ್ಯಮಾನಗಳ ಕಡೆಗೆ ಎಂಬ ಉತ್ತರ. ಶಾಲಾ-ತನಿಖಾಧಿಕಾರಿ ದೊಡ್ಡಪ್ಪ ಅಷ್ಟಕ್ಕೇ ಒಪ್ಪಿಕೊಳ್ಳುವವನಲ್ಲ. ಫ್ರಾನ್ಸಿನ ಮಂತ್ರಿಮಂಡಳದ ಸದಸ್ಯರ ಪಟ್ಟಿ, ಬಾಲ್ಕನ್ ರಾಜಕುಮಾರರ ಬಿರುದಾಂಕಿತಗಳ ವಿವರಗಳನ್ನೊಳಗೊಂಡ ಹಲವಾರು ಪ್ರಶ್ನೆಗಳ ಸುರಿಮಳೆಗಯ್ದ. ಆಲ್ಬರ್ಟ್ ತಡವರಿಸದೆ ಅವುಗಳಿಗೆಲ್ಲಾ ಸರಿಯಾದ ಉತ್ತರ ನೀಡಿದ್ದ. ಚಕಿತನಾದ ದೊಡ್ಡಪ್ಪ ಸೋಫಿಯಾಳತ್ತ ಮುಗುಳುನಗೆ ಬೀರಿದ. ಅವಳೇ

ಸೋಲು ಅನುಭವಿಸಬೇಕಾಯಿತು. ಮನೆಗೆಲಸ ಮುಗಿಸಿದ ನಂತರ ಸ್ವಲ್ಪ ಸಮಯ ಪತ್ರಿಕೆಗಳನ್ನು ಓದಬಹುದೆಂಬ ದೊಡ್ಡಪ್ಪನ ಆಶೀರ್ವಾದದ ಮುದ್ರೆ ದೊರೆಯಿತು.

ಮುಲ್‌ಹೌಸ್‌ನ ಶಾಲೆಯ ಸಂಗೀತ ಶಿಕ್ಷಕ ಯುಗಿನಿ ಮಂಚ್ ಯುರೋಪಿನಲ್ಲೆಲ್ಲಾ ಹೆಸರಾಂತ ಸಂಗೀತ-ವಿದ್ವಾಂಸ. ಆಲ್ಬರ್ಟ್ ಆ ತನಕ ಕಲಿತ ಪಿಯಾನೋ ಮತ್ತು ಆರ್ಗನ್-ಸಂಗೀತ ಕೇವಲ ಯಾಂತ್ರಿಕವಾಗಿತ್ತೇ ಹೊರತು ಭಾವಪೂರ್ಣವಾಗಿಲ್ಲವೆಂಬುದನ್ನು ಗುರುತಿಸಲು ಮಂಚ್‌ಗೆ ಬಹಳ ಸಮಯ ಹಿಡಿಯಲಿಲ್ಲ. ಜತೆಗೆ ಅವನೀಗ ನಿರುತ್ಸಾಹದ ಮುದ್ದೆಯಾಗಿದ್ದ. ಸಂಗೀತಾಭ್ಯಾಸದಲ್ಲಿ ಮನೆಯಲ್ಲಿ ದೊಡ್ಡಮ್ಮ ಸಹಾಯ ಮಾಡುತ್ತಿದ್ದರೂ, ಸಂಗೀತದ ಮನೆಗೆಲಸ ಸಮರ್ಪಕವಾಗಿ ಇರುತ್ತಿರಲಿಲ್ಲ. ಇವೆಲ್ಲದರಿಂದ ಮಂಚ್ ಸಂಗೀತಾಭ್ಯಾಸ ಮಾಡಿಸುವುದಕ್ಕೆ ಬೇಸರಪಟ್ಟುಕೊಳ್ಳುತ್ತಿದ್ದ.

ಆಲ್ಬರ್ಟ್‌ನ ಮೊಂಡುತನ ಮುಲ್‌ಹೌಸ್‌ನಲ್ಲೂ ಮುಂದುವರಿಯುತ್ತಿದೆಯೆಂಬ ಸಮಾಚಾರವನ್ನು ತಿಳಿದ ತಂದೆ ಒಮ್ಮೆ ಅಲ್ಲಿಗೆ ಬಂದು ಶಿಕ್ಷಕರನ್ನು ಭೇಟಿ ಮಾಡಿದ. ಅವನೊಬ್ಬ ನಿರರ್ಥಕ ವಿದ್ಯಾರ್ಥಿಯೆಂಬುದು ಅವರೆಲ್ಲರ ಒಮ್ಮತದ ಅಭಿಪ್ರಾಯವಾಗಿತ್ತು. ಆದರೆ ಶಿಕ್ಷಕರು ನಿರೀಕ್ಷಿಸಿದಂತೆ ತಂದೆ ಬಾಲಕನನ್ನು ಶಾಲೆಯಿಂದ ಬಿಡಿಸಲಿಲ್ಲ. ಗದರಿಸಿ ಬುದ್ಧಿ ಸಹಾ ಹೇಳಲಿಲ್ಲ !

ಮೊಂಡುತನದ ಚಿಪ್ಪಿನೊಳಗೆ ಹುದುಗಿದ್ದ ಆಲ್ಬರ್ಟ್‌ನನ್ನು ಹೊರಗೆಳೆಯಲು ಕಾರಣ ಪುರುಷರಾದವರು ಶಾಲೆಗೆ ಹೊಸದಾಗಿ ಬಂದ ಡಾ|| ವೆಹಮನ್ ಎಂಬ ಶಿಕ್ಷಕರು. ಅವರ ಶಿಸ್ತು, ನಾಜೂಕು, ಪರಿಪೂರ್ಣತೆ ಮತ್ತು ನುಡಿದಂತೆ ನಡೆಯುವ ಸ್ವಭಾವ, ಆಲ್ಬರ್ಟ್‌ನನ್ನು ಅವರತ್ತ ಸೆಳೆಯಿತು. ವಿದ್ಯಾರ್ಥಿಗಳು ಮನೆಗೆಲಸದ ಪುಸ್ತಕಗಳನ್ನು ನಿಯತಕಾಲದಲ್ಲಿ ಅವರಿಗೊಪ್ಪಿಸಬೇಕು. ಅವರೂ ಸಹಾ ಅವುಗಳನ್ನು ತಿದ್ದಿ ನಿಗದಿತಕಾಲದಲ್ಲಿ ವಿದ್ಯಾರ್ಥಿಗಳಿಗೆ ಹಿಂದಿರುಗಿಸುತ್ತಿದ್ದರು. ಸಮಯಪ್ರಜ್ಞೆ ವಿದ್ಯಾರ್ಥಿಗಳಲ್ಲಿರಬೇಕೆಂದು ಬೋಧಿಸುತ್ತಿದ್ದ ಅವರೂ ಚಾಚೂ ತಪ್ಪದೆ ಅದನ್ನು ಅನುಸರಿಸುತ್ತಿದ್ದರು. ಪ್ರತಿಯೊಬ್ಬರೂ ನಿಗದಿತ ಕಾಲದಲ್ಲಿ ನಿಗದಿಯಾದ ಸ್ಥಳದಲ್ಲಿರಬೇಕಾಗುತ್ತಿತ್ತು. ಮೊದಲು ಶಿಕ್ಷಕರು ಆ ರೀತಿ ಬೋಧಿಸುತ್ತಿದ್ದರೂ ಅವರೇ ಆ ನಿಯಮವನ್ನು ಪಾಲಿಸುವುದು ಅಪರೂಪವಾಗಿತ್ತು. ವಿದ್ಯಾರ್ಥಿಗಳಿಗಿರಬೇಕಾದ ಕಲಿಯುವ ಶ್ರದ್ಧೆ ಮತ್ತು ಶಿಸ್ತುಗಳ ಆದರ್ಶ ಶಿಕ್ಷಕರಲ್ಲೂ ಇರಬೇಕೆಂಬ ಡಾ|| ವೆಹಮನ್ನರ ಅನಿಸಿಕೆ ಆಲ್ಬರ್ಟ್‌ಗೆ ತುಂಬಾ ಮೆಚ್ಚಿಕೆಯಾಗಿತ್ತು. ಅವರ ನಿಯಮಗಳನ್ನು ಅನುಸರಿಸಿ ಆಲ್ಬರ್ಟ್, ಅಂಥ ಆದರ್ಶಗಳನ್ನು ಕ್ರಮೇಣ ತನ್ನ ಜೀವನದಲ್ಲೂ ಮೈಗೂಡಿಸಿಕೊಂಡ. ಮುಂದೆ ಜೀವನದಲ್ಲಿ ಈ ಆದರ್ಶಗಳಿಂದಾದ ಸಹಾಯವನ್ನು ಆಲ್ಬರ್ಟ್ ಶ್ವೈಯಿಟ್ಸರ್ ತನ್ನ ಆತ್ಮಚರಿತ್ರೆಯಲ್ಲಿ ದಾಖಲಿಸಲು ಮರೆಯಲಿಲ್ಲ.

ಹೀಗೆ ಹೊಸದಾಗಿ ಮೂಡಿದ ಕರ್ತವ್ಯಪ್ರಜ್ಞೆ, ಪಾಠ ಪ್ರವಚನ ಮತ್ತು ಸಂಗೀತಾಭ್ಯಾಸಗಳಲ್ಲಿ ಗರಿಗೆದರಿ ಪ್ರಕಟವಾದವು. ಒಂದು ಸಾರಿ ಸಂಗೀತ ಶಿಕ್ಷಕ ಮಂಚ್, ಸೊಗಸಾದ ಕೀರ್ತನೆಯೊಂದರ ಸ್ವರ-ಪ್ರಸ್ತಾರವನ್ನು ಹೇಳಿಕೊಟ್ಟು ಮನೆಯಲ್ಲಿ ಅಭ್ಯಾಸ ಮಾಡುವಂತೆ ಹೇಳಿದ. ಜತೆಗೆ ಕಲಿಯಲು ಮನಸ್ಸಿಲ್ಲದವನ ಅಪಸ್ವರಕ್ಕೆ ಅದು ಗುರಿಯಾಗದಿರಲಾರದೆಂಬ ಮೂದಲಿಕೆಯ ನುಡಿಗಳೂ ಅವನ ಬಾಯಿಂದ ಹೊರಬಂದವು. ಆಗ ತಾನೇ ಚಿಪ್ಪಿನಿಂದ ಹೊರಬರುವ ಉತ್ಸಾಹದಲ್ಲಿದ್ದ ಆಲ್ಬರ್ಟ್‌ನ ಮನದಾಳಕ್ಕೆ ಮೂದಲಿಕೆಯ ಮಾತುಗಳಿಂದ ಏಟುಕೊಟ್ಟಂತಾಯಿತು. ಸವಾಲನ್ನು ಮನಸ್ಸಿನಲ್ಲೇ ಸ್ವೀಕರಿಸಿ ಶಾಲೆಯಿಂದ ಹೊರಬಂದ. ಸಂಗೀತದ ಕೃತಿಯಲ್ಲಿನ ಭಾವನೆಗಳನ್ನು ಮನಸ್ಸಿನಲ್ಲಿ ಮೂಡಿಸಿಕೊಂಡು ಪಿಯಾನೋ ನುಡಿಸುವ ಅಭ್ಯಾಸಕ್ಕೆ ಅಂದೇ ನಾಂದಿಯಾಯಿತು. ಹೃದಯ ಬಿಚ್ಚಿ, ಕೀರ್ತನೆಯ ಅರ್ಥವನ್ನು ಅರಿತು ಹಗಲಿರುಳು ಶ್ರದ್ಧೆಯಿಂದ ಅಭ್ಯಾಸ ಮಾಡಿದ. ಮುಂದಿನ ವಾರ ಆಲ್ಬರ್ಟ್ ಕೀರ್ತನೆಯನ್ನು ನುಡಿಸಿ ತೋರಿಸಿದಾಗ ಮಂಚ್ ಅವಾಕ್ಕಾದ. ಸಂಗೀತ ಪ್ರಜ್ಞೆ ಆಲ್ಬರ್ಟ್‌ನಲ್ಲಿ ಸುಪ್ತವಾಗಿರುವುದು ಅಂದು ಮಂಚ್‌ಗೆ ಅರಿವಾಯಿತು. ಸಂಗೀತ-ವಿದ್ಯೆಯಲ್ಲಿ ತಾನರಿತಿರುವುದನ್ನೆಲ್ಲಾ ಧಾರೆಯೆರೆಯಲು ಅರಸುತ್ತಿದ್ದ ವಿದ್ಯಾರ್ಥಿಯೊಬ್ಬ ಅವನಿಗೆ ಸಿಕ್ಕಂತಾಯಿತು. ಅಂದಿನಿಂದ ಅವರಿಬ್ಬರು ಗುರು-ಶಿಷ್ಯ ರೆನ್ನುವುದಕ್ಕಿಂತ ಸಹೋದ್ಯೋಗಿಗಳಂತಾದರು. ಮಂಚ್ ತನ್ನ ಸಂಗೀತದ ವಿದ್ವತ್ತನ್ನು ಅವನಿಗೆ ಪರಿಚಯಿಸಿ ಕಲಿಯುವಂತೆ ಶ್ರಮಿಸಿದ. ಆಲ್ಬರ್ಟ್‌ನ ಹದಿನೈದೇ ವರ್ಷದ ಕ್ರಿಶ್ಚಿಯನ್ ಉಪನಯನದ (CONFIRMATION) ನಂತರ ಸೆಂಟ್ ಸ್ಟೆಫೆನ್ಸ್ ಚರ್ಚ್‌ನಲ್ಲಿದ್ದ ಬೃಹತ್ ಆರ್ಗನ್‌ನಲ್ಲಿ ತರಬೇತಿ ಪಡೆಯುವ ಅವಕಾಶವನ್ನೂ ಮಾಡಿಕೊಟ್ಟ. ಮುಂದೆ ಮಂಚ್‌ನ ಗೈರುಹಾಜರಿಯಲ್ಲಿ ಅದನ್ನು ನುಡಿಸುವ ಹೆಮ್ಮೆಯ ಹಾಗೂ ಗುರುತರ ಜವಾಬ್ದಾರಿ ಅವನದೇ ಆಯಿತು.

ಸಂಗೀತಾಭ್ಯಾಸದಲ್ಲಾದಂತಹ ಬದಲಾವಣೆಗಳು ಇತರ ವಿಷಯಗಳಲ್ಲೂ ಪ್ರಕಟವಾದವು. ಶಾಲೆಯ ಧಾರ್ಮಿಕ ವಿಷಯಗಳ ಬೋಧಕ ಪಾದ್ರಿ, ವೆನ್ನಾಜೆಲ್ ಸಂಪ್ರದಾಯ ಶರಣ. ಧರ್ಮಗ್ರಂಥಗಳನ್ನು ಆಳವಾಗಿ ಅಭ್ಯಸಿಸಿ ಅವುಗಳ ಸಾರವನ್ನು ಅರಿತ ಒಳ್ಳೆಯ ಶಿಕ್ಷಕನೆಂದು ಹೆಸರು ಗಳಿಸಿದವ. ಮತ-ಧರ್ಮಗಳ ಕಟ್ಟಳೆಗಳನ್ನು ಮೀರಿ ಅವನೆಂದೂ ಬೋಧಿಸುತ್ತಿರಲಿಲ್ಲ. ಅವಕ್ಕೆ ಹೊರತೆನಿಸಿದ ವಿವರಣೆಗಳನ್ನು ಕೊಡುತ್ತಿರಲಿಲ್ಲ. ಧರ್ಮಸಿದ್ಧಾಂತ, ಶೃತಿ ಮತ್ತು ಸಂಪ್ರದಾಯಗಳ ಉಪನ್ಯಾಸ ನಡೆಯುತ್ತಿದ್ದಾಗ ವೈಚಾರಿಕ ಮನೋಭಾವದ ಆಲ್ಬರ್ಟ್‌ಗೆ ಸಂಶಯಗಳು ಉಂಟಾಗುತ್ತಿದ್ದವು. ಬೋಧಕ ಪಾದ್ರಿ, ವೆನ್ನಾಜೆಲ್‌ನನ್ನೇ ವೈಚಾರಿಕ ತರ್ಕಕ್ಕೆಳೆದು ತರಗತಿಯಲ್ಲೇ ಪೇಚಿಗೀಡು ಮಾಡುತ್ತಿದ್ದ. ಅವನೂ ಒಬ್ಬ ಪಾದ್ರಿಯ ಮಗನೆಂಬ

ಕಾರಣದಿಂದ ತನಗೆ ಅಗೌರವ ತೋರಿಸುತ್ತಿದ್ದಾನೆಂಬ ಭಾವನೆ ಒಂದು ಕಡೆಯಾದರೆ, ಕ್ರೈಸ್ತಧರ್ಮದ ಮೂಲಭೂತ ನಂಬಿಕೆಗಳಿಗೇ ಪೆಟ್ಟು ಕೊಡುತ್ತಿದ್ದಾನೆಂಬ ಸಿಟ್ಟು ಇನ್ನೊಂದು ಕಡೆ ಶಿಕ್ಷಕ ವೆನ್ನಾಜೆಲ್‌ಗೆ. ಧರ್ಮಸ್ವೀಕಾರದ ಉಪನಯನದ ವಯಸ್ಸಾಗುತ್ತಿರುವ ಬಾಲಕನಲ್ಲಿ ಧರ್ಮದ ವಿಷಯದಲ್ಲಿ ಅತ್ಯಂತ ಪೂಜ್ಯಭಾವನೆ ಮೂಡಿರಬೇಕು; ನಡತೆಯಲ್ಲಿ ಗಾಂಭೀರ್ಯವಿರಬೇಕು; ಆದರೆ ಕೆಲವು ಶಿಕ್ಷಕ-ಪಾದ್ರಿಗಳ ಮನಸ್ಸಿನಲ್ಲಿ ಆಲ್ಬರ್ಟ್ ಮತಧರ್ಮಕ್ಕೂ, ಗುರುಗಳಿಗೂ ಅಗೌರವ ತಳೆದಿದ್ದಾನೆಂಬ ಭಾವನೆಯುಂಟಾಯಿತು. ವಾಸ್ತವಿಕವಾಗಿ ಅವನಲ್ಲಿ ಅಂಥ ಭಾವನೆಗಳೇನೂ ಇರಲಿಲ್ಲ. ಮತಧರ್ಮಗಳ ಆಚರಣೆಗೆ ತಳಹದಿಯೊದ ತತ್ವಗಳ ನಿಜಾಂಶಗಳನ್ನರಿಯುವುದೇ ಅವನ ಗುರಿಯಾಗಿತ್ತು. ಇಂತಹ ಭಾವನೆಗಳನ್ನು ಹೊಂದಿರದ ಹಾಗೂ ಯಾವ ಅನುಮಾನಗಳನ್ನೂ ಪ್ರಶ್ನಿಸದ ಇತರ ವಿದ್ಯಾರ್ಥಿಗಳ ಸಮೂಹದಲ್ಲಿ ಅವನೊಬ್ಬ ಒಂಟಿಸಲಗನಂತಾದುದರಲ್ಲಿ ಸೋಜಿಗವೇನಲ್ಲ. ಆದರೂ ಉಪನಯನದ ಸಮಯದಲ್ಲಿ ಎಲ್ಲಾ ಧಾರ್ಮಿಕ-ವಿಧಿಗಳನ್ನು ವಿಧೇಯತೆ ಮತ್ತು ಸಮರ್ಪಣಾಭಾವದಿಂದ ನೆರವೇರಿಸಿ ಆಲ್ಬರ್ಟ್ ಎಲ್ಲರನ್ನು ಚಕಿತಗೊಳಿಸಿದ.

ಬಾಹ್ಯ ಜಗತ್ತಿನ ನಡೆವಳಿಕೆಗಳಲ್ಲೂ ಅವನ ವರ್ತನೆ ವಿಚಿತ್ರವಾಗಿದ್ದವು. ಸಂಕೋಚ ಪ್ರವೃತ್ತಿ, ಭಾವೋದ್ರೇಕಗಳಿಂದ ಹೊರಬರಲು ಅವನು ತೊಳಲಾಡುವುದನ್ನು ಗುರುತಿಸಲು ಸಾಧ್ಯವಿತ್ತು. ನೀಳಕಾಯದ, ಶಾಂತ ಸ್ವರೂಪದ ಯುವಕ, ತಟ್ಟನೆ ಸಿಡುಕುವ, ರೇಗಾಡುವ ವಾಚಾಳಿಯಾದ. ಅವನಿರುವಲ್ಲಿ ಮೂಢನಂಬಿಕೆ ಮತ್ತು ಸರಿಯಾದ ಅರಿವಿಲ್ಲದ ಯಾವುದೇ ಸಂಭಾಷಣೆ ನಡೆಯುತ್ತಿದ್ದರೆ, ನಡುವೆ ಬಾಯಿ ಹಾಕಿ ಅವಕ್ಕೆ ತನ್ನದೇ ಆದ ವ್ಯಾಖ್ಯಾನಗಳನ್ನು ನೀಡಲು ಹಿಂಜರಿಯುತ್ತಿರಲಿಲ್ಲ. ಅವನ ಟೀಕೆಗಳು ತರ್ಕಬದ್ಧವಾಗಿರುತ್ತಿದ್ದವಲ್ಲದೆ, ಆಳವಾದ ಚಿಂತನೆಯಿಂದ ಹೊರಬರುತ್ತಿದ್ದವೆಂಬುದನ್ನು ಯಾರೂ ಅಲ್ಲಗಳೆಯುವಂತಿರಲಿಲ್ಲ. ಆಗಿನ ಸಮಾಜದಲ್ಲಿ ಇಂತಹ ವಾದಗಳನ್ನು ಅಂಗೀಕರಿಸುವ ಮನೋಭಾವದವರು ಹೆಚ್ಚು ಮಂದಿ ಇರಲಿಲ್ಲ. ಹೀಗಾಗಿ ನಾಲ್ಕಾರು ಜನ ಸೇರಿದೆಡೆ ಅವನೊಬ್ಬ ಅನಿಷ್ಟ ಪೀಡೆಯೆನಿಸಿದ. ಅವನೊಬ್ಬ ದುರಹಂಕಾರಿಯೆಂದು ದೊಡ್ಡಮ್ಮ ಜರಿಯುತ್ತಿದ್ದಳು. ಇತರರು ಚರ್ಚಿಸುತ್ತಿರುವಲ್ಲಿ ಆಲ್ಬರ್ಟ್ ಬಾಯಿ ತೆರೆಯಬಾರದೆಂದು ತಂದೆ ತಾಕೀತು ಮಾಡಬೇಕಾಯಿತು. ತಡವಾಗಿ ಶುರುವಾದ ವಸಂತಮಾಸದಲ್ಲಿ ತಟ್ಟನೆ ಅರಳಿದ ಹೂವಿನಂತಾದ ಆಲ್ಬರ್ಟ್, ಎಲ್ಲರ ಗಮನ ಸೆಳೆದನೇ ಹೊರತು ಯಾರಿಗೂ ಅವಿಧೇಯನಾಗಿರಬೇಕೆಂಬ ಭಾವನೆ ಅವನದಾಗಿರಲಿಲ್ಲ.

ಇತಿಹಾಸದ ಪಾಠಗಳು ಮತ್ತು ವಿಜ್ಞಾನದ ವೈಚಿತ್ರ್ಯಗಳು ಈ ಸಮಯದಲ್ಲಿ ಆಲ್ಬರ್ಟ್‌ನ ತೀವ್ರ ಗಮನ ಸೆಳೆದ ವಿಷಯಗಳು. ಮಾನವ ಜೀವನದ ಪರಿ ಮತ್ತು

ಬೆಳವಣಿಗೆಯನ್ನರಿಯಲು ಇತಿಹಾಸದ ಅಭ್ಯಾಸವೇ ಕೀಲಿಕೈಯೆಂಬುದರ ಅರಿವು ಅವನಿಗಿತ್ತು. ಆಗಿನ್ನೂ ಹೊರಬರುತ್ತಿದ್ದ ಹೊಸ ಹೊಸ ವೈಜ್ಞಾನಿಕ ಅದ್ಭುತಗಳು ಅವನಲ್ಲಿ ಸುಪ್ತವಾಗಿದ್ದ ವೈಚಾರಿಕ ಮನೋಭಾವಕ್ಕೆ ಇಂಬುಕೊಡುವಂತಿದ್ದವು. ಆದರೆ ವಿಜ್ಞಾನ-ಶಿಕ್ಷಕರ ಬೋಧನೆ ಮತ್ತು ಆಗ ಲಭ್ಯವಿದ್ದ ವಿಜ್ಞಾನ ಗ್ರಂಥಗಳಲ್ಲಿನ ವಿವರಣೆಗಳು ಅವನ ಜ್ಞಾನದಾಹವನ್ನು ಇಂಗಿಸಲಾರದಾದವು. ಇತಿಹಾಸದ ಘಟನೆಗಳಲ್ಲಿನ ತೊಡಕು ಮತ್ತು ತಿರುವು-ಮುರುವುಗಳ ಬಗೆಗೆ ಅವನಲ್ಲಿ ಸಾಕಷ್ಟು ಅನುಮಾನಗಳಿದ್ದವು. ಇತಿಹಾಸದ ಪ್ರಕರಣಗಳಿಗೂ, ಮತೀಯ ವಿಚಾರಗಳಿಗೂ ನಿಕಟಸಂಬಂಧಗಳಿದ್ದರೂ, ಅವುಗಳಲ್ಲಿ ಕೆಲವಾದರೂ ಕಟ್ಟುಕತೆಗಳೆಂಬ ಅನುಮಾನ ಅವನಿಗಿತ್ತು. ಅದರಿಂದ ಪ್ರತಿಯೊಂದು ವಿಚಾರದಲ್ಲೂ ವೈಯಕ್ತಿಕ ಅನುಭವವೇ ಮುಖ್ಯವೆಂಬುದು ಅವನ ಅಭಿಪ್ರಾಯ. ಈ ಭಾವನೆಗಳ ಸಂಘರ್ಷಣೆಯ ಪರಿಣಾಮವೇ ಅವನ ವಿಚಿತ್ರ ನಡೆವಳಿಕೆಗಳೆಂದರೆ ತಪ್ಪಾಗಲಾರದು.

ಮುಲ್‌ಹೌಸ್ ಪ್ರೌಢಶಾಲೆಯ ಕೊನೆಯ ದಿನಗಳೂ ಸಮೀಪಿಸಿದವು. ಅವನೀಗ ಅಂತಿಮ ಪಬ್ಲಿಕ್ ಪರೀಕ್ಷೆಗೆ ಕೂರಬೇಕಾಗಿತ್ತು. ಅದನ್ನು ಜಿಲ್ಲಾ ವಿದ್ಯಾಧಿಕಾರಿಯೇ ಖುದ್ದಾಗಿ ನಡೆಸುವ ಸಂಪ್ರದಾಯವಿತ್ತು. ಪರೀಕ್ಷೆಗೆ ಹಾಜರಾಗುವ ವಿದ್ಯಾರ್ಥಿಗಳೂ ಗಂಭೀರ ಉಡುಗೆ-ತೊಡುಗೆಗಳನ್ನು ತೊಟ್ಟುಕೊಳ್ಳಬೇಕೆಂಬ ನಿಯಮ ಕೂಡ ಇತ್ತು. ಪಾಠ-ಪ್ರವಚನಗಳ ಬಗೆಗೇ ಆಸಕ್ತಿವಹಿಸದ ಆಲ್ಬರ್ಟ್, ಈ ಬಗೆಗೆ ಹೆಚ್ಚು ತಲೆಕೆಡಿಸಿಕೊಂಡಿರಲಿಲ್ಲ. ಅದಕ್ಕಾಗಿ ಬೇರೆ ಉಡುಗೆಗಳನ್ನು ತಯಾರು ಮಾಡಿಕೊಂಡಿರಲಿಲ್ಲ. ದೊಡ್ಡಪ್ಪನ ಹಳೇ ಕೋಟು ಷರಾಯಿಗಳನ್ನು ಶುಚಿ ಮಾಡಿ, ಅಲ್ಪಸ್ವಲ್ಪ ಬದಲಾವಣೆ ಮಾಡಿಸಿದ. ಅವನ್ನು ಧರಿಸಿ ಪರೀಕ್ಷೆಗೆ ಹೋದ ದೃಶ್ಯ ಬಲು ಮೋಜಿನದಾಗಿತ್ತು. ಆಜಾನುಬಾಹುವಾಗಿ ಬೆಳೆದಿದ್ದ ಆಲ್ಬರ್ಟ್‌ನ ಶರೀರದ ಎಲ್ಲಾ ಭಾಗಗಳನ್ನು ಅವು ಸರಿಯಾಗಿ ಮುಚ್ಚಿರಲಿಲ್ಲ. ನಿಜ ಸಂಗತಿಯೆಂದರೆ ಸರ್ಕಸ್‌ನ ವಿದೂಷಕನ ವೇಷದಂತಿತ್ತು ಅವನ ಉಡುಗೆ. ಪರೀಕ್ಷಾ ಕೊಠಡಿಗೆ ಕಾಲಿಡುತ್ತಿದ್ದಂತೆ ಅವನ ವೇಷವನ್ನು ನೋಡಿ ಇತರ ವಿದ್ಯಾರ್ಥಿಗಳು ಕೇಕೆ ಹಾಕಿ ನಕ್ಕು ಗಲಾಟೆಯಾರಂಭಿಸಿದರು. ಒಳಗಿನ ಕೊಠಡಿಯಲ್ಲಿದ್ದ ಪರೀಕ್ಷಕರ ಗಮನ ಈ ಕಡೆ ಸೆಳೆಯಿತು. ಅವರು ಹೊರಬಂದು ನೋಡಿದಾಗ ಅಲ್ಲಿನ ಗಲಾಟೆಗೆ ಆಲ್ಬರ್ಟ್‌ನೇ ಕಾರಣವೆಂದು ತಿಳಿಯಿತು. ಅವನ ಪರೀಕ್ಷೆಯನ್ನು ಮೊದಲು ಮುಗಿಸುವುದರಿಂದ ಸಮಸ್ಯೆ ಬಗೆಹರಿಯುತ್ತದೆಂದು, ಆಲ್ಬರ್ಟ್‌ನನ್ನೇ ಒಳಗೆ ಕರೆಸಿದರು. ಸ್ವತಃ ಜಿಲ್ಲಾ-ವಿದ್ಯಾಧಿಕಾರಿಯೇ ಪ್ರಶ್ನೆಗಳನ್ನು ಕೇಳಿದ :

''ಗ್ರೀಕ್ ನೌಕೆಗಳು ದಡ ಸೇರಿದ ಬಗೆಗೆ ಹೋಮರ್‌ನ ಅಭಿಪ್ರಾಯಗಳೇನು ?''

–''ಗೊತ್ತಿಲ್ಲ ಸಾರ್.''

''ಮಳೆ ಹೇಗಾಗುತ್ತದೆ ?''

– ''ಆವಿ ಘನೀಭವಿಸುವುದರಿಂದ ಎಂದು ಪುಸ್ತಕಗಳಲ್ಲಿ ಬರೆದಿದ್ದಾರೆ.''

''ಹೈಮನ್ ಆಫ್ ವೀನಸ್ - ಕವಿತೆಯ ಕರ್ತೃ ಯಾರು ?''

– ''ಅರಿಸ್ಟೋಫೇನಸ್ ಎಂದು ನನ್ನ ಅಂದಾಜು.''

''ಶ್ವೆಯಿಟ್ಸರ್, ನೀನೊಬ್ಬ ಮೂರ್ಖ. ಶತದಡ್ಡ. ಅದು ಷಪ್ಪೋನ (SAPPHO)ನ ಉತ್ತಮ ಕವನವಲ್ಲವೇ ?''

ಆಲ್ಬರ್ಟ್‌ನ ಮೈ ಬೆವರಿತು. ಕೈಕಾಲು ನಡುಗಿದವು. ಮುಂದೇನು ಎಂದು ಆಲೋಚಿಸುತ್ತಿರುವಲ್ಲಿ ಪರೀಕ್ಷಕ ಇತಿಹಾಸದ ಬಗೆಗಿನ ಪ್ರಶ್ನೆಗಳನ್ನು ಆರಂಭಿಸಿದ. ಈ ವಿಭಾಗದಲ್ಲಿ ಅವನು ಕೇಳಿದ ಪ್ರಶ್ನೆಗಳಿಗೆ ಆಲ್ಬರ್ಟ್‌ನ ಉತ್ತರಗಳು ಸಮರ್ಪಕ ವಾಗಿದ್ದವು. ಜಿಲ್ಲಾ ವಿದ್ಯಾಧಿಕಾರಿಯೂ ಇತಿಹಾಸ ಪ್ರಿಯನೇ ಆಗಿದ್ದ. ಇತಿಹಾಸದ ಹಲವು ತೊಡಕುಗಳಿಗೆ, ಅವನು ನಂಬಿದ್ದ ಉತ್ತರಗಳನ್ನೇ ಆಲ್ಬರ್ಟ್ ನೀಡಿದ್ದು ಅವನ ಮನಸ್ಸನ್ನು ಮುದಗೊಳಿಸಿತು. ಕಲಿಕೆಯ ಆಳವನ್ನರಿಯಲು ಹಲವು ರೀತಿಯ ತಿರುವು ಮುರುವಿನ ಪ್ರಶ್ನೆಗಳನ್ನು ಹಾಕಿ ಅವನ ವಿದ್ವತ್ತನ್ನು ಅಳೆದನು. ಆಲ್ಬರ್ಟ್ ಮೊದಲು ಉತ್ತರಿಸಿದ ಮೂರ್ಖತನದ ಉತ್ತರಗಳು ಪರೀಕ್ಷಕನ ಮನಸ್ಸಿನಿಂದ ಮಾಯವಾದವು. ಆಲ್ಬರ್ಟ್‌ನನ್ನು ಉತ್ತಮ ದರ್ಜೆಯಲ್ಲೇ ತೇರ್ಗಡೆ ಮಾಡಿದ್ದಲ್ಲದೆ ಮುಂದೆ ಇತಿಹಾಸದ ವಿಷಯದಲ್ಲೇ ಪರಿಣಿತನಾಗೆಂಬ ಹಿತವಚನ ನುಡಿದು ಬೀಳ್ಕೊಟ್ಟನು !

ಹದಿನೆಂಟರ ಹರೆಯದ ಆಲ್ಬರ್ಟ್ ಶ್ವೆಯಿಟ್ಸರ್, ಈಗ ನೀಳ ಹಾಗೂ ದೃಢಕಾಯದ, ಎಲ್ಲರ ಗಮನ ಸೆಳೆಯುವ ಯುವಕ. ಪ್ರೌಢಶಾಲೆಯ ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ತೇರ್ಗಡೆಯಾದದ್ದು ಕೋಶದಿಂದ ಹೊರಬಂದ ಚಿಟ್ಟೆ ಗರಿಗೆದರಿ ಹಾರುವಂತಾಯಿತು. ವಿಶಾಲ ವಿಶ್ವವೇ ಈಗ ಅವನ ರಂಗಸ್ಥಳ. ಸ್ವತಂತ್ರ ಜೀವನ ನಡೆಸಬೇಕೆಂಬ ಅಭಿಲಾಷೆ. ಜೀವನದ ಸವಾಲುಗಳನ್ನು ಎದುರಿಸುವ ಹುಮ್ಮಸ್ಸು. ಆಗತಾನೇ ಬೀದಿಗೆ ಬಂದಿದ್ದ ಬೈಸಿಕಲ್ಲಿನತ್ತ ಮೊದಲ ಆಕರ್ಷಣೆ. ಖರೀದಿಸಲು ಬೇಕಾದ ಹಣ ಗಳಿಸಲು ಕೆಲವು ಮಕ್ಕಳಿಗೆ ಮನೆ-ಪಾಠ ಹೇಳಿಕೊಟ್ಟು ಸಂಪಾದನೆ ಮಾಡಿದ. ಅದರಿಂದಲೇ ತಮ್ಮನಿಗೂ ಬೈಸಿಕಲ್ ಕೊಡಿಸಿದ; ಅಮ್ಮನನ್ನು ವಿಹಾರಕ್ಕಾಗಿ ಸ್ವಿಟ್ಸರ್‌ಲ್ಯಾಂಡಿಗೂ ಕಳುಹಿಸಿದ. ತನ್ನಲ್ಲಿನ ಇಷ್ಟುಮಟ್ಟಿನ ಬದಲಾವಣೆ ಗಳಿಗೆ ಕಾರಣರಾದ ಮುಲ್‌ಹೌಸ್‌ನ ದೊಡ್ಡಪ್ಪ, ದೊಡ್ಡಮ್ಮ ಮತ್ತು ಶಿಕ್ಷಕರಿಗೆ ಕೃತಜ್ಞನೆನಿಸಿದರೂ, ಬಹಿರಂಗವಾಗಿ ವ್ಯಕ್ತಪಡಿಸಲಾರದ ನಾಚಿಕೆ. ಮುಂದೆ ಹಲವು ಸಂದರ್ಭಗಳಲ್ಲಿ ಅವರೆಲ್ಲರ ಉಪಕಾರಸ್ಮರಣೆ ಶ್ವೆಯಿಟ್ಸರ್ ಮಾಡಿದ್ದಾನೆ.

**ಪ್ಯಾರಿಸ್ - ಮೊದಲ ಅನುಭವ**

ಆಲ್ಬರ್ಟ್‌ನ ಇನ್ನೊಬ್ಬ ದೊಡ್ಡಪ್ಪ ಚಾರ್ಲ್ಸ್ ಶ್ವೈಯಿಟ್ಸರ್ ಬಹುಕಾಲದಿಂದ ಪ್ಯಾರಿಸ್‌ನಲ್ಲಿ ನೆಲೆಸಿದ್ದ. ಆಲ್ಬರ್ಟ್ ಹೈಸ್ಕೂಲ್ ಪರೀಕ್ಷೆಯಲ್ಲಿ ಮೊದಲ ದರ್ಜೆಯಲ್ಲಿ ತೇರ್ಗಡೆಯಾದದ್ದನ್ನು ತಿಳಿದಾಕ್ಷಣ ಪ್ಯಾರಿಸ್‌ನಲ್ಲಿ ಕೆಲಕಾಲ ಇದ್ದು ಹೋಗಲು ಆಹ್ವಾನ ಕಳಿಸಿದ. ಪ್ಯಾರಿಸ್‌ನ ಸಂಸ್ಕೃತಿ, ಕಲೆ, ಸಂಗೀತ, ನಾಗರಿಕತೆಗಳ ಬಗೆಗೆ ತಿಳಿಯುವ ಆಸಕ್ತಿ ಹೊಂದಿದ್ದ ಆಲ್ಬರ್ಟ್ ಕೂಡಲೇ ಅಲ್ಲಿಗೆ ಪ್ರಯಾಣ ಮಾಡಿದ. ಪ್ಯಾರಿಸನ್ನು ತಲುಪಿದ ಒಂದೆರಡು ದಿನಗಳಲ್ಲೇ ಅಲ್ಲಿನ ಅರಮನೆಗಳು, ವಸ್ತು ಪ್ರದರ್ಶನಾಲಯಗಳು, ಚಿತ್ರಶಾಲೆಗಳು, ನಾಟಕ ಮಂದಿರಗಳು ಮತ್ತು ಉದ್ಯಾನವನಗಳನ್ನೆಲ್ಲಾ ಸುತ್ತಾಡಿ ಮುಗಿಸಿದ. ಅವನು ತಿರುಗಾಡಿದೆಡೆಗಳಲೆಲ್ಲಾ ಮದ್ಯಪಾನನಿರತ, ಕೈಕೈ ಹಿಡಿದು ಮೋಜುಮಾಡುವ ಸ್ತ್ರೀ-ಪುರುಷರ ಗುಂಪುಗಳು, ಇಲ್ಲವೇ ಕಾಡುಹರಟೆಗಳಲ್ಲಿ ಕಾಲಕಳೆಯುತ್ತಿದ್ದ ಜನಜಂಗುಳಿ ಇರುತ್ತಿದ್ದುದು ಸಾಮಾನ್ಯ ದೃಶ್ಯವಾಗಿತ್ತು. ಪ್ಯಾರಿಸ್‌ನ ಜನ ಪ್ರಾಪಂಚಿಕ ಸುಖ, ವಿಷಯಾಸಕ್ತಿಗಳ ದಾಸರೆಂಬ ಭಾವನೆ ಅವನಲ್ಲಿ ಸಹಜವಾಗಿ ಮೂಡಿತು. ಪ್ಯಾರಿಸ್ ಬಗೆಗಿನ ಒಳ್ಳೆಯ ಅಭಿಪ್ರಾಯ ಮಾಯವಾಯಿತು. ಪ್ಯಾರಿಸ್‌ನ ಅನುಭವದ ಬಗೆಗೆ ದೊಡ್ಡಮ್ಮ ಮಥಿಲ್ಡ ವಿಚಾರಿಸಿದಾಗ ತನಗಾದ ನಿರಾಶೆಯನ್ನು ಮುಚ್ಚು ಮರೆಯಿಲ್ಲದೆ ಹೊರಗೆಡಹಿದ. ಅಲ್ಲಿಯ ನೈಜ ಸಂಸ್ಕೃತಿಯ ಪರಿಚಯವಿದ್ದ ಮಥಿಲ್ಡ ತಿರುಗಾಡಲು ಅವನೊಬ್ಬನನ್ನೇ ಕಳುಹಿಸಿದ್ದರ ಪರಿಣಾಮವಿದೆಂದು ಅರ್ಥ ಮಾಡಿಕೊಂಡಳು. ಅವನಿಗೆ ಪ್ಯಾರಿಸ್ ಸಂಸ್ಕೃತಿಯ ಒಂದು ಮುಖ ಮಾತ್ರ ಪರಿಚಯವಾಗಿದ್ದಕ್ಕೆ ವಿಷಾದಿಸಿದಳು. ಆಲ್ಬರ್ಟ್‌ಗೆ ಆಸಕ್ತಿಯಿದ್ದ ಸಂಗೀತದ ಬಗೆಗೆ ಹೆಚ್ಚಿನ ವಿಷಯ ತಿಳಿದುಕೊಳ್ಳುವ ಏರ್ಪಾಡು ಮಾಡಿದಳು. ಪ್ಯಾರಿಸ್‌ನ ಸೇಂಟ್ ಸೆಲ್ಪೀಸ್ ಚರ್ಚ್‌ನ ಹೆಸರಾಂತ ಬೃಹತ್ ಆರ್ಗನ್ ಮತ್ತು ಅದನ್ನು ನುಡಿಸುವ ಮಾರೀ ವೈಡರ್‌ನ ಭೇಟಿಗೆ ಪರಿಚಯ ಪತ್ರ ಬರೆದುಕೊಟ್ಟು ಅಲ್ಲಿಗೆ ಹೋಗಲು ಪ್ರೋತ್ಸಾಹಿಸಿದಳು.

ಮಾರೀ ವೈಡರ್ ತನ್ನ ಇಪ್ಪತ್ತೈದನೇ ವಯಸ್ಸಲ್ಲೇ ಸಂಗೀತ ಶಾಸ್ತ್ರದ ಪ್ರಾಧ್ಯಾಪಕನಾಗಿ ಕೀರ್ತಿ ಗಳಿಸಿದವ. ಯುರೋಪಿನಲ್ಲೆಲ್ಲಾ ಹೆಸರಾಂತ ಸಂಗೀತ ವಿದ್ವಾಂಸ. ಸೇಂಟ್ ಸೆಲ್ಪೀಸ್‌ನಲ್ಲಿ ಅವನು ನುಡಿಸುತ್ತಿದ್ದ ಆರ್ಗನ್ ಬೃಹದಾಕಾರದ ಉಪಕರಣ. ಅದರಲ್ಲಿ ಐದು ಮ್ಯಾನ್ಯುಯಲ್‌ಗಳೇ ಅಲ್ಲದೆ, ನೂರಕ್ಕಿಂತ ಹೆಚ್ಚು ಸ್ಪೀಕಿಂಗ್ ಸ್ಟಾಫ್‌ಗಳಿದ್ದವು. ದಾರಿಯಲ್ಲಿನ ಕೆಲವು ಅನಿವಾರ್ಯ ಕಾರಣಗಳಿಂದ ಆಲ್ಬರ್ಟ್, ನಿಗದಿತ ದಿನ ಸರಿಯಾದ ಸಮಯಕ್ಕೆ ಹಾಜರಾಗಲಾಗಲಿಲ್ಲ. ಆಲ್ಬರ್ಟ್‌ನನ್ನು ಮೊದಲು ನೋಡಿದಾಗ ಹಳ್ಳಿಗಾಡಿನ ಈ ಪೋರನಿಗೆ ಸಂಗೀತದಲ್ಲಿ ಹೆಚ್ಚು ಅನುಭವ ಇರಲಾರದೆಂದು ಅಸಡ್ಡೆಯಿಂದಲೇ ಮಾತಾಡಿದ. ಆರ್ಗನ್ ಕಡೆ ಕೈ

ತೋರಿಸಿ ಅವನಿಗಿಷ್ಟವಾದ ಕೃತಿಯೊಂದನ್ನು ನುಡಿಸುವಂತೆ ಆಜ್ಞಾಪಿಸಿದ. ದೈತ್ಯ-ಯಂತ್ರದ ಮೇಲೆ ಕೈಯಾಡಿಸಿ ಅದರ ವೈವಿಧ್ಯಗಳನ್ನು ಅರಿತುಕೊಳ್ಳಲು ಆಲ್ಬರ್ಟ್‌ಗೆ ಸ್ವಲ್ಪ ಸಮಯ ಹಿಡಿಯಿತು. ತನಗೆ ಪ್ರಿಯವಾದ ಬಾಕ್‌ನ ಫ್ಯೂಜ್ (BACH'S FUGE) ರಾಗದ ಕೃತಿಯ ರಾಗಾಲಾಪನೆ ಆರಂಭಿಸಿದ. ಹಿಂದೆಂದೂ ಲಭ್ಯವಿರದ ಅತ್ಯಂತ ವಿಸ್ತಾರವಾದ ಆರ್ಗನ್‌ನಲ್ಲಿ ತನ್ನ ಮನಸ್ಸಿಗೆ ತೃಪ್ತಿಯಾಗುವಂತೆ ಆಲ್ಬರ್ಟ್ ಸಂಗೀತ-ಲಹರಿಯನ್ನು ಹೊರಗೆಡಹಿದ. ಅಷ್ಟೊಂದು ಹೃದಯಂಗಮ ಹಾಗೂ ಜೀವಂತವಾಗಿ ಆ ರಾಗವನ್ನು ಅವನೆಂದೂ ನುಡಿಸಿರದ ಅನುಭವ ಅಂದು ಆಯಿತು. ಮುಂದಿನ ಕೆಲ ತಾಸುಗಳು ಸಂಗೀತ ಸುಧೆಯ ಪ್ರವಾಹದಲ್ಲಿ ಇಡೀ ಚರ್ಚ್ ತೇಲಿದಂತಿತ್ತು. ವೈಡರ್ ಆನಂದಬಾಷ್ಪದಿಂದ ತಲೆದೂಗಿದ. ಅಷ್ಟು ಎಳೆಯ ವಯಸ್ಸಿನ ಬಾಲಕನೊಬ್ಬನಲ್ಲಿ ಅಂಥ ಸಂಗೀತ-ಪ್ರಭೆಯನ್ನು ಅವನೆಂದೂ ನೋಡಿರಲಿಲ್ಲ. ಆಲ್ಬರ್ಟ್‌ನ ಭುಜ ತಟ್ಟಿ ಶಹಬಾಷ್‌ಗಿರಿ ಕೊಟ್ಟ. ಅವನನ್ನು ತನ್ನ ಶಿಷ್ಯನನ್ನಾಗಿ ಸ್ವೀಕರಿಸುವ ಆಶಯವನ್ನೂ ವ್ಯಕ್ತಪಡಿಸಿದ. ಪ್ಯಾರಿಸ್‌ನಲ್ಲಿದ್ದು, ಶುಲ್ಕ ತೆತ್ತು ಅಭ್ಯಾಸ ಮಾಡುವಷ್ಟು ಅನುಕೂಲ ಅವನಿಗಿಲ್ಲವೆಂಬುದನ್ನರಿತ ವೈಡರ್, ಅವನಿಗೆ ಉಚಿತವಾಗಿ ಸಂಗೀತವಿದ್ಯೆಯನ್ನು ಧಾರೆಯೆರೆಯುವುದಾಗಿ ಹುರಿದುಂಬಿಸಿದ. ಆಲ್ಬರ್ಟ್ ಪ್ಯಾರಿಸಿನಲ್ಲಿದ್ದಷ್ಟೂ ಸಮಯ ಅವನನ್ನು ತನ್ನ ಜೊತೆಯಲ್ಲೇ ಉಳಿಸಿಕೊಂಡ. ಸಂಗೀತ ಕಚೇರಿಗಳಿಗೆ ಕರೆದುಕೊಂಡು ಹೋಗಿ ಅವನಿಂದಲೂ ಸಂಗೀತ-ವಾದ್ಯಗಳನ್ನು ನುಡಿಸಿಸಿದ. ಇತರ ಸಂಗೀತಗಾರರಿಗೆ ಅವನನ್ನು ಪರಿಚಯಿಸಿದ. ಮುಂದೆ ಬಿಡುವಿದ್ದಾಗಲೆಲ್ಲಾ ಆಲ್ಬರ್ಟ್ ಪ್ಯಾರಿಸ್‌ಗೆ ಬಂದು ವೈಡರ್‌ನೊಡನಿದ್ದು ಸಂಗೀತಾಭ್ಯಾಸ ಮಾಡುವ ಪರಿಪಾಠವಿಟ್ಟುಕೊಂಡಿದ್ದ. ಅವರಿಬ್ಬರ ಸಹಯೋಗ ಬಹುಕಾಲ ಮುಂದುವರಿಯಿತು.

## ೪. ಉನ್ನತ ವ್ಯಾಸಂಗ

ಕ್ರೈಸ್ತ-ಮತ-ಧರ್ಮ ಬೋಧನೆ ಶ್ವೈಯಿಟ್ಸರ್ ಮನೆತನದ ಪರಂಪರಾನುಗತ ವೃತ್ತಿ. ಆಲ್ಬರ್ಟ್ ಶ್ವೈಯಿಟ್ಸರ್‌ಗೂ ಬಾಲ್ಯದಿಂದಲೂ ಧಾರ್ಮಿಕ ಮತ್ತು ಪುರಾಣ-ತತ್ವಗಳ ಮರ್ಮವನ್ನರಿಯುವ ಕುತೂಹಲ. ಆ ದಿಸೆಯಲ್ಲೇ ಉನ್ನತ ವ್ಯಾಸಂಗ ಮಾಡಿ, ಧರ್ಮಬೋಧನೆಯ ವೃತ್ತಿಯಲ್ಲೇ ಮುಂದುವರಿಯಬೇಕೆಂಬುದು ಅವನ ಮತ್ತು ಕುಟುಂಬದವರ ಅಭಿಲಾಷೆಯಾಗಿದ್ದು, ಸ್ಟ್ರಾಸ್‌ಬರ್ಗ್‌ನಲ್ಲಿ ಉನ್ನತ ವ್ಯಾಸಂಗ ಮಾಡುವುದೆಂದು ನಿರ್ಧಾರವಾಯಿತು.

ಸ್ಟ್ರಾಸ್‌ಬರ್ಗ್ ವಿಶ್ವವಿದ್ಯಾಲಯ, ಕ್ರೈಸ್ತಧರ್ಮ ಮತ್ತು ತತ್ವಶಾಸ್ತ್ರಗಳ ಬೋಧನೆಗೆ

ಆ ಕಾಲದಲ್ಲಿ ಯುರೋಪಿನಲ್ಲೆಲ್ಲಾ ಹೆಸರಾದ ಕೇಂದ್ರ. ಅಸ್ತಿತ್ವಕ್ಕೆ ಬಂದ ಕೇವಲ ಎರಡು ದಶಕಗಳಲ್ಲೇ ಉತ್ತಮ ದರ್ಜೆಯ ಶಿಕ್ಷಣ ಪಂಡಿತರು ಮತ್ತು ತರುಣ ಪೀಳಿಗೆಯ ಬುದ್ಧಿಜೀವಿಗಳ ಸಮೂಹ ಅಲ್ಲಿ ಒಂದುಗೂಡಿದ್ದು, ಒಳ್ಳೆಯ ಜ್ಞಾನ ದೇಗುಲವೆಂದು ಪ್ರಖ್ಯಾತಿಯಾಗಿತ್ತು. ಜೊತೆಗೆ ಸ್ಟ್ರಾಸ್‌ಬರ್ಗ್ ಪ್ರಕೃತಿ ಸೌಂದರ್ಯದ ನೆಲೆವೀಡು ಕೂಡ.

ಶ್ವೈಯಿಟ್ಸರ್ ಮೊದಲೇ ನಿರ್ಧಾರ ಮಾಡಿಕೊಂಡಿದ್ದಂತೆ ಧರ್ಮಶಾಸ್ತ್ರ ಮತ್ತು ತತ್ವಶಾಸ್ತ್ರಗಳೆರಡರ ಅಭ್ಯಾಸದ ಸಲುವಾಗಿ ಸ್ಟ್ರಾಸ್‌ಬರ್ಗ್‌ನ ಸೇಂಟ್‌ಥಾಮಸ್ ಕಾಲೇಜನ್ನು ಸೇರಿದ. ಕುಟುಂಬದ ಆರ್ಥಿಕ ಪರಿಸ್ಥಿತಿ ಉತ್ತಮಸ್ಥಿತಿಯಲ್ಲಿ ರದಿದ್ದುದರಿಂದ ವಿದ್ಯಾಭ್ಯಾಸದ ವೆಚ್ಚ ಹಿಡಿತದಲ್ಲಿರುವುದು ಅನಿವಾರ್ಯವಾಗಿತ್ತು. ಕಾಲೇಜಿನ ಕಟ್ಟಡದಲ್ಲೇ ಒಂದು ಕೊಠಡಿಯನ್ನು ದೊರಕಿಸಿಕೊಂಡು ಅತ್ಯಂತ ಸರಳ ಜೀವನಕ್ರಮ ರೂಪಿಸಿಕೊಂಡಿದ್ದ. ಕೆಲ ಸಾರಿ ದಿನಕ್ಕೊಂದೇ ಭೋಜನ; ಉಡುಗೆ-ತೊಡುಗೆಗಳೂ ಅತ್ಯಂತ ಸರಳ ರೀತಿಯವು. ಕಾಲೇಜಿನ ಸಮಯದ ನಂತರ ಕೊಠಡಿಯಲ್ಲಿ ಸದಾ ಪುಸ್ತಕಗಳ ರಾಶಿಯಲ್ಲಿ ಮುಳುಗಿರುತ್ತಿದ್ದ. ಆದರೂ, ಹಲವಾರು ಸಾರ್ವಜನಿಕ ಚಟುವಟಿಕೆಗಳಲ್ಲೂ ಅವನ ಸಕ್ರಿಯ ಪಾತ್ರವಿರುತ್ತಿತ್ತು.

ಕಾಲೇಜಿನ ಮೊದಲ ದಿನಗಳು ಅತ್ಯಂತ ಕಷ್ಟಕರವೆನಿಸಿದವು. ಉಪನ್ಯಾಸಕರಿಂದ ವಿದ್ವತ್ಪೂರ್ಣ ಭಾಷಣಗಳಾಗುತ್ತಿದ್ದವು. ಗ್ರಂಥ-ಭಂಡಾರದಲ್ಲಿ ಹೇರಳವಾದ ಪುಸ್ತಕ-ಸಂಗ್ರಹ ಕೂಡ ಇತ್ತು. ಕ್ರೈಸ್ತಮತಧರ್ಮದ ಹೆಚ್ಚಿನ ಗ್ರಂಥಗಳು ಅವನಿಗೆ ಪರಿಚಯವಿರದ ಹೀಬ್ರೂ ಭಾಷೆಯಲ್ಲಿದ್ದುದೊಂದೇ ತೊಂದರೆ. ಕಲಿಯಲು ಅತ್ಯಂತ ಕಷ್ಟವೆನಿಸಿದ ಹೀಬ್ರೂ ಭಾಷೆ, ಕೆಲವೇ ದಿನಗಳಲ್ಲಿ ಶ್ವೈಯಿಟ್ಸರ್‌ನ ಶ್ರಮ ಮತ್ತು ಶ್ರದ್ಧೆಗೆ ಮಣಿಯಲೇಬೇಕಾಯಿತು.

ಮತಧರ್ಮಗಳ ವಿಚಾರದಲ್ಲಿ ಆಲ್ಬರ್ಟ್ ಶ್ವೈಯಿಟ್ಸರ್ ಮೊದಲಿನಿಂದಲೂ ರೂಢಿಸಿಕೊಂಡಿದ್ದ ವೈಚಾರಿಕ ಪ್ರಯೋಗಕ್ಕೆ ಈಗ ಸರಿಯಾದ ಕಾಲ ಒದಗಿತು. ಏಸುಕ್ರಿಸ್ತನ ಜೀವನ ಮತ್ತು ಬೋಧನೆಗಳ ಬಗೆಗಿದ್ದ ಹಲವಾರು ಕಟ್ಟುಕತೆಗಳನ್ನ ಮತ್ತು ಕುರುಡು-ನಂಬಿಕೆಗಳ ಹಿಂದಿದ್ದ ವಾಸ್ತವಿಕ ಸಂಗತಿಗಳನ್ನರಿಯಲು ಅವಶ್ಯಕವಾಗದ ಗ್ರಂಥಗಳು ಇಲ್ಲಿ ರಾಶಿ ರಾಶಿಯಾಗಿದ್ದವು. ಅವನ ವೈಚಾರಿಕ ಮನೋಭಾವಕ್ಕೆ ಸ್ಫೂರ್ತಿ ನೀಡುವ ಉದಾರ ಮನೋಭಾವದ ಉಪನ್ಯಾಸಕರೂ ಸಹಾ ಇಲ್ಲಿದ್ದರು. ಗ್ರಂಥಗಳನ್ನು ಅಭ್ಯಸಿಸಿ, ತನ್ನ ಅನುಮಾನ ಮತ್ತು ಅಭಿಪ್ರಾಯಗಳನ್ನು ಚರ್ಚಿಸುವ ವಿಪುಲ ಅವಕಾಶಗಳಿದ್ದವು.

ಏಸುಕ್ರಿಸ್ತನ ಮರಣಾನಂತರ ಮಾರ್ಕ್, ಜಾನ್, ಲ್ಯೂಕ್ ಮಾಥ್ಯೂ ಮೊದಲಾದ ಸಂತರು ಬರೆದ ಸುವಾರ್ತೆಗಳಲ್ಲಿರಬಹುದಾದ ಕೆಲವು ಅಸಂಗತಗಳ

ಸತ್ಯಾಸತ್ಯತೆಗಳನ್ನು ಅರಿಯುವ ಪ್ರಯತ್ನ ; ಏಸುವು ದೇವಪುತ್ರನೇ ಅಥವಾ ಮಾನವ ಸಂಜಾತನೇ; ''ದೇವರ-ರಾಜ್ಯ -KINGDOM OF GOD (ಸದ್ಯದಲ್ಲೇ) ಉದಯ ವಾಗಲಿದೆ'' ಎಂಬ ಕ್ರಿಸ್ತವಾಣಿಯ ಅರ್ಥ ವಿವರಣೆ; ಏಸುಕ್ರಿಸ್ತ ದೇವದೂತನೇ ಅಥವಾ ಇನ್ನೊಬ್ಬ ದೂತ ಅವತರಿಸುವನೇ; ಏಸುವಿನ ಕೊನೆಯ ಭೋಜನ ಮತ್ತು ಅದರ ಪುನರಾವರ್ತನೆಯ ಬಗೆಗೆ ಇದ್ದ ಭಿನ್ನಾಭಿಪ್ರಾಯ - ಇವು ಆ ಕಾಲದ ಧಾರ್ಮಿಕ ರಂಗದಲ್ಲಿದ್ದ ಜಿಜ್ಞಾಸೆಗಳು. ಆದರೆ ಇವುಗಳ ಬಹಿರಂಗ ಚರ್ಚೆ ನಿಷಿದ್ಧ. ಹಾಗೆ ಮಾಡಿದವರು ಸಂಪ್ರದಾಯ ಶರಣರ ಇಲ್ಲವೇ ಧರ್ಮಗುರುಗಳ ಕಿರುಕುಳಗಳಿಗೆ ಗುರಿಯಾಗುತ್ತಿದ್ದರು. ಆದರೂ ಯಾರ ಧಾರ್ಮಿಕ ಭಾವನೆಗಳನ್ನೂ ನೋಯಿಸದಂತೆ ಹಲವು ತಜ್ಞರೊಡನೆ ಬಿಚ್ಚುಮನಸ್ಸಿನಿಂದ ಚರ್ಚಿಸುತ್ತಿದ್ದುದು ಅವನ ಹಿರಿಮೆಯೆನ್ನಬೇಕು. ಯಾರ ಮನಸ್ಸನ್ನೂ ಯಾವ ಸಮಯದಲ್ಲೇ ಆಗಲಿ ನೋಯಿಸದೆ ಎಚ್ಚರವಹಿಸಿ ಮಾತನಾಡುವ ಶೈಲಿ ಅವನಿಗೆ ಒಗ್ಗಿಹೋಗಿತ್ತು. ಅವನೊಬ್ಬ ಕಟ್ಟಾ ಧರ್ಮಭೀರುವೆಂಬ ಅಭಿಪ್ರಾಯ ಹಲವರಲ್ಲಿತ್ತು. ಚರ್ಚ್‌ನ ಎಲ್ಲಾ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಶ್ರದ್ಧೆಯಿಂದ ಭಾಗವಹಿಸುತ್ತಿದ್ದು, ವಿದ್ಯಾರ್ಥಿಗಳಲ್ಲಿ ಅಗ್ರಗಣ್ಯನೆನಿಸಿಕೊಂಡಿದ್ದ ; ಧಾರ್ಮಿಕ ವಲಯಗಳಲ್ಲೂ ಅವನ ವೈಚಾರಿಕ- ಭಾವನೆಗಳನ್ನು ಗೌರವಿಸುವವರೂ ಇದ್ದರು.

ಸ್ಟ್ರಾಸ್‌ಬರ್ಗ್‌ಗೆ ಹೋದ ಕೆಲವು ತಿಂಗಳಲ್ಲೇ ಆಲ್ಬರ್ಟ್ ಶ್ವೈಯಿಟ್ಸರ್ ಕಡ್ಡಾಯವಾಗಿ ಮಿಲಿಟರಿ ತರಬೇತಿಗೆ ಸೇರಬೇಕಾಯಿತು. ತರಬೇತಿಯ ಸಮಯದಲ್ಲೂ ಧಾರ್ಮಿಕ ಗ್ರಂಥಗಳ ಅಭ್ಯಾಸ ಮುಂದುವರಿಯಿತು. ಬೈಬಲ್‌ನ ಗ್ರೀಕ್ ಅವತರಣಿಕೆ ಅವನ ಮಿಲಿಟರಿ ಚೀಲದಲ್ಲಿ ಸದಾ ಸೇರಿರುತ್ತಿತ್ತು. ಸೈನ್ಯಾಧಿಕಾರಿಗಳ ಅಪ್ಪಣೆ ಪಡೆದು ಕಾಲೇಜಿನಲ್ಲಿ ಆಗುತ್ತಿದ್ದ ಪ್ರಮುಖ ಉಪನ್ಯಾಸ ಗಳಿಗೂ ಹಾಜರಾಗುತ್ತಿದ್ದ. ಮೊದಲಿನಿಂದಲೂ ನಿಯೋಜಿಸಿಕೊಂಡಿದ್ದ ಏಸುಕ್ರಿಸ್ತನ ಜೀವನದ ಬಗೆಗೆ ಬರೆಯಬೇಕೆಂದಿದ್ದ ಸಂಶೋಧನಾ ಪ್ರಬಂಧ 'ಐತಿಹಾಸಿಕ ಏಸುವಿನ ಅನ್ವೇಷಣೆ'ಯ ರೂಪು-ರೇಷೆಗಳು ಮೂಡಿಬಂದಿದ್ದು ಈ ಸಮಯದಲ್ಲೇ. ಇವೆಲ್ಲದರ ಜತೆಗೆ ಶ್ವೈಯಿಟ್ಸರ್ ಮಿಲಿಟರಿ ತರಬೇತಿಯ ಕಾರ್ಯಕ್ರಮಗಳಲ್ಲೂ ಶ್ರದ್ಧೆಯಿಂದ ಭಾಗವಹಿಸಿ ಸೈನ್ಯಾಧಿಕಾರಿಗಳ ಮೆಚ್ಚುಗೆಗೂ ಪಾತ್ರನಾಗಿದ್ದ.

ಮುಲ್‌ಹೌಸ್‌ನ ಸಂಗೀತ ಶಿಕ್ಷಕ ಯುಗಿನಿ ಮಂಚ್‌ನ ಸಹೋದರ ಅರ್ನೆಸ್ಟ್ ಮಂಚ್‌ನೇ ಸ್ಟ್ರಾಸ್‌ಬರ್ಗ್ ಚರ್ಚ್‌ನ ಆರ್ಗನ್ ನುಡಿಸುವ ಹುದ್ದೆಯಲ್ಲಿದ್ದವ. ಶ್ವೈಯಿಟ್ಸರ್‌ನ ಸಂಗೀತಾಭ್ಯಾಸ ಅವ್ಯಾಹತವಾಗಿ ಮುಂದುವರಿಯುವುದಕ್ಕೆ ಇದು ಅನುಕೂಲವಾಯಿತು. ಬಿಡುವಿನ ವೇಳೆಯಲ್ಲಿ ಮಂಚ್‌ಗೆ ಸಹಾಯಕನಾಗಿ ಕೆಲಸ ಮಾಡುತ್ತಿದ್ದನಲ್ಲದೆ ಅವನ ಗೈರು ಹಾಜರಿಯಲ್ಲಿ ಆರ್ಗನ್ ನುಡಿಸುವ

ಜವಾಬ್ದಾರಿಯು ಆಲ್ಬರ್ಟ್‌ನದೇ ಆಯಿತು. ಬಿಥೋವನ್ ಮತ್ತು ಬಾಕ್‌ರಷ್ಟು ಹೆಸರಾಂತ ಸಂಗೀತ ಕೋವಿದ ವ್ಯಾಗನರ್ ಆ ಸಮಯದಲ್ಲಿ ಸ್ಟ್ರಾಸ್‌ಬರ್ಗ್‌ನಲ್ಲಿ ನೆಲೆಸಿದ್ದ. ಆಲ್ಬರ್ಟ್ ಅವನ ಕಚೇರಿಗಳಿಗೆ ತಪ್ಪದೇ ಹಾಜರಾಗಿ ಪಾಂಡಿತ್ಯದ ಪ್ರತಿಯೊಂದು ಸ್ತರಗಳನ್ನೂ ಅಭ್ಯಾಸ ಮಾಡಿದ. ಆರ್ಗನ್‌ಗಳನ್ನು ದುರಸ್ತಿ ಮಾಡುವ ವಿಧಾನಗಳನ್ನೂ ಸ್ಟ್ರಾಸ್‌ಬರ್ಗ್‌ನಲ್ಲೇ ಕಲಿತುಕೊಂಡ. ಸೇಂಟ್ ವಿಲಿಯಂ ಚರ್ಚ್‌ನಲ್ಲಿ ಆಗತಾನೇ ತಯಾರಾಗುತ್ತಿದ್ದ ಹೊಸ ಆರ್ಗನ್ ಮತ್ತು ಆರ್ಕೆಷ್ಟ್ರಾಗಳ ಸಂಯೋಜನಾ ಕಾರ್ಯದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದ. ಅವುಗಳಿಗೆ ಬೇಕಾಗಿದ್ದ ಹಣವನ್ನು ಸಾರ್ವಜನಿಕರಿಂದ ದೇಣಿಗೆ ಎತ್ತುವ ಕಾರ್ಯದಲ್ಲೂ ಭಾಗವಹಿಸಿ ಎಲ್ಲರ ಮೆಚ್ಚುಗೆಗೆ ಪಾತ್ರನಾದ.

ಈ ಎಲ್ಲಾ ಕಾರ್ಯಕ್ರಮಗಳ ಜತೆಗೆ ಆಲ್ಬರ್ಟ್ ಶ್ವೈಯಿಟ್ಸರ್, ವಿದ್ಯಾರ್ಥಿಗಳ ಸಮಾಜ ಸೇವಾ ಸಂಘದ ಸಕ್ರಿಯ ಸದಸ್ಯನಾಗಿದ್ದ. ದೀನ ದಲಿತರ ಸಹಾಯಕ್ಕಾಗಿ ವರ್ಷದಲ್ಲೆರಡು ಸಾರಿ ಭಿಕ್ಷೆ ಎತ್ತುವವರ ತಂಡಕ್ಕೂ ಅವನೇ ಮುಂದಾಳು. ಸಮಾಜ ಸೇವಾ ಕಾರ್ಯಕ್ರಮಗಳಲ್ಲಿ ಇದೇ ರೀತಿ ಸಕ್ರಿಯ ಪಾತ್ರವಹಿಸುತ್ತಿದ್ದ ಯಹೂದ್ಯ ಯುವತಿ ಹೆಲೆನ್ ಬ್ರೂಸ್ಲೊ ಪರಿಚಯ ಈ ಸಮಯದಲ್ಲೇ ಆಯಿತು.

ಧರ್ಮಶಾಸ್ತ್ರದ ಪರೀಕ್ಷೆ ೧೯೦೭ರ ಬೇಸಿಗೆಯಲ್ಲಿ ನಡೆಸಲು ಏರ್ಪಾಟಾಗಿತ್ತು. ಆಲ್ಬರ್ಟ್ ಶ್ವೈಯಿಟ್ಸರ್ ಮಂಡಿಸಿದ ಏಸುಕ್ರಿಸ್ತನ ಕೊನೆಯ ಭೋಜನದ ಜಿಜ್ಞಾಸೆಗಳನ್ನು ಕುರಿತ ಪ್ರಬಂಧ ಪರೀಕ್ಷಕರ ಮೆಚ್ಚುಗೆ ಗಳಿಸಿತು. ಅವನ ವೈಚಾರಿಕ ಮನೋಭಾವ ಅದರಲ್ಲಿ ಪ್ರತಿಬಿಂಬಿತವಾಗಿತ್ತು. ತತ್ವಶಾಸ್ತ್ರದ ಪ್ರಬಂಧವೂ ಉನ್ನತಮಟ್ಟದ್ದಾಗಿತ್ತು. ಎರಡೂ ವಿಷಯಗಳಲ್ಲಿ ಶ್ವೈಯಿಟ್ಸರ್ ಉನ್ನತ ಶ್ರೇಣಿಯಲ್ಲೇ ತೇರ್ಗಡೆಯಾದ. ಇವೆಲ್ಲದರ ಪರಿಣಾಮವಾಗಿ ತತ್ವಶಾಸ್ತ್ರದ ಉನ್ನತವ್ಯಾಸಂಗವನ್ನು ಪ್ಯಾರಿಸ್‌ನಲ್ಲಿ ಮುಂದುವರಿಸಲು ''ಗಾಲ್ ವಿದ್ಯಾರ್ಥಿವೇತನ''ವೂ ಅವನಿಗೆ ಲಭಿಸಿತು.

ಪ್ಯಾರಿಸ್‌ಗೆ ಮತ್ತೆ ಹೋಗುವ ಅವಕಾಶ ದೊರೆತದ್ದು ಶ್ವೈಯಿಟ್ಸರ್‌ಗೆ ಹರ್ಷದಾಯಕ. ಪ್ಯಾರಿಸ್‌ನ ಸೋರ್ಬೋನ್ ವಿಶ್ವವಿದ್ಯಾಲಯದ ಹೆಸರಾಂತ ತತ್ವಶಾಸ್ತ್ರ ಪರಿಣಿತ ಥಿಯೋಬಾಲ್ಡ್ ಜೀಗ್ಲರ್‌ನ ವಿದ್ಯಾರ್ಥಿಯಾಗಿ ಸೇರಿಕೊಂಡ. ಕ್ಯಾಂಟ್‌ನ ತತ್ವಶಾಸ್ತ್ರದ ಅಭ್ಯಾಸ ಜೀಗ್ಲರ್ ಅವನಿಗೆ ನಿಗದಿಪಡಿಸಿದ ಐಚ್ಛಿಕ ವಿಷಯ. ಆ ಸಮಯದಲ್ಲಿ ಕ್ಯಾಂಟ್‌ನ ತತ್ವಶಾಸ್ತ್ರದ ಬಗೆಗೆ ಹೆಚ್ಚಿನ ಆಕರ ಗ್ರಂಥಗಳಾಗಲೀ, ನುರಿತ ಉಪನ್ಯಾಸಕರಾಗಲೀ ಇಲ್ಲದಿದ್ದುದು ಒಂದು ಕೊರತೆಯಾಗಿತ್ತು. ಆದರೂ ಜೀಗ್ಲರ್‌ಗೆ ಮೆಚ್ಚಿಗೆಯಾಗುವಂಥ ಪ್ರಬಂಧ ರಚಿಸುವುದಕ್ಕಾಗಿ ಶ್ವೈಯಿಟ್ಸರ್ ಬಹಳ ಶ್ರಮವಹಿಸಿ ಅಭ್ಯಾಸ ಮಾಡಿದ.

ಮತ್ತೆ ದೊರೆತ ವೈಡರ್‌ನ ಸಹಯೋಗ ಶ್ವೈಯಿಟ್ಸರ್‌ನಲ್ಲಿದ್ದ ಸಂಗೀತದ ಪ್ರತಿಭೆಯನ್ನು ಮತ್ತಷ್ಟು ಪ್ರಕಾಶಗೊಳಿಸುವುದಕ್ಕೆ ಈ ಸಲದ ಪ್ಯಾರಿಸ್‌ನ ವಾಸ್ತವ್ಯ ಇಂಬುಗೊಟ್ಟಿತು. ಅವನಲ್ಲಿದ್ದ ಕೆಲವು ಲೋಪದೋಷಗಳನ್ನು ಸರಿಪಡಿಸಲು ವೈಡರ್ ಸಹಕರಿಸಿದ. ಈ ಸಮಯದಲ್ಲೇ ಸಂಗೀತ ಶಾಸ್ತ್ರದ ಬಗೆಗೆ ಎರಡು ಪುಸ್ತಕಗಳನ್ನು ಬರೆದು ಪ್ರಕಟಿಸಿದ. ''ಪ್ಯಾರಿಸ್ ಬಾಕ್ ಸೊಸೈಟಿ'' ಅಸ್ತಿತ್ವಕ್ಕೆ ಬರಲು ಆಲ್ಬರ್ಟ್ ಶ್ವೈಯಿಟ್ಸರ್‌ನ ಶ್ರಮವೇ ಕಾರಣ.

ಪ್ಯಾರಿಸ್‌ನಲ್ಲಿರುವಾಗಲೇ ಪಿಯಾನೋ ನುಡಿಸುವುದರ ಪ್ರಾವೀಣ್ಯ ಸ್ಫುಟಗೊಳ್ಳುವಂತೆ ಮಾಡಿಕೊಂಡದ್ದು ಅತ್ಯಂತ ವಿಸ್ಮಯಕರ ಸನ್ನಿವೇಶದಲ್ಲಿ. ಪಿಯಾನೋ ನುಡಿಸುವ ಮೂಲಭೂತ ತತ್ವಗಳ ಪರಿಣಿತ ಜೆ. ಫಿಲಿಪ್ ಮತ್ತು ಪಿಯಾನೋದಲ್ಲಿ ಬೆರಳಾಡಿಸುವ ಕಲೆಯ ಚಮತ್ಕಾರಿಕೆಯ ಪರಿಣಿತೆಯೆನಿಸಿದ ಮೇರಿ ಜೇನ್‌ಟ್ರೂಟ್‌ಮನ್, ಒಬ್ಬರನ್ನೊಬ್ಬರು ಸಹಿಸಲಾರದ ದ್ವೇಷಿಗಳು. ಒಬ್ಬರಲ್ಲಿ ಶಿಷ್ಯರಾದವರು ಇನ್ನೊಬ್ಬರಲ್ಲಿ ಶಿಷ್ಯರಾಗುವಂತಿಲ್ಲ. ಶ್ವೈಯಿಟ್ಸರ್ ಅವರಿಬ್ಬರಿಗೂ ಅರಿವಾಗದಂತೆ ಇಬ್ಬರಲ್ಲೂ ಏಕಕಾಲದಲ್ಲೇ ಶಿಷ್ಯನಾಗಿದ್ದು ಎರಡೂ ವಿಷಯಗಳಲ್ಲಿ ಪ್ರಾವೀಣ್ಯತೆ ಪಡೆದದ್ದು ಆ ಕಾಲದ ಸೋಜಿಗವೆನ್ನಬಹುದು !

ಪ್ಯಾರಿಸ್‌ನ ವಾಸ್ತವ್ಯ ೧೮೯೯ರ ಬೇಸಿಗೆಯಲ್ಲಿ ಕೊನೆಗೊಂಡಿತು. ಅಷ್ಟರಲ್ಲೇ ಕ್ರೈಸ್ತಧರ್ಮಶಾಸ್ತ್ರ ಮತ್ತು ತತ್ವಶಾಸ್ತ್ರಗಳೆರಡರ ಬಗೆಗೆ ಬರ್ಲಿನ್ ನಗರದಲ್ಲಿ ಹೆಸರಾಂತ ವಿದ್ವಾಂಸರಿಂದ ಉಪನ್ಯಾಸಗಳ ಸರಣಿ ಏರ್ಪಾಡಾದ ಸುದ್ದಿ ತಿಳಿದು ಶ್ವೈಯಿಟ್ಸರ್ ಅಲ್ಲಿಗೆ ಧಾವಿಸಿದ. ಆಗತಾನೇ ಬೆಳಕಿಗೆ ಬರುತ್ತಿದ್ದ ಮನಃಶಾಸ್ತ್ರವನ್ನು ಅಲ್ಲಿದ್ದ ಸಮಯದಲ್ಲೇ ಪರಿಚಯಮಾಡಿಕೊಂಡ. ಕ್ರಿಶ್ಚಿಯನ್ ಸಂತರ ಮಾನಸಿಕ ಹಿನ್ನೆಲೆಯನ್ನು ಅರಿತುಕೊಳ್ಳಬೇಕೆಂಬ ಹಲವು ದಿನಗಳ ಹಂಬಲಕ್ಕೆ ಇದು ಪೂರಕ ವಾಯಿತು. ಸಂತರ ಸುವಾರ್ತೆಗಳ ಬಗೆಗೆ ತನಗಿದ್ದ ಸಂದೇಹಗಳನ್ನು ಪರಿಹಾರ ಮಾಡಿ ಕೊಳ್ಳಲು ಆ ಬಗೆಗೆ ಪರಿಣಿತಿಯನ್ನು ಪಡೆದಿದ್ದ ಶ್ರೀಮತಿ ಅರ್ನೆಸ್ಟ ಕರ್ಟಿಸ್‌ಳನ್ನು ಭೇಟಿಮಾಡಿ ವಿವರವಾಗಿ ಚರ್ಚಿಸುತ್ತಿದ್ದ. ಬರ್ಲಿನ್ ಚರ್ಚ್‌ನ ಆರ್ಗನ್ ನುಡಿಸು ವವನನ್ನು ಪರಿಚಯ ಮಾಡಿಕೊಂಡು ಅಲ್ಲೂ ಸಂಗೀತಾಭ್ಯಾಸ ಮುಂದುವರಿಸಿದ ಪ್ಯಾರಿಸ್‌ಗಿಂತ ಬರ್ಲಿನ್‌ನ ಸಾಂಸ್ಕೃತಿಕ ವಾತಾವರಣ ಅವನ ಮೆಚ್ಚುಗೆ ಗಳಿಸಿತು.

ಬರ್ಲಿನ್‌ನಿಂದ ಶ್ವೈಯಿಟ್ಸರ್ ೧೮೯೯ರ ಅಂತ್ಯದಲ್ಲಿ ಸ್ಟ್ರಾಸ್‌ಬರ್ಗ್‌ಗೆ ಹಿಂದಿರುಗಿದ. ಅವನೀಗ ಎರಡು ಡಾಕ್ಟರೇಟ್ ಪರೀಕ್ಷೆಗಳತ್ತ ತೀವ್ರ ಗಮನಹರಿಸ ಬೇಕಾಗಿತ್ತು. ಮುಂದಿನ ಒಂದು ವರ್ಷ ಧರ್ಮಶಾಸ್ತ್ರ ಮತ್ತು ತತ್ವಶಾಸ್ತ್ರಗಳೆರಡರ ಬಗೆಗೆ ಕಷ್ಟಪಟ್ಟು ತಯಾರಿಸಿದ ಮಹಾ ಪ್ರಬಂಧಗಳು ೧೯೦೦ರಲ್ಲಿ ಅಂಗೀಕಾರ ವಾದವು. ಎರಡೂ ಡಾಕ್ಟರೇಟ್‌ಗಳನ್ನು ಒಂದೇ ಸಲ ಪಡೆದದ್ದು ಆಲ್ಬರ್ಟ್

ಶ್ವೈಯಿಟ್ಸರ್‌ನ ಹೆಗ್ಗಳಿಕೆಯಾಯಿತು.

ಆಲ್ಬರ್ಟ್ ಶ್ವೈಯಿಟ್ಸರ್‌ನ ದೀರ್ಘ ಅಭ್ಯಾಸ, ಧರ್ಮಶ್ರದ್ಧೆ, ವಿದ್ವತ್ತು ಮತ್ತು ಕಷ್ಟ ಸಹಿಷ್ಣುತೆಗಳಿಗೆ ಆ ಕಾಲದಲ್ಲಿ ತಲೆದೂಗದವರಿರಲಿಲ್ಲ. ವಿದ್ಯಾಭ್ಯಾಸ ಮುಗಿಯುವುದರೊಳಗೇ ಸ್ಟ್ರಾಸ್‌ಬರ್ಗ್ ಸೇಂಟ್ ನಿಕೋಲಾಸ್ ಚರ್ಚ್‌ನ ಪಾದ್ರಿಯ ಸಹಾಯಕನ ಕೆಲಸ ನಿರಾಯಾಸವಾಗಿ ದೊರೆಯಿತು. ಇನ್ನು ಕೆಲವೇ ತಿಂಗಳುಗಳಲ್ಲಿ ಡೀಕ್‌ನ ಹುದ್ದೆಗೆ ಬಡ್ತಿ, ಮತ್ತೆ ಕೆಲವೇ ದಿನಗಳಲ್ಲಿ ಅದರ ಕ್ಯೂರೇಟ್ ಹೀಗೆ ಒಂದಾದ ಮೇಲೊಂದರಂತೆ ಅವಕಾಶಗಳು ಅವನನ್ನು ಅರಿಸಿ ಬರುತ್ತಿದ್ದವು. ಆಶ್ಚರ್ಯದ ಸಂಗತಿಯೆಂದರೆ ಶ್ವೈಯಿಟ್ಸರ್ ಮತೀಯ ವಿಷಯಗಳಲ್ಲಿ ತಳೆಯುತ್ತಿದ್ದ ವೈಚಾರಿಕ ನಿಲುವುಗಳಿಗೆ ಕೆಲವು ಸಂಪ್ರದಾಯಶರಣ ಮತಗುರುಗಳ ವಿರೋಧ ವಿದ್ದರೂ, ಈ ಹುದ್ದೆಗಳು ಅವನಿಗೇ ಲಭಿಸುತ್ತಿದ್ದವು.

ಪ್ರತಿದಿನ ಮಧ್ಯಾಹ್ನ ಚರ್ಚ್‌ನಲ್ಲಿ ಸಾರ್ವಜನಿಕ ಆರಾಧನೆಯ ನೇತೃತ್ವ ವಹಿಸಿ, ಧಾರ್ಮಿಕ ವಿಷಯಗಳ ಬಗೆಗೆ ಪ್ರವಚನ ನೀಡುವುದು ಶ್ವೈಯಿಟ್ಸರನ ಅಧಿಕೃತ ಜವಾಬ್ದಾರಿ. ಕೆಲ ಸಾರಿ ವಯಸ್ಸಾದ ಇಲ್ಲವೇ ಅಸ್ವಸ್ಥರಾದ ಪಾದ್ರಿಗಳ ಬೋಧನಾ ತರಗತಿಗಳನ್ನೂ ಇವನೇ ನಿರ್ವಹಿಸಬೇಕಾಗುತ್ತಿತ್ತು. ಪ್ರತಿ ಭಾನುವಾರ ಕ್ರಿಸ್ತ-ಮತ-ದೀಕ್ಷೆಗಾಗಿ ಮಕ್ಕಳನ್ನು ತಯಾರಿಸುವ ಬೋಧನೆಯ ತರಗತಿಗಳೂ ಅವನ ಪಾಲಿಗೇ ಸೇರಿದ್ದು, ಧರ್ಮದ ಬಗೆಗೆ ಮಕ್ಕಳ ಆಸಕ್ತಿಯನ್ನು ಕೆರಳಿಸಿ ಮತ-ತತ್ವ ಮತ್ತು ಆಚರಣೆಗಳಲ್ಲಿ ಅವರನ್ನು ತೊಡಗಿಸುವುದು ಅತ್ಯಂತ ಕ್ಲಿಷ್ಟ ಕೆಲಸ. ಪ್ರತಿ ತರಗತಿಯ ಬೋಧನೆಯ ಅಂತ್ಯದಲ್ಲಿ ಮಕ್ಕಳಿಗೆ ಪ್ರಿಯವಾದ ಕತೆಗಳನ್ನು ಹೇಳುವ ಪರಿಪಾಠ ವಿಟ್ಟುಕೊಂಡಿದ್ದ ಶ್ವೈಯಿಟ್ಸರ್‌ನ ತರಗತಿಗಳಲ್ಲಿ ವಿದ್ಯಾರ್ಥಿಗಳು ಬೇಸರವಿಲ್ಲದೇ ಭಾಗವಹಿಸುತ್ತಿದ್ದರು.

ಆಲ್ಬರ್ಟ್ ಶ್ವೈಯಿಟ್ಸರ್ ಈಗ ಧರ್ಮ ಬೋಧನೆಯನ್ನು ಅಧಿಕೃತವಾಗಿ ತನ್ನ ವೃತ್ತಿಯನ್ನಾಗಿಸಿಕೊಂಡಿದ್ದರೂ ಇತರ ಹವ್ಯಾಸಗಳನ್ನು ಕೈಬಿಡಲಿಲ್ಲ. ಸಂಗೀತಾಭ್ಯಾಸ, ಸಂಗೀತ ಕಚೇರಿಗಳಲ್ಲಿ ಪಾಲ್ಗೊಳ್ಳುವುದು, ಆರ್ಗನ್‌ಗಳ ರಚನೆ ಮತ್ತು ದುರಸ್ತಿನ ಕೆಲಸಗಳೂ ಅವ್ಯಾಹತವಾಗಿ ನಡೆಯುತ್ತಲೇ ಇದ್ದವು. ಬೈರೂತ್ ನಗರದಲ್ಲಿ ನೆಲೆಸಿದ್ದ ಆ ಕಾಲದ ಸಂಗೀತ ಸಾಮ್ರಾಟ್ ವ್ಯಾಗ್ನರ್‌ನ ಕಾರ್ಯಕ್ರಮಗಳಿದ್ದಾಗಲೆಲ್ಲಾ ಅಲ್ಲಿಗೆ ಧಾವಿಸುತ್ತಿದ್ದ. ಪ್ಯಾರಿಸ್‌ನಲ್ಲಿ ಹಿಂದೆ ಆರಂಭಿಸಿದ್ದ ಬಾಕ್ ಸೊಸೈಟಿಯ ಕಾರ್ಯಕ್ರಮಗಳ ಅಧ್ಯಕ್ಷ್ಯ ಇವನೇ ಆಗಬೇಕಾದುದೂ ಅನಿವಾರ್ಯ ವಾಯಿತು. ಸ್ಟ್ರಾಸ್‌ಬರ್ಗ್‌ನಲ್ಲಿ ತನ್ನ ಅಧಿಕೃತ ಕೆಲಸಗಳಿಗೆ ತೊಂದರೆಯಾಗದಂತೆ ರಾತ್ರಿ ಸಮಯದಲ್ಲಿ ಪ್ಯಾರಿಸ್‌ಗೆ ತೆರಳಿ ಅಲ್ಲಿನ ಏರ್ಪಾಟುಗಳು ಮುಗಿದ ನಂತರ ಮತ್ತೆ ವಾಪಸು ಬರುತ್ತಿದ್ದ. ಕೆಲಸಾರಿ ಈ ಜವಾಬ್ದಾರಿಗಳನ್ನು ನಿರ್ವಹಿಸಲು ಇಲ

ಗಂಟೆಗಳು ಒಂದೇ ಸಮನೆ ಪ್ರಯಾಣ ಮಾಡುತ್ತಿರಬೇಕಾಗುತ್ತಿತ್ತು. ರೈಲಿನ ಸಮಯ ಗಳಿಗೆ ತನ್ನ ಕಾರ್ಯಕ್ರಮಗಳನ್ನು ಅಳವಡಿಸಿಕೊಂಡು ಬಿಡುವಿದ್ದಾಗ ಯಾರೋ ಸ್ನೇಹಿತರ ಮನೆಯಲ್ಲಿ ವಿಶ್ರಾಂತಿ ಪಡೆದು, ರೈಲಿನಲ್ಲಿ ಪ್ರಯಾಣಿಸುತ್ತಿರುವಾಗಲೇ ಪ್ರವಚನಗಳನ್ನು ತಯಾರಿಸಿಕೊಳ್ಳುತ್ತಿದ್ದನಂತೆ. ಕ್ರಿಶ್ಚಿಯನ್ ತತ್ವ ಮತ್ತು ಧರ್ಮ ಶಾಸ್ತ್ರಗಳ ಬಗೆಗೆ ತನ್ನದೇ ಆದ ವೈಚಾರಿಕ ನಿಲುವುಗಳನ್ನು ಹೊಂದಿದ್ದ ಶ್ವೈಯಿಟ್ಸರ್‌ನ ವಾದಗಳನ್ನು ಆಸಕ್ತಿಯಿಂದ ಕೇಳುವವರೂ ಇದ್ದರು. ಬೇರೆ ಬೇರೆ ಊರುಗಳಿಂದ ಆ ಬಗೆಗೆ ಭಾಷಣ ಮಾಡಲು ಆಗಿಂದಾಗ್ಗೆ ಆಹ್ವಾನಗಳೂ ಬರುತ್ತಿದ್ದವು. ಅಂಥ ಕರೆಗಳನ್ನು ಮನ್ನಿಸಿ, ಬಿಡುವು ಮಾಡಿಕೊಂಡು ಆ ಊರುಗಳಿಗೂ ಹೋಗಿ ಭಾಷಣ ಮಾಡುತ್ತಲೂ ಇದ್ದ.

ಧಾರ್ಮಿಕ ಮತ್ತು ಸಂಗೀತದ ವಿಷಯಗಳಂತೆ ಯುವಕ ಶ್ವೈಯಿಟ್ಸರ್ ಪ್ರಪಂಚದ ಆಗು-ಹೋಗುಗಳ ಬಗೆಗೂ ಆಸಕ್ತಿ ಹೊಂದಿದ್ದ. ಆಧುನಿಕ ನಾಗರಿಕ ಸಂಸ್ಕೃತಿ ದಾರಿ ತಪ್ಪುತ್ತಿದೆಯೆಂಬುದು ಅವನಿಗಾಗಲೇ ಅರಿವಾಗತೊಡಗಿತ್ತು. ಲಿಯೋ ಟಾಲ್‌ಸ್ಟಾಯ್‌ಯೊಬ್ಬನನ್ನು ಬಿಟ್ಟರೆ ಇತರ ತತ್ವಜ್ಞಾನಿಗಳು ನಾಗರಿಕತೆಯ ಮೂಲಭೂತ ಧ್ಯೇಯ, ಧೋರಣೆ ಮತ್ತು ಆದರ್ಶಗಳಾದ ಪ್ರೀತಿ, ಸೌಹಾರ್ದ, ದಯೆ ಇತ್ಯಾದಿಗಳ ಬಗೆಗೆ ಹೆಚ್ಚಿನ ಒತ್ತುಕೊಟ್ಟಂತೆ ಅವನಿಗನಿಸುತ್ತಿರಲಿಲ್ಲ. ಈ ದಿಕ್ಕಿನಲ್ಲಿಯೇ ಶ್ವೈಯಿಟ್ಸರ್ ಗಾಢವಾಗಿ ಚಿಂತಿಸಿದ; ಇದರ ಫಲವಾಗಿಯೇ ಮುಂದೆ ಆತ ನಾಗರಿಕತೆಯ ಉಗಮ ಮತ್ತು ಅಧೋಗತಿಯ ಬಗೆಗೆ ಗ್ರಂಥರಚನೆ ಮಾಡಲು ಸಾಧ್ಯವಾಯಿತು. ಇದೇ ರೀತಿಯಲ್ಲಿ ಏಸುಕ್ರಿಸ್ತನ ಜನನ, ಜೀವನ ಮತ್ತು ಬೋಧನೆಗಳ ಬಗೆಗೆ ಇದ್ದ ಹಲವಾರು ಅವೈಚಾರಿಕ ವಿಷಯಗಳ ಬಗೆಗೂ ದೀರ್ಘ ಅಭ್ಯಾಸ ಮತ್ತು ಚಿಂತನ-ಮಂಥನಗಳೂ ನಡೆಯುತ್ತಲೇ ಇದ್ದವು, ಅವನ ಅತ್ಯಂತ ಹೆಸರಾದ ''ಐತಿಹಾಸಿಕ ಏಸುವಿನ ಅನ್ವೇಷಣೆ'' ಗ್ರಂಥದ ಮೂಲಟಿಪ್ಪಣಿಗಳೂ ಈ ಸಮಯದಲ್ಲಿ ಅವ್ಯಾಹತವಾಗಿ ಮುಂದುವರಿದವು.

ಚರ್ಚ್‌ನಲ್ಲಿ ದೊರೆತ ಬೋಧಕ-ಹುದ್ದೆಯ ಕಾರ್ಯಕ್ರಮಗಳನ್ನು ಮುಗಿಸಿ ಜೀವನವನ್ನು ಹಾಯಾಗಿ ನಡೆಸಬಹುದಾಗಿದ್ದರೂ ಹರೆಯದ ಹುಮ್ಮಸ್ಸು ತುಂಬಿ ತುಳುಕುತ್ತಿದ್ದ ಆಲ್ಬರ್ಟ್ ಶ್ವೈಯಿಟ್ಸರ್ ಸಮಾಜದ ಉನ್ನತಿಗಾಗಿ ಒಂದಲ್ಲ ಒಂದು ಸೇವಾಕಾರ್ಯದಲ್ಲಿ ನಿರತನಾಗಿರುತ್ತಿದ್ದ. ಆ ವಯಸ್ಸಿನಲ್ಲಿ ಇತರರಂತೆ ಮನರಂಜನೆಯ ಹವ್ಯಾಸಗಳನ್ನು ಅವನು ಅಷ್ಟಾಗಿ ಹಚ್ಚಿಕೊಂಡಿರಲಿಲ್ಲ. ಕೆಲಸಾರಿ ಸ್ನೇಹಿತರೊಡನೆ ಹೊರಗಿನ ಸಂತೋಷಕೂಟಗಳಲ್ಲಿ ಭಾಗವಹಿಸುತ್ತಿದ್ದನಾದರೂ ಅವನ ವರ್ತನೆ ಗಾಂಭೀರ್ಯದ ಎಲ್ಲೆ ಮೀರುತ್ತಿರಲಿಲ್ಲ. ಸಮಾಜ ಸೇವಾ ಕಾರ್ಯಗಳಲ್ಲಿ ಮಹಿಳೆಯರೂ ಸೇರಿದಂತೆ ಹಲವು ವರ್ಗದ ಜನರ ಸಹಯೋಗ

ವಿರುತ್ತಿದ್ದರೂ, ಯಾರೊಡನೆಯೂ ಅನೈತಿಕವಾಗಿ ವರ್ತಿಸಿದವನಲ್ಲ. ಮುಂದೆ ಬಾಳಸಂಗಾತಿಯಾದ ಹೆಲೆನ್ ಬ್ರೂಸ್ಲೊಳ ಗೆಳೆತನ ಈ ಸಮಯದಲ್ಲೇ ಆದರೂ ಅವರಿಬ್ಬರ ನಡೆವಳಿಕೆ ಸಭ್ಯತೆಯ ಮಿತಿಯಲ್ಲೇ ಮುಂದುವರೆಯುತ್ತಿತ್ತು. ಈ ಸಮಯದಲ್ಲಿ ಅವನೊಬ್ಬ ಅತ್ಯಂತ ಚುರುಕಿನ ಚಟುವಟಿಕೆಗಳಲ್ಲಿ ನಿರತನಾದ ಕ್ಯೂರೇಟ್ ಆಗಿದ್ದು ಧಾರ್ಮಿಕ ಮತ್ತು ಸಾಮಾಜಿಕ ವಲಯಗಳಲ್ಲಿ ಮೆಚ್ಚಿಗೆ ಗಳಿಸಿದ್ದ.

ಆಲ್ಬರ್ಟ್ ಶ್ವೆಯಿಟ್ಸರ್ ತನ್ನ ಜೀವನದ ಕಾಲು-ಶತಮಾನವನ್ನು ಕಳೆದು ಇಪ್ಪತ್ತಾರನೆಯ ವಯಸ್ಸಿಗೆ ಕಾಲಿಡುತ್ತಿದ್ದಂತೆ ಅವನ ಪಾಂಡಿತ್ಯ ಮತ್ತು ಪ್ರತಿಭೆಗೆ ಕಲಶಪ್ರಾಯದ ಉದ್ಯೋಗವೊಂದು ಪ್ರಾಪ್ತವಾಯಿತು. ಸ್ಟ್ರಾಸ್‌ಬರ್ಗ್‌ನ ತತ್ವಶಾಸ್ತ್ರ ಮಹಾವಿದ್ಯಾಲಯ (THEOLOGICAL COLLEGE)ದ ಪ್ರಾಚಾರ್ಯರು ಆಕಸ್ಮಿಕವಾಗಿ ತೀರಕೊಂಡಿದ್ದರಿಂದ ಆ ಜಾಗ ಖಾಲಿಯಾಯಿತು (ಮೇ ೧೯೧೧). ಅಧಿಕೃತವಾಗಿ ಆ ಹುದ್ದೆಗೆ ನೇಮಕವಾದವನಿಗೆ ವೈಯಕ್ತಿಕ ಕಾರಣಗಳಿಂದ ಕೆಲಸಕ್ಕೆ ಹಾಜರಾಗಲು ಅಡಚಣೆಗಳಿದ್ದವು. ಪದವಿಗಳಿಸಿ ಕೇವಲ ಒಂಬತ್ತೇ ತಿಂಗಳಾಗಿದ್ದು, ಇನ್ನೂ ಅಧಿಕೃತ ಪಾದ್ರಿಯಾಗಿರದಿದ್ದರೂ, ಮಹಾವಿದ್ಯಾಲಯದ ಆಡಳಿತ ವರ್ಗ ಶ್ವೆಯಿಟ್ಸರ್‌ನನ್ನೇ ಪ್ರಾಚಾರ್ಯನನ್ನಾಗಿ ನೇಮಕ ಮಾಡಿತು. ಅದು ಧಾರ್ಮಿಕ ವಲಯಗಳಲ್ಲಿ ಅಂದು ಅವನಿಗಿದ್ದ ಸ್ಥಾನಮಾನಗಳ ಸಂಕೇತವೇ ಸರಿ. ಮುಂದಿನ ಎರಡು ವರ್ಷ ಮಹಾವಿದ್ಯಾಲಯದ ಕೆಲಸ ಕಾರ್ಯಗಳನ್ನು ಅತ್ಯಂತ ಸುವ್ಯವಸ್ಥಿತವಾಗಿ ನಡೆಸಿ, ಆಡಳಿತ-ವರ್ಗದ ಮೆಚ್ಚುಗೆ ಗಳಿಸಿದ್ದನಲ್ಲದೆ ಮುಂದೆ ಅದರ ಖಾಯಂ ಪ್ರಾಚಾರ್ಯನಾಗಿಯೂ ನೇಮಕಗೊಂಡನು.

## ೫. ಐತಿಹಾಸಿಕ ಏಸುವಿನ ಅನ್ವೇಷಣೆ

ಆಲ್ಬರ್ಟ್ ಶ್ವೆಯಿಟ್ಸರ್ ಜನ್ಮ ತಾಳಿದ್ದು ಸಂಪೂರ್ಣ ಕ್ರೈಸ್ತ ಮತಾವಲಂಬಿಗಳಿದ್ದ ಭೂ ಭಾಗದಲ್ಲಿ. ಅವನ ಮನೆತನದಲ್ಲೂ ಕ್ರೈಸ್ತ ಧರ್ಮ ಬೋಧನೆಯ ವೃತ್ತಿ ತಲೆತಲಾಂತರಗಳಿಂದ ರೂಢಿಯಾಗಿ ಬಂದಿತ್ತು. ಬಾಲ್ಯದಲ್ಲಿ ಅವನೂ ಸಹಾ ಮತಧರ್ಮ, ಬೈಬಲ್ ಮತ್ತು ಏಸುಕ್ರಿಸ್ತನ ವಿಷಯದಲ್ಲಿ ಅತ್ಯಂತ ಪೂಜ್ಯಭಾವನೆ ತಳೆದಿದ್ದ. ಆದರೆ ಬುದ್ಧಿ ಚುರುಕು ಆದಂತೆಲ್ಲ ಕ್ರಿಶ್ಚಿಯನ್ ಮತಧರ್ಮದ ಉಗಮ, ಬೋಧನೆ ಮತ್ತು ಆಚರಣೆಗಳಲ್ಲಿ ಹಲವು ವಿರೋಧಾಭಾಸಗಳಿರುವಂತೆ ಅವನಿ ಗನ್ನಿಸಿತು. ಅದರ ಪುರಾಣೇತಿಹಾಸಗಳಲ್ಲಿ ಹಲವು ಮೂಢನಂಬಿಕೆ, ಕಟ್ಟುಕತೆ, ಅಂಧ ಶ್ರದ್ಧೆಗಳು ತಲೆ ಹಾಕಿದಂತೆ ಭಾಸವಾಯಿತು. ಅವನು ಪ್ರವರ್ಧಮಾನಕ್ಕೆ ಬಂದಂತೆಲ್ಲಾ ವೈಚಾರಿಕ ಮನೋಭಾವವೂ ಅಂಕುರಿಸಿ ಬೆಳೆಯಲಾರಂಭಿಸಿತು. ಈ ಹಿನ್ನೆಲೆಯಲ್ಲಿ

ಶ್ವೈಯಿಟ್ಸರ್ ಮತಧರ್ಮ ಮತ್ತು ಪುರಾಣಗಳಲ್ಲಿನ ನಂಬಿಕೆಗಳ ನಿಜಾಂಶಗಳನ್ನರಿಯುವ ಕುತೂಹಲಿಯಾಗುತ್ತಾನೆ. ಮುಂದೆ ಯಾವ ವಿಚಾರವನ್ನಾದರೂ ವೈಚಾರಿಕ ಒರೆಗಲ್ಲಿಗೆ ತಿಕ್ಕಿ ತಾಳೆ ನೋಡಿದಲ್ಲದೆ ನಂಬುತ್ತಿರಲಿಲ್ಲ. ಹಾಗೆಂದ ಮಾತ್ರಕ್ಕೆ ಈ ವಿಷಯಗಳಲ್ಲಿ ಅವನಿಗೆ ಅಗೌರವವಿರಲಿಲ್ಲ. ಅವುಗಳ ಸತ್ಯಾಸತ್ಯೆಗಳನ್ನರಿತು, ಮೂಢ ನಂಬಿಕೆ, ಅಂಧಶ್ರದ್ಧೆಗಳನ್ನು ಹೋಗಲಾಡಿಸುವುದೇ ಅವನ ಉದ್ದೇಶವಾಗಿತ್ತು.

**ಕ್ರಿಶ್ಚಿಯನ್ ಮತಧರ್ಮದ ಉಗಮ**

ಆ ಸಮಯದಲ್ಲಿ ಏಸುಕ್ರಿಸ್ತನ ಅವತಾರ ಮತ್ತು ಅವನ ಬೋಧನೆ ಇತ್ಯಾದಿಗಳ ವಿಷಯದಲ್ಲಿ ಇದ್ದ ನಂಬಿಕೆಗಳ ಹಿನ್ನೆಲೆಯನ್ನು ಸಂಕ್ಷಿಪ್ತವಾಗಿ ಅರಿತುಕೊಂಡರೆ, ಶ್ವೈಯಿಟ್ಸರ್‌ನಲ್ಲಿ ವೈಚಾರಿಕ ಮನೋಭಾವ ಉದ್ಭವವಾದ ಸಂದರ್ಭಗಳನ್ನು ಅರ್ಥೈಸಿಕೊಳ್ಳಲು ಸಹಕಾರಿಯಾಗುತ್ತದೆ.

ಏಸುಕ್ರಿಸ್ತನ ಅವತಾರವಾಗುವ ಹಲವಾರು ಶತಮಾನಗಳ ಹಿಂದಿನಿಂದಲೂ ಇಸ್ರೇಲ್ ಪರಕೀಯರ ಆಡಳಿತದಲ್ಲಿತ್ತು. ಅಲ್ಲಿನ ಮೂಲನಿವಾಸಿಗಳಾದ ಯಹೂದ್ಯರು ಅವರ ದಾಸ್ಯದಲ್ಲಿ ತೊಳಲಾಡುತ್ತಿದ್ದರು. ಅವರಿಗೆ ವೈಯಕ್ತಿಕ ಸ್ವಾತಂತ್ರ್ಯವಿರಲಿಲ್ಲ. ಸ್ವಧರ್ಮವನ್ನು ಆಚರಿಸುವುದಕ್ಕೂ ಅಡಚಣೆಗಳಿದ್ದವು. ಗುಲಾಮಗಿರಿ ಅವರನ್ನು ದಿನೇ ದಿನೇ ಹತಾಶರನ್ನಾಗಿ ಮಾಡುತ್ತಿದ್ದ ಸಮಯದಲ್ಲಿ ಒಂದು ಅಶರೀರ ದೇವವಾಣಿಯೊಂದು ಕೇಳಿಸಿತಂತೆ. ಗುಲಾಮಗಿರಿಯಿಂದ ಬಿಡುಗಡೆಯಾಗುವ ಕಾಲ ಸನ್ನಿಹಿತವಾಗುತ್ತಿದೆಯೆಂದು ಅದನ್ನು ಕೇಳಿದವರು ಪ್ರಚಾರ ಮಾಡತೊಡಗಿದರು. ''ಸದ್ಯದಲ್ಲೇ ದೇವರ ರಾಜ್ಯ'' ಉದಯಿಸಲಿದೆಯೆಂದು ಧರ್ಮ ಪ್ರಚಾರಕರು ಉಪದೇಶ ಮಾಡಲಾರಂಭಿಸಿದರು. ಅದಕ್ಕೆ ಮೊದಲೇ ಪ್ರವಾದಿಯೊಬ್ಬನ ಅವತಾರವಾಗಲಿದೆ ಎಂದು ಕೆಲವರು ಭವಿಷ್ಯ ನುಡಿದರು. ಅಂಥ ಪ್ರವಾದಿಯು ''ದೇವಪುತ್ರ'' (SON OF GOD) ಎಂದು ಕೆಲವರು ನಂಬಿದ್ದರೆ, ಅವನು ''ಮಾನವ ಪುತ್ರ'' (SON OF MAN)ನಾಗಿರುತ್ತಾನೆಂದು ಮತ್ತೆ ಕೆಲವರು ಹೇಳುತ್ತಿದ್ದರು. ಅಂತೂ ಸುಖೀ ರಾಜ್ಯದ ಕನಸಿನಲ್ಲಿ ಆಗಿನ ಇಸ್ರೇಲಿನ ಜನ ಜೀವನ ಸಾಗಿಸುತ್ತಿದ್ದರು.

ಇಸ್ರೇಲಿನ ಹೆಸರಾಂತ ಅಬ್ರಹಾಂನ ವಂಶಸ್ಥನಾದ ಜೋಸೆಫ್‌ಗೂ ಕುಮಾರಿ ಮರಿಯಾ ಎಂಬುವಳಿಗೂ ಲಗ್ನ ನಿಶ್ಚಯವಾಗಿತ್ತು. ಆದರೆ ಮದುವೆ ಶಾಸ್ತ್ರೋಕ್ತವಾಗಿ ನಡೆದಿರಲಿಲ್ಲ. ಆ ಸಮಯದಲ್ಲೇ ಆಕೆ ಗರ್ಭಿಣಿಯಾಗಿ ಏಸು ಜನಿಸಿದನೆಂಬ ಪ್ರತೀತಿ ಇದೆ. ಅವರಿಬ್ಬರ ಶರೀರ ಸಂಪರ್ಕವಿಲ್ಲದೆ ಜನಿಸಿದ್ದರಿಂದ ಅದು ಪವಿತ್ರಾತ್ಮರ ಪ್ರಭಾವದಿಂದ ಆದ ಶ್ರೇಷ್ಠ ಗರ್ಭವೆಂದು ಪರಿಗಣಿಸಲಾಯಿತು. ಆ ಸಮಯದಲ್ಲೇ ಜೋಸೆಫ್‌ಗೆ ದೇವದೂತನೊಬ್ಬ ಗೋಚರಿಸಿ ಮರಿಯಾಳು ಕಳಂಕರಹಿತಳೆಂದೂ

ಅವಳಿಂದ ಜನಿಸುವವನಿಂದ ಮಾನವರ ಪಾಪಗಳೆಲ್ಲಾ ನಿವಾರಣೆಯಾಗಿ ಲೋಕ ಕಲ್ಯಾಣವಾಗುತ್ತದೆಂದೂ ಹೇಳಿದ. ಅಲ್ಲದೆ ಅವಳನ್ನು ವಿದ್ಯುಕ್ತವಾಗಿ ಮದುವೆ ಯಾಗುವಂತೆ ಆದೇಶಿಸಿದನೆಂಬ ಪ್ರತೀತಿ ಇದೆ.

ಏಸು ಜನಿಸಿದ್ದು ಯಹೂದಿಗಳನ್ನು ಆಗ ಆಳುತ್ತಿದ್ದ ಹೆರೋದನ (HEROD) ರಾಜ್ಯಭಾರದ ಕಾಲದಲ್ಲಿ; ಜುದೇಯ ನಾಡೆನಿಸಿದ್ದ ಬೆತ್ಲಹೇಂ ನಗರದಲ್ಲಿ. ಆ ಪವಿತ್ರಾತ್ಮನನ್ನು ಆರಾಧಿಸಲು ಪೂರ್ವದೇಶಗಳಿಂದ ಆಗಮಿಸಿದ್ದ ಕೆಲವು ಜ್ಞಾನಿಗಳಿಂದ ಹೆರೋದನಿಗೆ ಈ ವಿಷಯ ತಿಳಿದುಬರುತ್ತದೆ. ಅವನಿಂದ ತನಗೆ ಮುಂದೆ ತೊಂದರೆಯಾಗ ಬಹುದೆಂದು ಗ್ರಹಿಸಿದ ಅರಸನು ಆ ಶಿಶುವನ್ನು ಹುಡುಕಿಸಲು ಶತಪ್ರಯತ್ನ ಮಾಡುತ್ತಾನೆ. ವಿಷಯ ಜೋಸೆಫ್‌ನಿಗೂ ತಿಳಿಯುತ್ತದೆ. ಅಪಾಯದಿಂದ ಪಾರಾಗಲು ಮಗುವನ್ನು ಕಟ್ಟಿಕೊಂಡು ಜೋಸೆಫ್ ಈಜಿಪ್ಟ್‌ಗೆ ಪಲಾಯನ ಮಾಡುತ್ತಾನೆ. ಬೆತ್ಲಹೇಂನಲ್ಲಿ ಮಗುವನ್ನು ಗುರುತಿಸಲು ಆಗದಿದ್ದುದರಿಂದ ಅಲ್ಲಿ ಜನಿಸಿದ್ದ ಗಂಡುಮಕ್ಕಳನ್ನೆಲ್ಲಾ ಅರಸ ಕೊಲೆ ಮಾಡಿಸುತ್ತಾನೆ. ಮುಂದೆ ಹೆರೋದನು ಸಾಯುವವರೆಗೂ ಜೋಸೆಫ್ ಕಾದಿದ್ದು ಅನಂತರ ಇಸ್ರೇಲಿನ ನಜರತ್ ಎಂಬ ಪಟ್ಟಣಕ್ಕೆ ಏಸುವಿನೊಡನೆ ಹಿಂದಿರುಗುತ್ತಾನೆ.

ಬಾಲಕ ಏಸು ಪ್ರವರ್ಧಮಾನಕ್ಕೆ ಬಂದಂತೆಲ್ಲಾ ಅವನ ಪ್ರಭಾವ, ಪವಾಡಗಳು ಪ್ರಕಟವಾಗಲಾರಂಭಿಸುತ್ತವೆ. ಅವನು ಹೋದೆಡೆಗಳಲ್ಲೆಲ್ಲಾ ದೇವರ ಭಕ್ತಿಯ ಬಗೆಗೆ ಬೋಧಿಸುತ್ತಾನೆ. ಪ್ರವಾದಿಯ ಅವತಾರದ ಬಗೆಗೆ ಮೊದಲೇ ಕೇಳಿದ್ದ ಜನರು, ಏಸುವೇ ಆ ಪ್ರವಾದಿಯೆಂದು ಗುರುತಿಸಿ ಅವನ ಸುತ್ತ ಒಂದುಗೂಡುತ್ತಾರೆ. ಅವನ ಅನುಯಾಯಿಗಳಾಗುತ್ತಾರೆ. ಅವನು ಒಂದು ಸಾರಿ ಬೆಟ್ಟದ ಶಿಖರವನ್ನೇರಿ ಅಲ್ಲಿ ಮೊದಲು ಬೋಧಿಸಿದ ತತ್ವಗಳು – ಶಿಖರಾಗ್ರದಲ್ಲಿ ನೀಡಿದ ಸಂದೇಶ – (SERMON ON THE MOUNT) ಜನರಿಗೆ ಅತ್ಯಂತ ಸತ್ವಯುತವಾಗಿ ಕಾಣಿಸುತ್ತವೆ. ಅವನ ಬಗೆಗೆ ಒಳ್ಳೆಯ ಭಾವನೆಗಳನ್ನು ಮೂಡಿಸುತ್ತವೆ. ಅಂದಿನಿಂದ ಏಸು ಸಣ್ಣ ಸಣ್ಣ ಕತೆಗಳ ಮಾದರಿಯಲ್ಲಿ ಜನರ ಸ್ವಭಾವ, ನಡೆ-ನುಡಿಗಳನ್ನು ತಿದ್ದಲು ಬೋಧನೆಗಳನ್ನು ಮಾಡುತ್ತಾನೆ. ಊರಿಂದ ಊರಿಗೆ ತಿರುಗಿ ಜನರಿಗೆ ಹಿತವಚನ ನೀಡುತ್ತಾನೆ. ವಾಸಿಯಾಗದ ಕಾಯಿಲೆಗಳನ್ನು ಗುಣಪಡಿಸುವುದು, ಕುರುಡರಿಗೆ ಕಣ್ಣು ಕಾಣಿಸುವಂತೆ ಮಾಡುವುದು, ಕುಷ್ಠರೋಗಿಗಳನ್ನು ಗುಣಪಡಿಸುವುದು ಮುಂತಾದ ಪವಾಡಗಳನ್ನು ಮಾಡಿದನೆಂದು ಪ್ರತೀತಿಯೂ ಇದೆ. ಮೊದಲ ಹನ್ನೆರಡು ಶಿಷ್ಯರನ್ನು ವಿವಿಧ ದೇಶಗಳಿಗೆ ಕಳುಹಿಸಿ ತನ್ನ ತತ್ವಗಳನ್ನು ಪ್ರಚಾರ ಮಾಡಿಸುತ್ತಾನೆ.

ಹೆರೋದನ ನಂತರ ಪಟ್ಟಕ್ಕೆ ಬಂದ ಅವನ ಮಗನೂ ಏಸುವಿನ ಪ್ರಭಾವವನ್ನು ಸಹಿಸುವುದಿಲ್ಲ. ಅವನ ಶಿಷ್ಯರಿಗೆ ಚಿತ್ರಹಿಂಸೆ ಕೊಡಲಾರಂಭಿಸುತ್ತಾನೆ. ಆದರೂ ಜನ

ಜಗ್ಗದೇ ಏಸುವೇ ಯಹೂದ್ಯರ ಅರಸನೆಂದು ಸಾರುತ್ತಾರೆ. ಏಸುವೂ ಸದ್ಯದಲ್ಲೇ ದೇವರ ರಾಜ್ಯ ಉದಯಿಸುತ್ತದೆಂದು ಭವಿಷ್ಯ ನುಡಿಯುತ್ತಾನೆ. ಈ ವಿದ್ಯಮಾನಗಳನ್ನು ಸಹಿಸಲಾರದೆ ದೊರೆ ಅವನನ್ನು ಹಿಡಿದು ತರಲು ಆದೇಶ ನೀಡುತ್ತಾನೆ. ಏಸು ಬಂಧನಕ್ಕೊಳಗಾಗದೇ ಸ್ವಯಿಚ್ಛೆಯಿಂದ ದೊರೆಯ ಎದಿರು ಹಾಜರಾಗಲು ನಿರ್ಧರಿಸುತ್ತಾನೆ. ರಾಜನೆದುರು ಹಾಜರಾಗುವ ಹಿಂದಿನ ದಿನ ತನ್ನ ಶಿಷ್ಯರೊಡಗೂಡಿ ಕೊನೆಯ ಭೋಜನ ಮಾಡುತ್ತಾನೆ. ಅವರಿಗೆಲ್ಲಾ ತನ್ನ ಕೊನೆಯ ಹಿತವಚನ ನುಡಿಯುತ್ತಾನೆ. ಮರುದಿನ ದೊರೆಯ ಮುಂದೆ ಹಾಜರಾದಾಗ ಏಸುವನ್ನು ನಿರ್ದಯ ಹಾಗೂ ಅಮಾನುಷ ರೀತಿಯಲ್ಲಿ ಶಿಲುಬೆಗೇರಿಸಿ ಸಾಯಿಸುತ್ತಾನೆ. ಅವನನ್ನು ಹೂಳಿದ್ದ ಗೋರಿಯಿಂದ ಶವ ಮಾಯವಾಗುತ್ತದೆ. ಮುಂದೆ ಮೂರು ದಿನಗಳಲ್ಲಿ ಕೆಲವು ಶಿಷ್ಯರಿಗೆ ಅವನ ದರ್ಶನವಾಗುತ್ತದೆ. ಇದನ್ನೇ ಪುನರುತ್ಥಾನ (RESURRECTION) ಎನ್ನಲಾಗಿದೆ. ಮುಂದೆ ಅವನ ಶಿಷ್ಯರು ಪ್ರಪಂಚಾದ್ಯಂತ ಏಸುಕ್ರಿಸ್ತನ ಬೋಧನೆಗಳನ್ನು ಪ್ರಚಾರ ಮಾಡುತ್ತಾರೆ. ಅವನ ಹೆಸರಿನಲ್ಲಿ ಕ್ರೈಸ್ತಮತ ಸ್ಥಾಪನೆಯಾಗುತ್ತದೆ. ಪ್ರಸ್ತುತ ಈ ಧರ್ಮ ಪ್ರಪಂಚಾದ್ಯಂತ ಅತ್ಯಂತ ಹೆಚ್ಚು ಅನುಯಾಯಿಗಳನ್ನು ಹೊಂದಿ ವಿಶ್ವಮಾನ್ಯವಾಗಿದೆ.

ಇದಿಷ್ಟೂ ಸಂಕ್ಷಿಪ್ತವಾಗಿ ಏಸುಕ್ರಿಸ್ತನ ಅವತಾರ, ಪವಾಡ, ಬೋಧನೆ, ಅಂತ್ಯ, ಪುನರುತ್ಥಾನ ಹಾಗೂ ಕ್ರೈಸ್ತಮತದ ಉಗಮದ ಬಗೆಗೆ ಇರುವ ತಿಳಿವಳಿಕೆ. ಅವನ ಶಿಷ್ಯರಾದ ನಾಲ್ವರು ಸಂತರು ಬರೆದಿರುವ ಸುವಾರ್ತೆಗಳಿಂದ ತಿಳಿದುಬರುವ ಸ್ಥೂಲ ರೂಪದ ಸಮಾಚಾರ. ಆದರೆ, ಐತಿಹಾಸಿಕ ದೃಷ್ಟಿಕೋನದಿಂದ ಏಸುವಿನ ಜೀವನ, ಬೋಧನೆಗಳ ಬಗೆಗೆ ಅಧಿಕೃತವಾಗಿ ಬರೆದ ಗ್ರಂಥಗಳು ಲಭ್ಯವಿಲ್ಲ. ಇದರಿಂದಾಗಿ ಏಸುಕ್ರಿಸ್ತನು ಜೀವಿಸಿದ್ದ ಕಾಲದಲ್ಲೇ ನಡೆದ ಘಟನೆಗಳ ಬಗೆಗೆ ಬೇರೆ ಬೇರೆ ತೆರನ ವ್ಯಾಖ್ಯಾನಗಳು ಪ್ರಚಲಿತವಾಗಿದೆ. ಕ್ರೈಸ್ತಮತ ಸ್ಥಾಪನೆಯಾದ ಶುರುವಿನಲ್ಲೇ ಆ ಕಾಲದ ಧರ್ಮೋಪದೇಶಕರು, ಚರ್ಚಿನ ಗುರುಗಳೇ ಮುಂತಾದವರು ತಮ್ಮದೇ ಆದ ವ್ಯಾಖ್ಯಾನಗಳನ್ನು ಸೇರಿಸಿ ಕ್ರಿಶ್ಚಿಯನ್ ಧರ್ಮ, ತತ್ವ, ಆಚರಣೆ ಇತಿಹಾಸಗಳ ಮೇಲೆ ನಿಬಂಧನೆಗಳನ್ನು ವಿಧಿಸಿದರು. ಅವು ಕಟ್ಟುನಿಟ್ಟಾಗಿ ಆಚರಣೆಗೆ ಬರುವಂತೆ ವ್ಯವಸ್ಥೆ ಮಾಡಿದರು. ಈ ವಿಷಯಗಳಲ್ಲಿ ಮೊದಲಿನಿಂದಲೂ ಜಿಜ್ಞಾಸೆಗಳಿದ್ದು ರೋಮನ್ ಕ್ಯಾಥೋಲಿಕ್, ಪ್ರಾಟಿಸ್ಟೆಂಟ್ ಲುಥಿರಾನ್, ಆಂಗ್ಲಿಕನ್, ಬಾಪ್ಟಿಸ್ಟ್, ಪ್ರೆಸ್ ಬೈಟೀರಿಯನ್ ಮುಂತಾದ ಪಂಗಡಗಳು ಹುಟ್ಟಿಕೊಂಡಿರುವುದು ಸರ್ವವೇದ್ಯ. ಕನ್ಯೆ ಮೇರಿಗೆ ಮಗು ಜನಿಸುವುದು, ಯಹೂದ್ಯರ ಉದ್ಧಾರಕ ಪ್ರವಾದಿ (MESSAIAH) ಅವತರಿಸುವುದು, ಅವನು ದೇವಪುತ್ರನೇ, ಮಾನವ ಸಂಜಾತನೇ ಎಂಬ ಸಂಶಯ, ದೇವರರಾಜ್ಯ ಉದಯಿಸುತ್ತದೆಂಬ ಭವಿಷ್ಯವಾಣಿಯ ಪರಿಣಾಮ, ಕೊನೆಯ

ಭೋಜನ ಮತ್ತು ಆ ಸಂದರ್ಭದಲ್ಲಿ ಅವನಾಡಿದ ಮಾತುಗಳ ಅರ್ಥವಿವರಣೆ ಮತ್ತು ಶಿಲುಬೆಗೇರಿಸಿ ಸಾಯಿಸಿದ ನಂತರ ಏಸುವಿನ ಪುನರುತ್ಥಾನಗಳ ಬಗೆಗೆ ಇನ್ನೂ ಏಕಾಭಿಪ್ರಾಯಗಳಿಲ್ಲ. ಆಲ್ಬರ್ಟ್ ಶ್ವೈಯಿಟ್ಸರ್‌ನಂಥ ವೈಚಾರಿಕ ಮನೋಭಾವದ ಯುವಕನಲ್ಲಿ ಈ ವಿಚಾರಗಳು ಹಲವಾರು ಸಂಶಯಗಳನ್ನುಂಟುಮಾಡಿದ್ದರಲ್ಲಿ ಆಶ್ಚರ್ಯವೇನಿಲ್ಲ. ಪಾದ್ರಿಯ ಮಗನಾಗಿ, ಎಳೆಯ ವಯಸ್ಸಿನಲ್ಲೇ ಮತಧರ್ಮದ ಪ್ರಭಾವ ಅವನ ಮೇಲಿದ್ದರೂ ಆಳವಾದ ಅಭ್ಯಾಸ ಮತ್ತು ಚಿಂತನೆಯಿಂದ ತನಗೆ ಅಸಂಗತಗಳೆನಿಸಿದ ವಿಷಯಗಳನ್ನು ಪ್ರಶ್ನಿಸುವ ಸ್ವಭಾವ ಅವನಲ್ಲಿ ಕ್ರಮೇಣ ಮೂಡಿಬಂದಿತ್ತು. ವಿದ್ಯಾರ್ಥಿದೆಸೆ ಮತ್ತು ಮುಂದೆ ಚರ್ಚಿನ ಕ್ಯೂರೇಟ್ ಆದಾಗಲೂ ಸಹ ತನ್ನ ವೈಚಾರಿಕ ಮನೋಭಾವವನ್ನು ಮುಂದುವರೆಸಿಕೊಂಡು, ಹಲವು ಗ್ರಂಥ ರಚನೆಗೂ ಪ್ರಯತ್ನಿಸುತ್ತಾನೆ.

ಹೀಗೆ ರಚಿಸಿದ ಗ್ರಂಥಗಳಲ್ಲಿ ''ಐತಿಹಾಸಿಕ ಏಸುವಿನ ಅನ್ವೇಷಣೆ'' ಅತ್ಯಂತ ಪ್ರಮುಖವಾದದ್ದು. ವಿಷಯದ ಗಹನತೆ, ವ್ಯಕ್ತಪಡಿಸಿದ ಅಭಿಪ್ರಾಯಗಳ ದೃಷ್ಟಿಯಿಂದ ಅಭ್ಯಾಸದ ಆಳ ಮತ್ತು ವೈಚಾರಿಕ ಚಿಂತನೆಯ ಪ್ರತೀಕ ಈ ಗ್ರಂಥವಾಗಿದೆ. ಅದಕ್ಕೊದಗಿದ ಮಿಶ್ರಪ್ರತಿಕ್ರಿಯೆ ಮತ್ತು ಅವನಿಗೆ ಲಭಿಸಿದ ಕೀರ್ತಿ, ಅಪಕೀರ್ತಿಗಳ ದೃಷ್ಟಿಯಿಂದಲೂ, ಈಗಲೂ ಆ ಗ್ರಂಥ ಶ್ವೈಯಿಟ್ಸರ್ ವಿಷಯದ ಬಗೆಗೆ ಪ್ರಮುಖ ಆಕರ ಗ್ರಂಥವಾಗಿ ಉಳಿದುಕೊಂಡಿದೆ. ಅದಕ್ಕೆ ಪೂರಕವಾಗಿ ಶ್ವೈಯಿಟ್ಸರ್ ಆ ಸಮಯದಲ್ಲೇ ರಚಿಸಿದ ಇತರ ಪುಸ್ತಕಗಳಾದ ''ದ ಮಿಸ್ಟರಿ ಆಫ್ ದ ಕಿಂಗ್‌ಡಮ್ ಆಫ್ ಗಾಡ್'', ''ದ ಪ್ರಾಬ್ಲಂ ಆಫ್ ದ ಲಾಸ್ಟ್ ಸಪ್ಪರ್'', ''ದ ಸೀಕ್ರೆಟ್ ಆಫ್ ದ ಮೆಸ್ಸೈಯಾಶಿಪ್ ಆ್ಯಂಡ್ ಪ್ಯಾಷನ್'' (The Mystery of the Kingdom of God, The problem of the Last Supper, The Secret of the Messaiaship and Passion)ಗಳೂ ಸಹಾ ಇಲ್ಲಿ ಉಲ್ಲೇಖಾರ್ಹ. ಇತರ ಎಲ್ಲಾ ಮತಧರ್ಮಗಳ ತತ್ವ ಮತ್ತು ಆಚರಣೆಗಳಲ್ಲಿ ನೆಲೆಯೂರಿದ ಮೂಢನಂಬಿಕೆ, ಅಂಧಶ್ರದ್ಧೆ ಮತ್ತು ಶುಷ್ಕ ಸಂಸ್ಕಾರಗಳನ್ನು ಕ್ರೈಸ್ತಮತ ಧರ್ಮದಲ್ಲೂ ಶ್ವೈಯಿಟ್ಸರ್ ಗುರುತಿಸಿ ಅವುಗಳನ್ನು ನಿವಾರಿಸಲು ತನ್ನ ವಿಚಾರವಾದವನ್ನು ಈ ಎಲ್ಲಾ ಗ್ರಂಥಗಳಲ್ಲಿ ಮಂಡಿಸಿದ್ದಾನೆ. ದೇವರ ರಾಜ್ಯ ಬರುತ್ತದೆಂದು ಈಗಲೂ ಭವಿಷ್ಯ ನುಡಿಯುವ ಕಂದಾಚಾರಿಗಳಿದ್ದಾರೆ. ಭಗವಾನ್ ಏಸುಕ್ರಿಸ್ತನಂಥ ಪ್ರವಾದಿ ಇಂಥ ಪೊಳ್ಳು ಆಶ್ವಾಸನೆ ನೀಡಿರಲಾರನೆಂದು ಶ್ವೈಯಿಟ್ಸರ್ ವಾದಿಸುತ್ತಾನೆ. ''ದೇವರರಾಜ್ಯ ನಿಮ್ಮಲ್ಲೇ ಇದೆ.'' ''ನೀವೀಗ ದೇವರ ರಾಜ್ಯದಲ್ಲೇ ಇದ್ದೀರಿ'' ಎಂದು ವಾದಿಸುವವರೂ ಈಗಲೂ ಇದ್ದಾರೆಂದರೆ ಈ ಬಗೆಗೆ ಇರುವ ಜಿಜ್ಞಾಸೆಗಳ ಅರಿವಾಗಬಹುದು. ಶ್ವೈಯಿಟ್ಸರ್‌ನ ಅಭಿಪ್ರಾಯದಲ್ಲಿ ಏಸುಕ್ರಿಸ್ತ ಮಾನವ

ಸಂಜಾತನೇ ಹೊರತು ದೇವಪುತ್ರನಲ್ಲ, ಅವನೊಬ್ಬ ಅತ್ಯಂತ ಶ್ರೇಷ್ಠ ಮಾನವ, ಅವನ ಬೋಧನೆಗಳಲ್ಲಿ ಮನುಜರು ಅನುಸರಿಸಬೇಕಾದ ಒಳ್ಳೆಯ ಅಂಶಗಳಿವೆ, ಅವನನ್ನೇ ದೇವರೆಂದು ನಿಗೂಢ ಆಚರಣೆಗಳಲ್ಲಿ ತೊಡಗುವುದಕ್ಕಿಂತ, ಅವನ ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದೇ ನಿಜವಾದ ಕ್ರಿಶ್ಚಿಯನ್ ಧರ್ಮ ಎಂದು ಮುಂತಾದ ವಿಷಯಗಳು ಅವನ ಗ್ರಂಥಗಳ ಸಾರವೆನ್ನಬಹುದು.

ಕ್ರೈಸ್ತ ಮತಧರ್ಮದ ಬಗೆಗೆ ಆಳವಾಗಿ ಅಭ್ಯಸಿಸಿ, ಡಾಕ್ಟರೇಟ್‌ಗಳನ್ನು ಪಡೆದು, ಚರ್ಚ್‌ಗಳ ಆರಾಧನೆಗಳಲ್ಲಿ ಸಕ್ರಿಯವಾಗಿ ಮಾರ್ಗದರ್ಶನ ಮಾಡಿ, ತತ್ವಶಾಸ್ತ್ರದ ಮಹಾವಿದ್ಯಾಲಯದ ಪ್ರಾಚಾರ್ಯನಾದವನು ಈ ತೆರನ ಅಭಿಪ್ರಾಯದ ಗ್ರಂಥಗಳನ್ನು ಪ್ರಕಟಿಸಿದಾಗ ಕಟುವಾದ ಟೀಕೆಗಳು ಬರುವುದು ಸಾಮಾನ್ಯವೇ. ಅವನ ಕೆಲವು ನೆಚ್ಚಿನ ಗುರುಗಳೇ ಈ ಬಗೆಗೆ ಅಸಮಾಧಾನ ವ್ಯಕ್ತಪಡಿಸಿದ್ದರು. ಅವನು ಕ್ರೈಸ್ತ ಮತಾವಲಂಬಿಯೇ ಎಂಬ ಸಂಶಯವನ್ನು ಹಲವರು ವ್ಯಕ್ತಪಡಿಸಿದ್ದರು. ಮುಂದೊಂದು ಸಾರಿ, ''ತಾವು ಕ್ರೈಸ್ತಮತಸ್ಥರೆಂದುಕೊಳ್ಳುವಿರಾ ?'' ಎಂದೊಬ್ಬರು ಪ್ರಶ್ನಿಸಿದಾಗ, ಶ್ವೆಯಿಟ್ಸರ್ ''ಕ್ರೈಸ್ತರಲ್ಲಿ ಎರಡು ವಿಧದವರಿದ್ದಾರೆ. ಮೊದಲನೆಯವರು ಮತ ಸಿದ್ಧಾಂತಗಳನ್ನು ಯಾವ ವಿಚಾರಕ್ಕೆಡೆಗೊಡದೆ ನಂಬುತ್ತಾರೆ. (DOGMATIC) ಎರಡನೆಯವರು ಅವುಗಳನ್ನು ವೈಚಾರಿಕವಾಗಿ ವಿಶ್ಲೇಷಿಸಿ, ಸರಿಕಾಣುವ ತತ್ವಗಳನ್ನು ನಂಬುತ್ತಾರೆ. ಅವರಲ್ಲಿ ಎರಡನೆಯ ಗುಂಪಿಗೆ ಸೇರಿದವ ನಾನು. ಈ ವರ್ಗದವರು ಏಸುವಿನ ತತ್ವ ಮತ್ತು ಬೋಧನೆಗಳನ್ನು ಅಕ್ಷರಶಃ ಪಾಲಿಸುವವರು. ಅವರು ಹಿಂದಿನ ಅಥವಾ ಈಗಿನ ಚರ್ಚ್‌ಗಳ ನಿಯಮಗಳಿಗೆ ಅಂಟಿಕೊಳ್ಳುವವರಲ್ಲ. ಅಂತಹವರಲ್ಲಿ ನಾನೊಬ್ಬ'' ಎಂದು ಉತ್ತರಿಸಿದ ಆಲ್ಬರ್ಟ್ ಶ್ವೆಯಿಟ್ಸರ್‌ನ ಮನೋಭಾವ ಆಗ ಹೇಗಿತ್ತೆಂಬುದನ್ನು ಊಹಿಸಬಹುದು. ಪುಸ್ತಕಗಳು ಮೊದಲು ಯುರೋಪಿನಲ್ಲಿ ಜರ್ಮನ್ ಭಾಷೆಯಲ್ಲಿ ಪ್ರಕಟವಾದಾಗ ತೀವ್ರ ಪ್ರತಿಕ್ರಿಯೆಗಳಾದವು. ಕೆಲ ಕಾಲಾನಂತರ ಅವುಗಳ ಇಂಗ್ಲಿಷ್ ಅವತರಣಿಕೆಗಳು ಇಂಗ್ಲೆಂಡ್‌ನಲ್ಲಿ ಪ್ರಕಟವಾದಾಗ ಬಹುತೇಕ ಧಾರ್ಮಿಕ ಮುಂದಾಳುಗಳು ಅವುಗಳನ್ನು ಸ್ವಾಗತಿಸಿದರು.

ನೀತಿ ಧರ್ಮ-ಬೋಧನೆಗಳನ್ನು ಮಾಡಿ ಮತಗಳನ್ನು ಸ್ಥಾಪಿಸಿದ ಪ್ರವಾದಿಗಳ ಮೂಲತತ್ವಗಳ ರೀತಿ ಒಂದಾದರೆ ಅವರ ಅನುಯಾಯಿಗಳೆನಿಸಿಕೊಂಡವರು ಅನುಷ್ಠಾನಕ್ಕೆ ತಂದಿರುವ ರೀತಿ ಬಹುತೇಕ ವಿರುದ್ಧವಾಗಿರುವುದು ಈಗ ಪ್ರಚಾರದಲ್ಲಿ ಇರುವ ಎಲ್ಲಾ ಮತಗಳ ಜಾಯಮಾನವಾದಂತಿದೆ. ಈ ಮತಗಳ ಪುರೋಹಿತವರ್ಗ ಅವರಿಗೆ ಅನುಕೂಲವಾಗುವ ರೀತಿಯಲ್ಲಿ ಮತಸ್ಥಾಪಕರ ಬೋಧನೆಗಳಿಗೆ ತಮ್ಮದೇ ಆದ ವ್ಯಾಖ್ಯಾನ ನೀಡುತ್ತಿರುವುದೇ ಈಗ ಪ್ರಪಂಚಾದ್ಯಂತ ಹರಡಿರುವ ಮತೀಯ ಅಶಾಂತಿಗೆ ಕಾರಣವೆನ್ನಬಹುದು. ಎಲ್ಲಾ ಮತಗಳ ಅನುಯಾಯಿಗಳಲ್ಲೂ ಆಲ್ಬರ್ಟ್

ಶ್ವೈಯಿಟ್ಸರ್‌ನಂಥ ವೈಚಾರಿಕರು ಇಲ್ಲದಿಲ್ಲ. ಅವರ ಪ್ರಮಾಣ ಅತ್ಯಲ್ಪ ಅಷ್ಟೇ. ಏಸುಕ್ರಿಸ್ತನ ಮೂಲ ಬೋಧನೆಗಳ ಪ್ರಾಮಾಣಿಕ ವ್ಯಾಖ್ಯಾನ ಮಾಡಿ ಅವುಗಳನ್ನು ಅಕ್ಷರಶಃ ಅನುಸರಿಸುವುದು ಶ್ವೈಯಿಟ್ಸರನ ಉದ್ದೇಶವಾಗಿತ್ತು. ಕ್ರಿಸ್ತನ ಮರಣಾ ನಂತರ ಅವನ ಅನುಯಾಯಿಗಳಿಂದ ಕ್ರೈಸ್ತಮತ ಅಸ್ತಿತ್ವಕ್ಕೆ ಬಂತು. ಅದರ ಆರಂಭದ ವರ್ಷಗಳಲ್ಲಿ ಮತಬೋಧಕರು ಮತ್ತು ಚರ್ಚ್‌ನ ಗುರುಗಳು ಅವನ ತತ್ವಗಳನ್ನು ತಮಗೆ ಅರಿವಾದಂತೆ ವ್ಯಾಖ್ಯಾನಿಸಿದ್ದಲ್ಲದೆ ಹಲವಾರು ಮತ ಸಂಸ್ಕಾರಗಳನ್ನು ಜಾರಿಗೆ ತಂದರು. ಮುಂದೆ ಶತಮಾನಗಳು ಉರುಳಿದಂತೆಲ್ಲಾ ಹಲವಾರು ಕಟ್ಟಳೆಗಳು, ವಿವಿಧ ಸಂಸ್ಕಾರಗಳು ಮತ್ತು ಅಭಿಪ್ರಾಯಗಳು ಜಾರಿಗೆ ಬಂದವು. ಜೊತೆಯಲ್ಲೇ ಅವೈಜ್ಞಾನಿಕವಾದ ಮೂಢನಂಬಿಕೆಗಳು, ಕಂದಾಚಾರಗಳು ಸಹಾ ನುಸುಳಿಕೊಂಡು ಪ್ರಸ್ತುತ ಅವುಗಳನ್ನು ವೈಚಾರಿಕವಾಗಿ ವ್ಯಾಖ್ಯಾನಿಸುವುದಾಗಲೀ ಅಥವಾ ಮಾರ್ಪಡಿಸುವ ಪ್ರಯತ್ನ ನಡೆದರೆ ತೀವ್ರ ವಿರೋಧ ವ್ಯಕ್ತವಾಗುತ್ತದೆ.

ಆಲ್ಬರ್ಟ್ ಶ್ವೈಯಿಟ್ಸರ್‌ನ ಚಿಂತನೆ ಮತ್ತು ನಡೆವಳಿಕೆಗಳನ್ನು ಸಂಪ್ರದಾಯಸ್ಥ ಕ್ರೈಸ್ತರು ವಿರೋಧಿಸುವಂಥ ವಿಚಾರಗಳು ಎದ್ದು ಕಾಣುತ್ತಿದ್ದರೂ ಆ ವರ್ಷ (೧೯೦೨) ಮಾರ್ಚ್ ತಿಂಗಳಲ್ಲಿ ಪ್ರೈವಾಟ್ ಡೋಜೆಂಟ್ (PRIVAT DOZENT) ಹುದ್ದೆಗೆ ಅಧಿಕೃತವಾಗಿ ನೇಮಕವಾದನು. ಸಂಪ್ರದಾಯ ಶರಣರಾದ ಇಬ್ಬರು ಪ್ರಮುಖ ಪ್ರಾಧ್ಯಾಪಕರು ಕಟುವಾಗಿ ವಿರೋಧಿಸಿದರೂ ಈ ನೇಮಕ ರದ್ದಾಗಲಿಲ್ಲವೆಂದರೆ ಆಲ್ಬರ್ಟ್ ಶ್ವೈಯಿಟ್ಸರ್ ತನ್ನ ಎಳೆಯ ವಯಸ್ಸಿನಲ್ಲೇ ಎಂತಹ ವ್ಯಕ್ತಿತ್ವ ಬೆಳೆಸಿ ಕೊಂಡಿದ್ದನೆಂಬುದರ ಅರಿವಾಗಬಹುದು. ಹೀಗೆ ವಿರೋಧಗಳಿದ್ದರೂ ತನ್ನ ಸ್ವಂತ ಏಳಿಗೆಗಾಗಿ ತಾನು ನಂಬಿದ್ದ ಸಿದ್ಧಾಂತಗಳನ್ನು ಬದಲಾಯಿಸಿಕೊಳ್ಳಲಿಲ್ಲ. ಬದಲಾಗಿ, ಈ ಸಮಯದಲ್ಲೇ ಹದಿನೆಂಟನೆಯ ಶತಮಾನದ ಮೇಧಾವಿ ಹಾಗೂ ತತ್ವಶಾಸ್ತ್ರಜ್ಞ ಗಯಟೆ (GOETHE)ಯ ವಿಚಾರಧಾರೆಯತ್ತ ಆಕರ್ಷಿತನಾದ. ಕಾವ್ಯ, ನಾಟಕ ರಚನೆ, ಅರ್ಥಶಾಸ್ತ್ರ, ಪ್ರಕೃತಿ ವಿಜ್ಞಾನ, ನಗರಗಳ ಯೋಜನೆ, ಸೇತುವೆ ನಿರ್ಮಾಣ– ಹೀಗೆ ಆ ಕಾಲದಲ್ಲಿ ಗಯಟೆಯ ಗಮನ ಸೆಳೆಯದ ವಿಚಾರಗಳಿರಲಿಲ್ಲ. ಅಷ್ಟೆಲ್ಲಾ ಪರಿಗಣಿತಿ ಪಡೆದಿದ್ದರೂ ಆಗಿನ ಸಮಾಜದಲ್ಲಿ ಅವನೊಬ್ಬ ವಿಚಿತ್ರ ವ್ಯಕ್ತಿಯೆನಿಸಿದ್ದ. ಬಹುಶಃ ಭಗವಾನ್ ಏಸುಕ್ರಿಸ್ತ ಮತ್ತು ಸೇಂಟ್‌ಪಾಲ್‌ರನ್ನು ಹೊರತುಪಡಿಸಿದರೆ ಶ್ವೈಯಿಟ್ಸರ್‌ನ ಮಾನಸಿಕ ಬೆಳವಣಿಗೆಯ ಮೇಲೆ ಹೆಚ್ಚಿನ ಪ್ರಭಾವ ಉಂಟಾಗಿದ್ದು ಗಯಟೆಯಿಂದಲೇ.

ಧಾರ್ಮಿಕ ವಿಷಯಗಳಲ್ಲಿ ಎರಡು ಡಾಕ್ಟರೇಟ್‌ಗಳನ್ನು ಗಳಿಸಿ ಚರ್ಚ್ ಮತ್ತು ವಿದ್ಯಾಲಯಗಳ ಕೆಲಸಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡ ಡಾ|| ಆಲ್ಬರ್ಟ್ ಶ್ವೈಯಿಟ್ಸರ್ ಜೀವನದ ಮೂರು ದಶಕಗಳ ಹಂತ ತಲುಪಿದ್ದರೂ ಮುಂದಿನ ಜೀವನದ

ಧ್ಯೇಯವನ್ನು ಖಚಿತವಾಗಿ ನಿರ್ಧರಿಸಿಕೊಂಡಿರಲಿಲ್ಲವೆಂದರೆ ಆಶ್ಚರ್ಯವಾಗ ಬಹುದು. ತನ್ನ ಮೂವತ್ತನೇ ವರ್ಷದವರೆಗೆ ಧಾರ್ಮಿಕ ವಿಚಾರಗಳಲ್ಲಿ ತೊಡಗಿಸಿ ಕೊಂಡು ಆಗಿನ ಪರಿಸ್ಥಿತಿಗನುಗುಣವಾಗಿ ಮುಂದಿನ ಜೀವನ ಮಾಧ್ಯಮವನ್ನು ನಿರ್ಧರಿಸುವ ಯೋಚನೆಯಿತ್ತೆಂದು ತನ್ನ ಆತ್ಮಚರಿತ್ರೆಯಲ್ಲಿ ಹೇಳಿದ್ದುಂಟು. ಇದರಂತೆ ಶೈಕ್ಷಣಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಅಧಿಕೃತವಾಗಿ ಕಾರ್ಯಮಗ್ನನಾಗಿದ್ದರೂ ಬಡಬಗ್ಗರಿಗೆ ಸಹಾಯ ಮಾಡುವ ಹಲವಾರು ಸಾಮಾಜಿಕ ಕಾರ್ಯಗಳಲ್ಲೂ ಅವನು ಮುಂದಾಗಿ ಭಾಗವಹಿಸುತ್ತಿದ್ದ. ಇಂಥ ಸಂದರ್ಭದಲ್ಲೇ ಹೆಸರಾಂತ ಇತಿಹಾಸ ಪ್ರಾಧ್ಯಾಪಕರಾದ ಬ್ರೂಸ್ಲೊ ಅವರ ಮಗಳು ಹೆಲೆನ್ ಬ್ರೂಸ್ಲೊಳ ಪರಿಚಯ ಮತ್ತು ಸ್ನೇಹ ಅಂಕುರಿಸಿದ್ದು.

ಹೆಲೆನ್‌ಳ ಪೂರ್ವಿಕರು ಯಹೂದ್ಯ ಮೂಲದವರಾದರೂ ಅವಳ ತಂದೆ ಮಕ್ಕಳನ್ನೆಲ್ಲಾ ಕ್ರೈಸ್ತಮತಕ್ಕೆ ವಿಧಿವತ್ತಾಗಿ ಸೇರಿಸಿದ್ದರು. ಶ್ವೈಯಿಟ್ಸರ್‌ನಂತೆ ವೈಚಾರಿಕ ಮನೋಭಾವ ಹೆಲೆನ್‌ಳದು. ಅನಾಥಾಲಯದ ಮಕ್ಕಳ ಶುಶ್ರೂಷೆ, ಮದುವೆ ಯಾಗದೇ ಮಕ್ಕಳನ್ನು ಪಡೆದ ತಾಯಂದಿರ ಉದ್ಧಾರ ಮುಂತಾದ ಕ್ಷೇತ್ರಗಳಲ್ಲಿ ಆಸಕ್ತಿ ವಹಿಸಿ ಕೆಲಸ ಮಾಡುತ್ತಿದ್ದಳು. ಸಂಗೀತದಲ್ಲೂ ಹೆಚ್ಚಿನ ಆಸಕ್ತಿ ಇತ್ತು. ಹೀಗೆ ಹಲವು ವಿಷಯಗಳಲ್ಲಿ ಏಕಾಭಿಪ್ರಾಯವಿದ್ದ ಆಲ್ಬರ್ಟ್ ಮತ್ತು ಹೆಲೆನ್ ಪರಸ್ಪರ ಆಕರ್ಷಿತ ರಾದುದರಲ್ಲಿ ಆಶ್ಚರ್ಯವೇನಿಲ್ಲ. ಸ್ಫುರದ್ರೂಪಿಯೂ, ದೃಢಕಾಯದವನಾಗಿಯೂ ಬೆಳೆದಿದ್ದ ಆಲ್ಬರ್ಟ್‌ಗೆ ಹಲವು ಯುವತಿಯರ ಆಕರ್ಷಣೆ ಇದ್ದರೂ, ಹೆಲೆನ್‌ಳ ವ್ಯವಹಾರಚತುರತೆ, ಸಮಾಜಸೇವಾ ಕಾರ್ಯಗಳಲ್ಲಿದ್ದ ಹುರುಪು-ಉತ್ಸಾಹಗಳು ಅವನಿಗೆ ಮೆಚ್ಚಿಗೆಯಾಗಿರಬೇಕು. ಅವರಿಬ್ಬರ ಸ್ನೇಹ-ಸಹಯೋಗ ವೃದ್ಧಿಯಾದಂತೆಲ್ಲಾ ಆಲ್ಬರ್ಟ್‌ನ ನಡೆ, ನುಡಿ ಮತ್ತು ಸಾಮಾಜಿಕ ನಡೆವಳಿಕೆಗಳಲ್ಲಿ ನಯ, ನಾಜೂಕುಗಳನ್ನುಂಟುಮಾಡುವುದರಲ್ಲಿ ಹೆಲೆನ್ ಪ್ರಮುಖ ಪಾತ್ರ ವಹಿಸಿದಳು. ಅವನು ಬರೆಯುತ್ತಿದ್ದ ಲೇಖನ ಮತ್ತು ಗ್ರಂಥಗಳ ಕರಡುಗಳನ್ನು ತಿದ್ದುವ ಕೆಲಸವೂ ಅವಳದೇ ಆಗಿತ್ತು. ಶ್ವೈಯಿಟ್ಸರ್‌ನ ಜೀವನಧ್ಯೇಯವೇನೆಂಬುದು ಇನ್ನೂ ನಿರ್ಧಾರವಾಗಿರದಿದ್ದರೂ, ಅವರಿಬ್ಬರು ಮುಂದೆ ಸತಿ-ಪತಿಗಳಾಗುವುದೆಂಬ ಒಡಂಬಡಿಕೆಯಂತೂ ಆಗಿತ್ತೆನ್ನಬಹುದು.

## ೬. "ಓ ದೇವರೇ ನಾನಲ್ಲಿಗೆ ಬರುತ್ತೇನೆ"

ಆಲ್ಬರ್ಟ್ ಶ್ವೈಯಿಟ್ಸರ್, ಜೀವನದ ಒಂದು ಹಂತವನ್ನು ತಲುಪಿ, ಹಲವಾರು ಕಾರ್ಯಕ್ಷೇತ್ರಗಳಲ್ಲಿ ಮಗ್ನನಾಗಿ ಬಿಡುವಿಲ್ಲದ ಕಾಲ. ೧೯೦೪ರ ಶರತ್ಕಾಲದ ಒಂದು

ಸಂಜೆ ತನ್ನ ಕೊಠಡಿಗೆ ಹಿಂದಿರುಗಿದಾಗ, ಪ್ಯಾರಿಸ್ ಮಿಷನರಿ ಸೊಸೈಟಿಯವರ ಕರಪತ್ರವೊಂದು ಮೇಜಿನ ಮೇಲಿತ್ತು. ಆಲ್‌ಸೇಶ್‌ನವನಾದ ಆಲ್‌ಫ್ರೆಡ್ ಬೋಜ್ನರ್ ಪ್ಯಾರಿಸ್ ಮಿಷನರಿ ಸೊಸೈಟಿಯ ಅಧ್ಯಕ್ಷನಾಗಿದ್ದು, ಆಲ್ಬರ್ಟ್ ಶ್ವೈಯಿಟ್ಸರ್‌ಗೆ ಧರ್ಮ ಪ್ರಚಾರದಲ್ಲಿದ್ದ ಆಸಕ್ತಿಯ ವಿಷಯ ತಿಳಿದಿತ್ತು; ಸೊಸೈಟಿಯ ಪ್ರಕಟಣೆಗಳನ್ನು ಆಗಾಗ ಅವನ ಗಮನಕ್ಕೆ ತರುವ ರೂಢಿಯಿತ್ತು. ಕರಪತ್ರದಲ್ಲಿ ಆಫ್ರಿಕಾದ ಫ್ರೆಂಚ್ ವಸಾಹತಿನ ಗೇಬನ್ ಪ್ರಾಂತ್ಯದ ನೀಗ್ರೋಗಳ ದಾರುಣ ಸ್ಥಿತಿಯ ವಿವರಣೆ ಇತ್ತು; ದೈಹಿಕವಾಗಿ ಹಲವಾರು ಕಾಯಿಲೆ ಕಸಾಲೆಗಳಿಂದ ನರಳಿ ಸಾಯುತ್ತಿರುವವರ ಸೇವೆ ಮಾಡಲು ಸಾಕಷ್ಟು ಮಂದಿ ಸ್ವಯಂ ಸೇವಕರ ಅವಶ್ಯಕತೆಯಿದೆ ಎಂದು ತಿಳಿಸಲಾಗಿತ್ತು. ಲೇಖನವನ್ನು ಮುಗಿಸುವ ಮೊದಲು ''ನಿಸ್ವಾರ್ಥತೆಯಿಂದ ಸಮಾಜಸೇವೆಗೆ ಸಮರ್ಪಣಾಭಾವದಿಂದ ಈಗಾಗಲೇ ಮನಸ್ಸು ಮಾಡಿರುವವರು ಈ ಪುಣ್ಯ ಕಾರ್ಯಕ್ಕೆ ಮುಂದಾಗಬಹುದು. ಭಗವಂತನ ಕೃಪೆಯಿಂದ ಈ ಆಹ್ವಾನಕ್ಕೆ 'ಓ, ದೇವರೇ ನಾನಲ್ಲಿಗೆ ಬರುತ್ತೇನೆ' ಎಂದು ಓಗೊಡಬಲ್ಲ ಸ್ತ್ರೀ-ಪುರುಷರು ಸ್ವಯಂಪ್ರೇರಿತರಾಗಿ ಬರುತ್ತಾರೆಂದು ನಂಬಲಾಗಿದೆ'' ಎಂದು ಕಳಕಳಿಯಿಂದ ಕೇಳಿಕೊಳ್ಳಲಾಗಿತ್ತು.

''ಪ್ರಕಟಣೆಯನ್ನು ಓದಿ ಮುಗಿಸುವುದರೊಳಗೆ, 'ಓ, ದೇವರೇ ನಾನಲ್ಲಿಗೆ ಬರುತ್ತೇನೆ' ಎಂದು ನುಡಿದಿತ್ತು ನನ್ನ ಮನ; ನನ್ನ ಜೀವನ-ಧ್ಯೇಯದ ಹುಡುಕಾಟ ಅಂದಿಗೆ ಮುಗಿಯಿತು'' ಇದು ಆಲ್ಬರ್ಟ್ ಶ್ವೈಯಿಟ್ಸರ್‌ನ ಅಚಲ ನಿರ್ಧಾರವಾಯಿತು.

ಮನಸ್ಸಿನ ನಿರ್ಧಾರ ಅಚಲವಾದರೂ, ಶ್ವೈಯಿಟ್ಸರ್ ಅದನ್ನು ತಕ್ಷಣ ಹೊರಗೆಡಹಲು ಅಳುಕಿದ. ತಂದೆ-ತಾಯಿ, ಬಂಧು-ಬಳಗ, ಸ್ನೇಹಿತರು, ಹಿತೈಷಿಗಳೆಲ್ಲರ ಪ್ರತಿಕ್ರಿಯೆ ತನಗೆ ವಿರುದ್ಧವಾಗುತ್ತವೆಂಬುದರಲ್ಲಿ ಅವನಿಗೆ ಸಂದೇಹವಿರಲಿಲ್ಲ. ಮುಂದಿನ ಕೆಲವು ತಿಂಗಳುಗಳಲ್ಲಿ ಅವನ ಮಾತುಕತೆ, ಪತ್ರವ್ಯವಹಾರಗಳಲ್ಲಿ ಈ ನಿರ್ಧಾರ ನಿಧಾನಗತಿಯಿಂದ ಪ್ರಕಟವಾಗತೊಡಗಿತು. ಬಾಲ್ಯದಿಂದ ಹೆಚ್ಚಿನ ಪ್ರೀತಿ-ವಿಶ್ವಾಸದಿಂದ ಸಾಕಿ ಸಲುಹಿದ ತಾಯಿಗೆ ಇದೊಂದು ದೊಡ್ಡ ಆಘಾತದಂತಾಯಿತು. ಜೀವಮಾನವೆಲ್ಲಾ ಮರೆಯಲಾಗದ ವ್ಯಸನ ಅವಳ ಬೆನ್ನುಹತ್ತಿತು. ತನ್ನನ್ನು ವಿಚಾರಿಸದೆ ನಿರ್ಧಾರ ತೆಗೆದುಕೊಂಡಿದ್ದಕ್ಕೆ ತಂದೆಗೆ ಕೋಪ ಉಕ್ಕಿಬಂತಾದರೂ, ತನಗೂ ಪ್ರಿಯವಾದ ಧಾರ್ಮಿಕ ಕಾರ್ಯದಲ್ಲಿ ಮಗ ಮುಂದಡಿಯಿಡುವುದರಿಂದ ಬೇರೇನೂ ಹೇಳಲಾಗದ ಮೂಕನಾದ. ಮಿತ್ರರು, ಸಂಬಂಧಿಗಳು ನಿರ್ಧಾರವನ್ನು ಕೇಳಿ ಚಕಿತರಾದರು. ರಣರಂಗದಲ್ಲಿ ಕಾಳಗ ನಡೆಯುತ್ತಿರುವಾಗ ಮುಖಾ ಮುಖಿಯಾಗಿ ವೈರಿಗಳನ್ನೆದುರಿಸಲು ಕಾಲಾಳಿನಂತೆ ಮುನ್ನುಗ್ಗಿದ ಸೇನಾಧಿಪತಿಯ

ನಿರ್ಧಾರ ಇದಾಯಿತೆಂದು ಸಂಗೀತದ ಮಾರ್ಗದರ್ಶಕ ಹಾಗೂ ಹಿತೈಷಿ ವೈಡರ್ ಪರಿತಪಿಸಿದ. ಶ್ವೆಯಿಟ್ಸರ್‌ನ ವಿದ್ವತ್ತು, ಯೋಗ್ಯತೆ, ಸಾಧನೆಗಳ ಪರಿಚಯವಿದ್ದವರೆಲ್ಲಾ ಕಗ್ಗತ್ತಲೆಯ ಖಂಡದಲ್ಲಿ ತನ್ನ ಪ್ರತಿಭೆಯನ್ನು ನಿರರ್ಥಕಗೊಳಿಸುತ್ತಾನೆಂದು ಹಪಹಪಿಸಿದರು. ಆಶ್ಚರ್ಯದ ಸಂಗತಿಯೆಂದರೆ ಧಾರ್ಮಿಕ ಕ್ಷೇತ್ರದಲ್ಲಿ ಸಹೋದ್ಯೋಗಿಗಳಾದವರು ಶ್ವೆಯಿಟ್ಸರ್‌ಗೆ ಲಭ್ಯವಿರುವ ಸ್ಥಾನಮಾನ ಮತ್ತು ಸುಖ ಜೀವನದ ದಾರಿಯನ್ನು ಬಿಟ್ಟು ಅತ್ಯಂತ ಸರಳ ಹಾಗೂ ಕಷ್ಟದ ಜೀವನಕ್ಕೆ ಅಡಿಯಿಡುವ ಅವನ ನಿರ್ಧಾರ ಲೇವಡಿಮಾಡುವ ವಿಷಯವಾಯಿತು. ಬಾಳಸಂಗಾತಿಯಾಗಿದ್ದ ಹೆಲೆನ್ ಮಾತ್ರ ಅವನ ನಿರ್ಧಾರಕ್ಕೆ ತನ್ನ ಪೂರ್ಣ ಒಪ್ಪಿಗೆ ಇತ್ತಳು. ಇಂಥ ನಿರ್ಧಾರಗಳಿಗೆ ಮಿಶ್ರಪ್ರತಿಕ್ರಿಯೆಗಳು ಬರುವುದು ಸ್ವಾಭಾವಿಕವೆಂಬುದನ್ನು ಮೊದಲೇ ಗ್ರಹಿಸಿದ್ದ ಶ್ವೆಯಿಟ್ಸರ್, ತನ್ನ ಅಚಲ ನಿರ್ಧಾರವನ್ನು ಬದಲಿಸಲಿಲ್ಲ. ಆ ಬಗೆಗೆ ಪ್ರಶ್ನಿಸಿದವರಿಗೆ ''ಮೊದಲು ಕಾರ್ಯಮಾಡುವುದು'' ಎಂಬ ಗಯಟೆಯ ಉಕ್ತಿಯನ್ನು ಉತ್ತರವಾಗಿ ನೀಡುತ್ತಿದ್ದನಂತೆ.

**ವೈದ್ಯಕೀಯ ತರಬೇತಿ**

ಆಫ್ರಿಕಾಕ್ಕೆ ತೆರಳುವ ನಿರ್ಧಾರವೇನೋ ಆಯಿತು. ಆದರೆ ಯಾವ ರೀತಿಯಲ್ಲಿ ಎಂಬ ಪ್ರಶ್ನೆ ಎದಿರಾಗುವುದು ಸ್ವಾಭಾವಿಕ. ತನಗಿರುವ ಧರ್ಮಶಾಸ್ತ್ರ, ತತ್ವಶಾಸ್ತ್ರ ಹಾಗೂ ಸಂಗೀತದ ವಿದ್ವತ್ತುಗಳು, ಹಸಿವು, ರೋಗ-ರುಜಿನಗಳ ಜಂಜಾಟದಲ್ಲಿ ತೊಳಲಾಡುವ ಆಫ್ರಿಕನ್ನರಿಗೆ ಪ್ರಯೋಜನವಿಲ್ಲವೆಂಬುದನ್ನು ಅರಿಯದವನೇನಲ್ಲ ಡಾ|| ಶ್ವೆಯಿಟ್ಸರ್. ವೈದ್ಯಕೀಯ ನೆರವು ನೀಡುವುದೇ ಅವರನ್ನು ಉದ್ಧಾರ ಮಾಡಬಹುದಾದ ಉಪಾಯವೆಂಬುದು ಅವನ ಅಭಿಪ್ರಾಯವಾಯಿತು. ಶ್ವೆಯಿಟ್ಸರ್‌ನ ವಯಸ್ಸು ಮತ್ತು ಸ್ಥಾನಮಾನದಲ್ಲಿರುವವನು ವೈದ್ಯನಾಗಲು ಮತ್ತೆ ವಿದ್ಯಾರ್ಥಿಯಾಗಿ ವ್ಯಾಸಂಗದಲ್ಲಿ ನಿರತನಾಗುವುದು ಯಾರಿಗಾದರೂ ಎದೆಗುಂದುವ ನಿರ್ಧಾರವೇ ಸರಿ. ಶೈಕ್ಷಣಿಕ ಕ್ಷೇತ್ರದಲ್ಲಿದ್ದು ಸದಾ ಅಭ್ಯಾಸದಲ್ಲೇ ನಿರತನಾಗಿದ್ದ ಶ್ವೆಯಿಟ್ಸರ್ ಈ ಬಗೆಗೆ ತಲೆ ಕೆಡಿಸಿಕೊಳ್ಳಲಿಲ್ಲ.

ಡಾ|| ಶ್ವೆಯಿಟ್ಸರ್‌ನಷ್ಟು ವಯಸ್ಸಾಗಿದ್ದು, ಅದೇ ವಿಶ್ವವಿದ್ಯಾಲಯದ ಕಾಲೇಜು ಒಂದರ ಮುಖ್ಯಸ್ಥ ಹಾಗೂ ಶಿಕ್ಷಕನಾದವನು ಅಲ್ಲೇ ವಿದ್ಯಾರ್ಥಿಯಾಗುವುದಕ್ಕೂ ಅಡಚಣೆಗಳಿದ್ದವು. ವಿಶ್ವವಿದ್ಯಾನಿಲಯದ ಆಡಳಿತ ವರ್ಗಕ್ಕೆ ಇಕ್ಕಟ್ಟಿನ ಪರಿಸ್ಥಿತಿಯಾದರೂ, ಶ್ವೆಯಿಟ್ಸರ್ ಪವಿತ್ರ ಹಾಗೂ ನಿಸ್ವಾರ್ಥ ಉದ್ದೇಶಗಳನ್ನು ಅರಿತು ಆಡಳಿತ-ವರ್ಗದವರು ವೈದ್ಯಕೀಯ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿ ಸೇರಲು ಅನುವು ಮಾಡಿಕೊಟ್ಟರು. ಅವನ ಆರ್ಥಿಕ ದುಸ್ಥಿತಿಯನ್ನರಿತು ಶಿಷ್ಯವೇತನದ ಶುಲ್ಕವನ್ನೂ ಮನ್ನಾ ಮಾಡಿದರು.

ಚಿಕ್ಕಂದಿನಿಂದಲೂ ವೈಜ್ಞಾನಿಕ ವಿಚಾರಗಳತ್ತ ಆಕರ್ಷಿತನಾಗಿ ವೈಚಾರಿಕ ಮನೋಭಾವವನ್ನು ಮೈಗೂಡಿಸಿಕೊಂಡ ಶ್ವೈಯಿಟ್ಸರ್‌ಗೆ ವೈದ್ಯಕೀಯ ವಿಜ್ಞಾನದ ಅಭ್ಯಾಸ ಹೊಸ ಹುರುಪನ್ನು ತಂದುಕೊಟ್ಟಿತು. ತನ್ನ ಸ್ಥಾನಮಾನಗಳನ್ನೆಲ್ಲಾ ಬದಿಗೊತ್ತಿ ಇತರ ವಿದ್ಯಾರ್ಥಿಗಳೊಂದಿಗೆ ಬೆರೆತು ವೈದ್ಯಕೀಯ ತರಬೇತಿಯಲ್ಲಿ ತೊಡಗಿಸಿಕೊಂಡನು. ಜೊತೆಗೆ ತತ್ವಶಾಸ್ತ್ರದ ಮಹಾವಿದ್ಯಾಲಯದಲ್ಲಿ ತನ್ನ ಕರ್ತವ್ಯಗಳನ್ನೂ ನಿರ್ವಹಿಸುತ್ತಲೇ ಇದ್ದನೆಂದರೆ ಆ ಸಮಯದಲ್ಲಿ ಅವನೆಷ್ಟು ಅವಿಶ್ರಾಂತನಾಗಿ ಕಾರ್ಯೋದ್ಯುಕ್ತನಾಗಿರುತ್ತಿದ್ದನೆಂಬುದನ್ನು ಊಹಿಸಲಸದಳ. ತನ್ನ ಜೀವಮಾನದಲ್ಲೆಲ್ಲಾ ಈ ಕಾಲವೇ ಬಳಲಿಕೆಯ ಪರಿಚಯ ಮಾಡಿಸಿದ್ದೆಂದು ಅವನೊಂದು ಸಾರಿ ಹೇಳಿಕೊಂಡಿದ್ದಾನೆ. ಹೀಗೆ ಅಧಿಕೃತ ಕೆಲಸ ಕಾರ್ಯಗಳ ಜೊತೆಗೆ ಮೊದಲಿನಿಂದಲೂ ಮೈಗೂಡಿಸಿಕೊಂಡಿದ್ದ ಮತಧರ್ಮ ತತ್ವಗಳ ಬಗೆಗೆ ವ್ಯಾಖ್ಯಾನ, ಗ್ರಂಥ ರಚನೆ, ಸಂಗೀತ-ಕಚೇರಿಗಳಲ್ಲಿ ಹಾಜರಿ, ಚರ್ಚ್‌ನಲ್ಲಿ ಪ್ರವಚನ ಇತ್ಯಾದಿ ಹವ್ಯಾಸಗಳನ್ನು ಮುಂದುವರಿಸಿಕೊಂಡು ಬರುತ್ತಲೇ ಇದ್ದ.

ಶ್ವೈಯಿಟ್ಸರ್‌ನ ವೈದ್ಯಕೀಯ ವಿದ್ಯಾಭ್ಯಾಸ ೧೯೧೧ರ ಕೊನೆಯಲ್ಲಿ ಮುಗಿಯಿತು. ಮುಂದಿನ ಒಂದು ವರ್ಷ ಆಸ್ಪತ್ರೆಗಳಲ್ಲಿ ಪ್ರತ್ಯಕ್ಷ ಅನುಭವದ ತರಬೇತಿ ಮತ್ತು ಉಷ್ಣವಲಯದ ಕಾಯಿಲೆಗಳ ವಿಶೇಷ ಮಾಹಿತಿ ಪಡೆಯಲು ಮೀಸಲಾಯಿತು. ತತ್ವಶಾಸ್ತ್ರ, ಧರ್ಮಶಾಸ್ತ್ರಗಳಲ್ಲಿ ಡಾಕ್ಟರೇಟ್ ಗಳಿಸಿ ವೈದ್ಯಕೀಯದಲ್ಲೂ ಡಾಕ್ಟರ್ ಆದಂಥ ಅಪೂರ್ವವ್ಯಕ್ತಿ ಆಲ್ಬರ್ಟ್ ಶ್ವೈಯಿಟ್ಸರ್‌ನನ್ನು ಬಿಟ್ಟರೆ ಬೇರಾರು ಇರಲಾರರು !

ಶ್ವೈಯಿಟ್ಸರ್ ವೈದ್ಯಕೀಯ ತರಬೇತಿ ಪಡೆಯುತ್ತಿದ್ದ ಕಾಲದಲ್ಲಿ ಹೆಲೆನ್ ದಾದಿ ವೃತ್ತಿಯ ತರಬೇತಿಯಲ್ಲಿ ತೊಡಗಿದ್ದಳು. ಇನ್ನು ಆಫ್ರಿಕಾಕ್ಕೆ ತೆರಳುವ ಮುನ್ನ ಅವರಿಬ್ಬರ ವಿವಾಹಕ್ಕೆ ಆದ್ಯತೆ. ೧೯೧೨ರ ಜೂನ್ ೧೮ರಂದು ಅವರಿಬ್ಬರ ಸರಳ ವಿವಾಹ ಜರುಗಿತು.

**ಆಫ್ರಿಕಾ ಪ್ರಯಾಣದ ಸಿದ್ಧತೆ**

ಪ್ಯಾರಿಸ್ ಮಿಷನರಿ ಸೊಸೈಟಿಯವರು ಆಫ್ರಿಕಾದ ಮೂಲ ನಿವಾಸಿಗಳ ದಾರುಣ ಪರಿಸ್ಥಿತಿಯ ನಿವಾರಣೆಗೆ ಸ್ವಯಂಸೇವಕರನ್ನು ಆಹ್ವಾನಿಸಿ ಕರೆಕೊಟ್ಟ ನಂತರ ಅದನ್ನು ಸ್ವೀಕರಿಸಿ ಆಲ್ಬರ್ಟ್ ಶ್ವೈಯಿಟ್ಸರ್ ವೈದ್ಯನಾಗುವುದರೊಳಗೆ ಆರೇಳು ವರ್ಷಗಳೇ ಸಂದುಹೋಗಿದ್ದವು. ಆಫ್ರಿಕಾಕ್ಕೆ ಹೋಗುವ ಪೂರ್ವಭಾವಿ ಸಿದ್ಧತೆಗಳಿಗಾಗಿ ಶ್ವೈಯಿಟ್ಸರ್ ವಿಚಾರಿಸಿದ. ಮಿಷನರಿಯವರು ಈ ಸಮಯದಲ್ಲಿ ಹೆಚ್ಚಿನ ಉತ್ಸಾಹ ತೋರಲಿಲ್ಲ. ಅವರು ಹಿಂದೇಟು ಹಾಕುವಂತೆ ಕಂಡರು. ಇಷ್ಟರೊಳಗೆ ಡಾ॥ ಶ್ವೈಯಿಟ್ಸರ್ ಧಾರ್ಮಿಕ ವಿಷಯಗಳ ಬಗೆಗೆ ಹೊಂದಿದ್ದ ವೈಚಾರಿಕ ಮನೋಭಾವದ ಕುರುಹುಗಳು ಅವರಿಗೆ ತಿಳಿದಾಗಿತ್ತು. ಅಂಥ ವ್ಯಕ್ತಿಯೊಬ್ಬ ಆಫ್ರಿಕಾ

ದೇಶಗಳಿಗೆ ಹೋಗಿ ನೆಲೆಸಿದರೆ ಅವರ ಮಿಷನರಿ ಬೋಧನೆಗಳ ಉದ್ದೇಶ- ಸಾಧನೆಗೆ ಅಡಚಣೆಗಳಾಗಬಹುದೆಂಬ ಸಂಶಯ ಅವರಿಗುಂಟಾಗಿರಬೇಕು. ಸೊಸೈಟಿಯ ಹಲವಾರು ಸದಸ್ಯರೊಡನೆ ಡಾ|| ಶ್ವೈಯಿಟ್ಸರ್ ಚರ್ಚಿಸಿ ವಿಚಾರ ವಿನಿಮಯ ಮಾಡುವುದು ಅನಿವಾರ್ಯವಾಯಿತು. ಡಾ|| ಶ್ವೈಯಿಟ್ಸರ್ ಆಫ್ರಿಕಾದಲ್ಲಿರುವ ಸಮಯದಲ್ಲಿ ವೈದ್ಯಕೀಯ ಸೇವೆಯಲ್ಲಿ ಮಾತ್ರ ತೊಡಗಿರಬೇಕು, ಧಾರ್ಮಿಕ ವಿಷಯಗಳಲ್ಲಿ ಆಸಕ್ತಿ ವಹಿಸಬಾರದೆಂಬ ನಿರ್ಬಂಧದ ಮೇರೆಗೆ ಮಿಷನರಿಯವರು ಪರವಾನಿಗಿಯಿತ್ತರು.

ಆಫ್ರಿಕಾದಂತ ಅತ್ಯಂತ ಹಿಂದುಳಿದ ಪ್ರದೇಶದಲ್ಲಿ ನೆಲೆಸುವವರಿಗೆ ಹಲವಾರು ತೊಂದರೆಗಳಿರುವುದು ಸ್ವಾಭಾವಿಕ. ಅಲ್ಲಿ ನೆಲ ಸರಿಮಾಡಿ ಮನೆಗಳ ನಿರ್ಮಾಣ ಮಾಡುವಂಥ ಕೆಲಸಗಳಿಗೂ ನುರಿತ ಕೆಲಸಗಾರರಿರಲಾರರು. ಪರಿಸ್ಥಿತಿಯನ್ನರಿತ ಡಾ|| ಶ್ವೈಯಿಟ್ಸರ್ ಮರಗೆಲಸ, ಮನೆಗಳ ನಿರ್ಮಾಣ, ಸಾಮಾನುಗಳನ್ನು ಪ್ಯಾಕ್ ಮಾಡುವ ವಿಧಾನ, ಬಟ್ಟೆ ಹೊಲಿಗೆ, ಲೆಕ್ಕಪತ್ರಗಳನ್ನು ಇಡುವ ರೀತಿ ನೀತಿಗಳ ಬಗೆಗೆ ಆಯಾ ವೃತ್ತಿ ನಿರತರಿಂದಲೇ ಕೆಲ ಸಮಯ ತರಬೇತಿ ಪಡೆದನು.

ಸ್ವ ಇಚ್ಛೆಯಿಂದಲೇ ಆಫ್ರಿಕಾದಲ್ಲಿ ವೈದ್ಯಕೀಯ ಸೇವೆಗಾಗಿ ಹೋಗುತ್ತಿರುವವರು ಅದಕ್ಕೆ ತಗಲುವ ವೆಚ್ಚಕ್ಕಾಗಿ ಹಣಕಾಸು ಒದಗಿಸಿಕೊಳ್ಳಬೇಕಾಗುತ್ತದೆ. ಮಿಷನರಿ ಯವರು ಅಲ್ಲಿ ನೆಲಸಲು ಜಾಗ ಮತ್ತು ಕೆಲವು ಆರಂಭಿಕ ಸವಲತ್ತುಗಳನ್ನು ಮಾತ್ರ ಒದಗಿಸುತ್ತಾರೆ. ನಂತರದ ಖರ್ಚೆಲ್ಲಾ ಶ್ವೈಯಿಟ್ಸರ್‌ನೇ ನಿಭಾಯಿಸಬೇಕಾಗುತ್ತದೆ. ಇವೆಲ್ಲಕ್ಕೂ ಅಪಾರ ಹಣ ಸಂಗ್ರಹ ಅವಶ್ಯಕ. ಶ್ವೈಯಿಟ್ಸರ್ ಆ ತನಕ ಗ್ರಂಥಗಳ ಮಾರಾಟ, ಸ್ವಂತ ಸಂಪಾದನೆ ಇತ್ಯಾದಿಗಳಿಂದ ಕೂಡಿಹಾಕಿದ್ದ ಮೊಬಲಗೇ ಮೂಲಧನವಾಯಿತು. ಸ್ನೇಹಿತರು, ಹಿತೈಷಿಗಳು ಮತ್ತು ಕೆಲವು ಸಂಘ-ಸಂಸ್ಥೆಗಳು ಅವನ ಘನೋದ್ದೇಶವನ್ನರಿತು ಉದಾರ ಸಹಾಯ ಮಾಡಲು ಮುಂದೆ ಬಂದರು. ಮುಂದೆಯೂ ಆಗಾಗ್ಗೆ ಆಫ್ರಿಕಾಕ್ಕೆ ಸಹಾಯವನ್ನು ಕಳಿಸುವ ಭರವಸೆಯಿತ್ತರು.

ಆಸ್ಪತ್ರೆಯ ನಿರ್ಮಾಣ, ಅದಕ್ಕೆ ಬೇಕಾಗುವ ಔಷಧ-ಸಾಮಗ್ರಿ, ಉಪಕರಣಗಳ ಸಂಗ್ರಹಣೆ ಮುಂದಿನ ಕೆಲಸ. ೧೯೧೩ರ ಫೆಬ್ರವರಿಯ ಸಮಯಕ್ಕೆ ಸುಮಾರು ಎಪ್ಪತ್ತು ಪೆಟ್ಟಿಗೆಗಳಷ್ಟು ಸಾಮಗ್ರಿಗಳು ಪ್ಯಾಕ್ ಆಗಿ ಆಫ್ರಿಕಾದತ್ತ ಹೊರಡುವ ಹಡಗಿನ ರೇವು ಪಟ್ಟಣ ಬೋರ್ಡೋಗೆ ಕಳುಹಿಸಲಾಯಿತು.

೧೯೧೩ರ ಮಾರ್ಚ್ ಹದಿಮೂರನೆಯ ಶುಭ ಶುಕ್ರವಾರದಂದು ಆಫ್ರಿಕಾದ ಲ್ಯಾಂಬರೀನೆಗೆ ಪ್ರಯಾಣ ಬೆಳೆಸುವುದೆಂದು ನಿರ್ಧಾರವಾಯಿತು. ಗನ್ಸ್‌ಬಾಕ್ ಮನೆಯಲ್ಲಿ ಆ ದಿನ ಬೆಳಗಿನಿಂದಲೇ ಗಂಭೀರ ವಾತಾವರಣ. ತಾಯಿ ಅಡಿಲೀ ಯಾಂತ್ರಿಕವಾಗಿ ಹಾಸಿಗೆಯಿಂದೆದ್ದು ಮೌನಮುದ್ರೆಯಲ್ಲೇ ತನ್ನ ಕೆಲಸದಲ್ಲಿ

ನಿರತಳಾದಳು. ಆಲ್ಬರ್ಟ್‌ಗೆ ಪ್ರಿಯವಾದ ತಿಂಡಿ-ತಿನಿಸುಗಳನ್ನು ಮಾಡಿದಳು. ಆಲ್ಬರ್ಟ್ ಮತ್ತು ಹೆಲೆನ್‌ರಿಗೆ ತಮ್ಮವರನ್ನು ಅಗಲುವ ವ್ಯಥೆಯಿದ್ದರೂ, ಹಸನ್ಮುಖಿಗಳಾಗಿಯೇ ಮಾತುಕತೆಯಾಡುತ್ತಿದ್ದರು. ಆ ದಿನ ಮನೆಯವರ ಮನಸ್ಸಿನಲ್ಲಿ ಒಂದು ತೆರನ ದುಗುಡ ಆವರಿಸಿಕೊಂಡಿತ್ತು. ಹೊರಡುವ ಸಿದ್ಧತೆಗಳನ್ನೆಲ್ಲಾ ಜಾಗ್ರತೆ ಮುಗಿಸಿ ಎಲ್ಲರೂ ಕುಳಿತು ಬೇಗ ಊಟ ಮಾಡಿದರು. ಅವರು ಪ್ರಯಾಣಿಸುವ ರೈಲನ್ನು ಹಿಡಿಯಲು ಕೋಲ್ಮಾರ್‌ಗೆ ಹೋಗಬೇಕಾಗಿತ್ತು. ಗನ್ಸ್‌ಬಾಕ್ ಬೀದಿಗಳಲ್ಲಿ ತೆರಳುವಾಗ ಬಾಲ್ಯದ ನೆನಪುಗಳು – ತಂದೆಯ ಚರ್ಚ್‌ನಲ್ಲಿ ತಾನು ಕಳೆದಿದ್ದ ಸಿಹಿ-ಕಹಿ ದಿನಗಳ ನೆನಪುಗಳು, ಯಹೂದ್ಯರ ಮುದುಕ ಮೌಶ್ಚೆ, ಚರ್ಚಿನ ಘಂಟಾನಾದ ಕೇಳಿ ಪಕ್ಷಿಯ ಜೀವ ಉಳಿಸಿದ್ದು, ಜಾರ್ಜ್‌ನನ್ನು ಕುಸ್ತಿಯಲ್ಲಿ ಸೋಲಿಸಿದ್ದು – ನಂತರ ತನ್ನಲ್ಲಾದ ಬದಲಾವಣೆಗಳು ಹೀಗೆ ಒಂದಾದ ಮೇಲೊಂದರಂತೆ ಶ್ವೈಯಿಟ್ಸರ್‌ನ ಸ್ಮೃತಿಪಟಲದಲ್ಲಿ ಮೂಡಿ ಕಣ್ಣುಗಳು ತೇವಗೊಂಡಿದ್ದವು.

ಕೋಲ್ಮಾರ್‌ನ ರೈಲು ನಿಲ್ದಾಣವನ್ನು ಸಮಯಕ್ಕೆ ಸರಿಯಾಗಿ ತಲುಪಿ ಅವರಿಗೆ ನಿಗದಿಯಾಗಿದ್ದ ಪೀಠಗಳಲ್ಲಿ ಶ್ವೈಯಿಟ್ಸರ್ ದಂಪತಿಗಳು ಕುಳಿತರು. ರೈಲು ಹೊಗೆ ಕಾರಿ, ಪೀಪಿ ಊದಿ ಚಲಿಸಲನುವಾಯಿತು. ಬೀಳ್ಕೊಡಲು ಬಂದವರೆಲ್ಲಾ ಬಲಾತ್ಕಾರದ ನಗುಮುಖದಿಂದ ಅವರತ್ತ ಕೈ ಬೀಸಿದರು. ಮಾತೆಯ ವದನದಲ್ಲಿ ಮಾತ್ರ ನಗು ಮೂಡಲಿಲ್ಲ. ಅವಳ ಕೈ ಆಡಲಿಲ್ಲ. ಕಣ್ಣಂಚಿನ ಅಶ್ರುಧಾರೆಯೇ ಅವಳ ಬೀಳ್ಕೊಡಿಗೆಯ ಸಂಕೇತವಾಗಿತ್ತು. ಅದೇ ಅವಳ ಕೊನೆಯ ಬೀಳ್ಕೊಡುಗೆಯಾಗಬಹುದೆಂಬ ಭಯ ಅವಳನ್ನಾವರಿಸಿರಬೇಕೆನಿಸುತ್ತದೆ.

ಶ್ವೈಯಿಟ್ಸರ್ ದಂಪತಿಗಳು ಆ ರಾತ್ರಿ ಸ್ಟ್ರಾಸ್‌ಬರ್ಗ್‌ನಲ್ಲಿ ಉಳಿಯುವ ಏರ್ಪಾಡಾಗಿತ್ತು. ಶನಿವಾರ ಪ್ಯಾರಿಸ್‌ಗೆ ತೆರಳಿ ಸ್ನೇಹಿತರನ್ನು ಭೇಟಿ ಮಾಡಿದರು. ಭಾನುವಾರ ಬೆಳಿಗ್ಗೆ ಸೇಂಟ್ ಸಲ್ಪೀಸ್ ಚರ್ಚ್‌ಗೆ ತೆರಳಿ ಈಸ್ಟರ್ ಪ್ರಾರ್ಥನೆ ಸಲ್ಲಿಸಿದರು. ಅದೆ ಕಡೇ ಬಾರಿಗೆ ಸಂಗೀತ ಮಾರ್ಗದರ್ಶಕ ಮತ್ತು ಹಿತೈಷಿ ವೈಡರ್ ಆರ್ಗನ್ ನುಡಿಸುವುದನ್ನು ಆಲಿಸಿ ಪುಳಕಿತರಾದರು. ಆ ದಿನ ಮಧ್ಯಾಹ್ನವೇ ಬೋರ್ಡೋ ಬಂದರಿಗೆ ಪ್ರಯಾಣ ಮುಂದುವರಿಸಿದರು.

## ೭. ಆಫ್ರಿಕಾ ಪ್ರಯಾಣ

ಪ್ಯಾರಿಸ್‌ನಿಂದ ಬೋರ್ಡೋ ಬಂದರು ತಲುಪಿದ್ದೇನೋ ಆಯಿತು. ಅಲ್ಲಿಂದ ಸೋಮವಾರವೇ ಹಡಗಿನಲ್ಲಿ ಪ್ರಯಾಣ ನಿಗದಿಯಾಗಿತ್ತು. ಆದರೆ ಮೊದಲೇ ಕಳುಹಿಸಿದ ಔಷಧ-ಸಾಮಗ್ರಿಗಳ ಪೆಟ್ಟಿಗೆಗಳು ಬಂದರು-ಕಟ್ಟೆಯನ್ನು ತಲುಪಿರಲಿಲ್ಲ.

ಈಸ್ಟರ್ ಮರುದಿನದ ಸೋಮವಾರ ತೆರಿಗೆ ಇಲಾಖೆ ಕಚೇರಿಗೆ ರಜಾದಿನವಾಗಿದ್ದು, ಆ ದಿನ ಪೆಟ್ಟಿಗೆಗಳ ತಪಾಸಣೆ ಅಸಾಧ್ಯವೆನಿಸಿತ್ತು. ಅದೃಷ್ಟವಶಾತ್ ತೆರಿಗೆ ಇಲಾಖೆಯ ಅಧಿಕಾರಿಯೊಬ್ಬರು ಪೆಟ್ಟಿಗೆಗಳನ್ನು ಪರೀಕ್ಷಿಸಿ ಪರವಾನಿಗಿ ನೀಡಲು ಮುಂದೆ ಬಂದರು. ಅದರಿಂದ ಹಡಗು ಹೊರಡುವ ಕೆಲವೇ ನಿಮಿಷಗಳಲ್ಲಿ ಶ್ವೈಯಿಟ್ಸರ್ ದಂಪತಿಗಳು ತಮ್ಮ ಸಾಮಾನುಗಳೊಂದಿಗೆ ಹಡಗನ್ನೇರಲು ಸಾಧ್ಯವಾಯಿತು. ಜನಿಸಿದಾರಭ್ಯ ಧಾರ್ಮಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲೇ ಕೂಪಮಂಡೂಕದಂತೆ ಕಾಲ ಕಳೆದು ಬಾಹ್ಯ ಜಗತ್ತಿನ ಇತರ ವ್ಯವಹಾರಗಳನ್ನರಿತುಕೊಳ್ಳಲಾಗದಿದ್ದುದಕ್ಕೆ ಶ್ವೈಯಿಟ್ಸರ್ ಮನಸ್ಸಿನಲ್ಲಿ ತನ್ನನ್ನು ತಾನೇ ಶಪಿಸಿಕೊಂಡ.

ಹಡಗಿನ ಪ್ರಯಾಣವೂ ಶ್ವೈಯಿಟ್ಸರ್ ದಂಪತಿಗಳಿಗೆ ಹೊಸದು. ಮುಂದಿನ ಒಂದೆರಡು ದಿನಗಳಲ್ಲಿ ಬಿರುಗಾಳಿ ಮತ್ತು ಅಲೆಗಳ ಉಬ್ಬರದಿಂದ ಹಡಗು ತೊಳಲಾಡಿತು. ಪರಿಣಾಮವನ್ನು ಇವರೂ ಕೆಲಕಾಲ ಅನುಭವಿಸಬೇಕಾಯಿತು. ಮುಂದೆ ಸಮುದ್ರ ಶಾಂತವಾದರೂ ಬಿಸಿಲಿನ ಜಳವನ್ನು ಸಹಿಸುವುದು ಕಷ್ಟಕರ ವಾಗಿತ್ತು. ಆಫ್ರಿಕಾಕ್ಕೆ ಪ್ರಯಾಣ ಹೊರಟಿದ್ದ ಹಾಗೂ ಮೊದಲು ಅಲ್ಲಿದ್ದ ಅನುಭವಸ್ಥರೊಡನೆ ಶ್ವೈಯಿಟ್ಸರ್ ನಿರಾತಂಕವಾಗಿ ಬೆರೆತು ಅವರ ಅನುಭವಗಳನ್ನು ಹಂಚಿಕೊಳ್ಳುತ್ತಿದ್ದ.

ಕೆಲವು ದಿನಗಳ ಪ್ರಯಾಣದ ನಂತರ ಹಡಗು ಡಾಕರ್ ಬಂದರಿನಲ್ಲಿ ತಂಗಿತು. ಬಂದರು ಪಟ್ಟಣದೊಳಗೆ ತಿರುಗಾಡಿ ಅಲ್ಲಿನ ಪರಿಸ್ಥಿತಿಯನ್ನು ಶ್ವೈಯಿಟ್ಸರ್ ದಂಪತಿಗಳು ಅರಿಯಲು ಸಾಧ್ಯವಾಯಿತು. ರಸ್ತೆಗಳ ಕೆಸರಿನಲ್ಲಿ ಗಾಡಿಗಳ ಗಾಲಿ ಹೂತುಕೊಂಡು ಎಳೆಯಲಾರದ ಬಡಕಲು ಕುದುರೆಗಳಿಗೆ ಆಫ್ರಿಕನ್ನರು ಬಡಿಯುವ ದೃಶ್ಯ ಶ್ವೈಯಿಟ್ಸರ್‌ನ ಮನಸ್ಸನ್ನು ಕರಗಿಸಿತು. ಗಾಡಿ ಸವಾರನನ್ನು ಶ್ವೈಯಿಟ್ಸರ್ ಬಲಾತ್ಕಾರದಿಂದ ಹೊರಗೆಳೆದು ಗದರಿಸಿದ ! ಆಫ್ರಿಕಾದ ಇಂಥ ಘಟನೆಗಳ ಅನುಭವವಿದ್ದ ಮಿಲಿಟರಿ ಅಧಿಕಾರಿಯೊಬ್ಬರು ಶ್ವೈಯಿಟ್ಸರ್‌ನ ಈ ಬಾಲಿಶ ಆವೇಶಕ್ಕೆ ನಕ್ಕು ಆ ಪ್ರದೇಶಗಳಲ್ಲಿ ಇಂಥ ವರ್ತನೆಗಳು ತೀರಾ ಸಾಮಾನ್ಯವೆಂದು ಸಮಾಧಾನ ಪಡಿಸಿದರು.

ಮುಂದೆ ಹಡಗು ಪೆಪ್ಪರ್‌ಕೋಸ್ಟ್, ಗೋಲ್ಡ್ ಕೋಸ್ಟ್, ಐವರಿಕೋಸ್ಟ್, ಸ್ಲೇವ್ಸ್ ಕೋಸ್ಟ್ ಮುಂತಾದ ಕಡೆಗಳಲ್ಲೆಲ್ಲಾ ಬೀಡುಬಿಡುತ್ತಿತ್ತು. ಕೆಲವು ಸಮಯದ ಹಿಂದೆ ಈ ಪ್ರದೇಶಗಳಲ್ಲಿ ನಡೆಯುತ್ತಿದ್ದ ಗುಲಾಮಗಿರಿ ಮತ್ತು ಗುಲಾಮರ ಮಾರಾಟದ ಕತೆಗಳಿಂದ ಅವನೂ ಚಿಂತಾಕ್ರಾಂತನಾಗುತ್ತಿದ್ದ. ಶಾಂತಿ, ಪ್ರೀತಿ ಮತ್ತು ಭ್ರಾತೃತ್ವ ಗಳನ್ನು ಬೋಧಿಸಿದ ಭಗವಾನ್ ಏಸುಕ್ರಿಸ್ತನ ಅನುಯಿಯಗಳಾದ ತಮ್ಮವರು ಎಸಗಿದ ಇಂಥ ಪಾಪಕೃತ್ಯಗಳಿಗೆ ತಾನೀಗ ಪ್ರಾಯಶ್ಚಿತ್ತ ರೂಪವಾಗಿ ಆಫ್ರಿಕನ್ನರ ಸೇವೆ

ಮಾಡಬೇಕಾಗಿದೆ ಅನ್ನಿಸುತ್ತಿತ್ತು.

ಎಡಬಿಡದೆ ಮೂರು ವಾರಗಳ ಪ್ರಯಾಣದ ನಂತರ ಗೇಬನ್ ಪ್ರಾಂತ್ಯದ ಲೈಬರ್‌ವಿಲೇ ಬಂದರನ್ನು ತಲುಪಿದರು. ಅಲ್ಲಿಂದ ಓಗಾವೆ ನದಿಯ ಮುಖಜ ಭೂಮಿಯನ್ನು ಸೇರಿ ಕೇಪ್ ಲೋಪೇಜ್‌ನಿಂದ ದೋಣಿಯಲ್ಲಿ ಮುಂದೆ ಲ್ಯಾಂಬರೀನೆಗೆ ಪ್ರಯಾಣ ಬೆಳೆಸಬೇಕಾಗಿತ್ತು.

ಗೇಬನ್ ಪ್ರದೇಶದ ನೂರಾರು ಮೈಲಿಗಳ ದಟ್ಟ ಅರಣ್ಯವನ್ನು ಸೀಳಿಕೊಂಡು ಸದಾ ಪ್ರವಾಹದಿಂದ ತುಂಬಿ ತುಳುಕಿ ಬೋರ್ಗರೆಯುವ ನದಿ, ಓಗಾವೆ; ಅದನ್ನು ಒಂದು ನದಿಯೆನ್ನುವುದಕ್ಕಿಂತ ಹಲವಾರು ನದಿಗಳ ಸಮುಚ್ಚಯವೆಂದರೆ ಸರಿಯಾದೀತು. ನಿತ್ಯ ಹರಿದ್ವರ್ಣದ ದಟ್ಟವಾದ ಕಾಡು, ಗಗನಚುಂಬಿ ಮರಗಳು, ಸಾವಿರಾರು ವರ್ಷಗಳಿಂದ ಮೈದೋರಿ ಬೆಳೆದು ನಿಂತ ವೃಕ್ಷ-ಸಂಪತ್ತು, ನದಿಯಲ್ಲಿ ತಲೆಯೆತ್ತಿ ತೇಲುವಂತೆ ನಟಿಸಿ ಹೊಂಚುಹಾಕುತ್ತಿರುವ ಮೊಸಳೆಗಳು, ರಭಸದಿಂದ ಈಜಾಡುತ್ತಿರುವ ನೀರಾನೆಗಳ ಹಿಂಡು, ತಲೆಯ ಮೇಲೆಯೇ ಬಡಿದಾಡಿಕೊಂಡು ಹಾರಾಡುವ ವಿಚಿತ್ರ ಪಕ್ಷಿ-ಸಂಕುಲ; ಮೈ ಚುಚ್ಚಿ ಕ್ಷಣಾರ್ಧದಲ್ಲಿ ರಕ್ತ ಹೀರುವ ಜೀರುಂಡೆಗಳಂಥ ದೈತ್ಯ ಸೊಳ್ಳೆಗಳ ದಾಳಿ; ಅಲ್ಲಲ್ಲಿ ಬಾಲ ಇಳಿಬಿಟ್ಟುಕೊಂಡು ನೇತಾಡುವ ನಾನಾಬಗೆಯ ವಾನರ-ಸಮೂಹ ಎದಿರಾದವೆಂದರೆ ಆಫ್ರಿಕಾದ ದಟ್ಟ ಅರಣ್ಯದೊಳಗಡೆ ಪದಾರ್ಪಣೆ ಮಾಡಿದ್ದೇವೆಂಬುದರಲ್ಲಿ ಸಂದೇಹವಿಲ್ಲ. ಇಂಥ ಪರಿಸರವನ್ನು ಎಂದೂ ಕಂಡರಿಯದ ಶ್ವೈಯಿಟ್ಸರ್ ದಂಪತಿಗಳಿಗೆ ಈ ಪ್ರಯಾಣ ಒಂದೊಂದು ಸಾರಿ ಕುತೂಹಲವುಂಟುಮಾಡಿದರೆ, ಮರುಕ್ಷಣ ಭಯ ಹುಟ್ಟಿಸುತ್ತಿತ್ತು. ಲ್ಯಾಂಬರೀನೆಯತ್ತ ಪ್ರಯಾಣ ಮಾಡುವ ಜನರಿಂದ ದೋಣಿ ಕಿಕ್ಕಿರಿದು ತುಂಬಿದ್ದು ಶ್ವೈಯಿಟ್ಸರ್ ತಂದ ಔಷಧಿ ಪೆಟ್ಟಿಗೆಗಳಿಗೆ ಎಡೆ ಸಿಕ್ಕಲಿಲ್ಲ. ಓಗಾವೆ ನದಿಯಲ್ಲಿ ಎರಡು ದಿನಗಳು ಎಡೆಬಿಡದೇ ಪ್ರಯಾಣ ಮಾಡಿದ ನಂತರ ಲ್ಯಾಂಬರೀನೆಯನ್ನು ತಲುಪಿದರು.

ಲ್ಯಾಂಬರೀನೆಗೆ ಬಿಳೀ ವೈದ್ಯ ದಂಪತಿಗಳು ಬರುತ್ತಾರೆಂಬ ಸುದ್ದಿ ಕೆಲ ಕಾಲದಿಂದ ತಿಳಿದಿತ್ತು. ಅವರನ್ನು ಸ್ವಾಗತಿಸಲು ಆಫ್ರಿಕನ್ನರ ತಂಡ ಅಲ್ಲಿ ಕಾದುಕೊಂಡಿತ್ತು. ಪ್ಯಾರಿಸ್-ಮಿಷನರಿ-ಸೊಸೈಟಿಯ ಸ್ಥಳೀಯ ಕೇಂದ್ರದ ಪ್ರತಿನಿಧಿಗಳೂ ಅವರನ್ನು ಎದುರುಗೊಳ್ಳಲು ಅಲ್ಲಿಗೆ ಬಂದಿದ್ದರು. ಆಫ್ರಿಕನ್ನರಂತೂ ಅವರನ್ನು ನೋಡಿದಾಕ್ಷಣ ಉತ್ಸಾಹದಿಂದ ಹರ್ಷೋದ್ಗಾರ ಮಾಡಿದರು. ವನಸುಮಗಳ ಹಾರಗಳನ್ನು ಹಾಕಿ ದಂಪತಿಗಳನ್ನು ಬರಮಾಡಿಕೊಂಡರು.

ಕಾಡಿನ ಮರಗಳಿಂದ ತೆರಪು ಮಾಡಿದ ಎತ್ತರವಾದ ಸ್ಥಳದಲ್ಲಿ ಮರದ ದಿಣ್ಣೆಗಳಿಂದಲೇ ಕಟ್ಟಿದ ಕುಟೀರವೊಂದಿತ್ತು. ಅದನ್ನು ಗುಡಿಸಿ ಸಾರಿಸಿ ಚೊಕ್ಕಟ

ಮಾಡಲಾಗಿತ್ತು. ಹೂವಿನ ಹಾರ, ಹಸಿರು ತೋರಣಗಳಿಂದ ಅದು ಅಲಂಕೃತ ವಾಗಿತ್ತು. ನಾಲ್ಕು ಕೊಠಡಿಗಳಿದ್ದ ಆ ಕುಟೀರ ಯುರೋಪಿನ ಮನೆಗಳಲ್ಲಿರುವ ಆಧುನಿಕ ಸೌಲಭ್ಯಗಳನ್ನು ಹೊಂದಿರದಿದ್ದರೂ ವೈದ್ಯ ದಂಪತಿಗಳಿಗೆ ಸಾಕಾಗುವಷ್ಟಿತ್ತು. ನಾಗರಿಕ ಜಗತ್ತಿನ ಸೌಲಭ್ಯಗಳನ್ನು ತ್ಯಜಿಸಿ ಕಗ್ಗತ್ತಲೆಯ ಖಂಡದ ಅರಣ್ಯದ ನಡುವೆ ನೆಲೆಸಲು ಬಂದಿದ್ದ ಡಾ|| ಶ್ವೈಯಿಟ್ಸರ್ ಮತ್ತು ಹೆಲೆನ್ ಇದಕ್ಕಿಂತ ಹೆಚ್ಚಿನ ಸ್ವಾಗತ ಮತ್ತು ಸೌಲಭ್ಯಗಳನ್ನು ನಿರೀಕ್ಷಿಸಿರಲಿಲ್ಲ.

## ೮. ಲ್ಯಾಂಬರೀನೆ

ಅನಾದಿಯಿಂದಲೂ ಆಫ್ರಿಕ ಅತ್ಯಂತ ಹಿಂದುಳಿದ ಪ್ರದೇಶ; ಕಗ್ಗತ್ತಲೆಯ ಖಂಡವೆಂದು ಹೆಸರಾದದ್ದು; ಹದಿನೆಂಟನೆಯ ಶತಮಾನದವರೆಗೂ ನಾಗರಿಕ ಜಗತ್ತು ಆ ಕಡೆ ಕಣ್ಣು ಹಾಯಿಸಿರಲಿಲ್ಲ. ಅಲ್ಲಿನ ಅಪಾರ ಸಂಪತ್ತನ್ನು ಅರಿತ ಪಾಶ್ಚಿಮಾತ್ಯ ರಾಷ್ಟ್ರಗಳ ಹಲವು ಗುಂಪಿನವರು ಆಫ್ರಿಕಾದ ತೀರ ಪ್ರದೇಶಗಳಿಗೆ ಹೋಗಿ ಅಲ್ಲಿನ ಅರಣ್ಯ ಸಂಪತ್ತನ್ನು ಲೂಟಿ ಮಾಡಲಾರಂಭಿಸಿದರು. ಅದರ ಪಶ್ಚಿಮ ತೀರದ ಗೇಬನ್ ಪ್ರದೇಶವನ್ನು ಆಕ್ರಮಿಸಿಕೊಂಡು ತಮ್ಮ ವಸಾಹತನ್ನಾಗಿಸಿಕೊಂಡರು. ಸುಮಾರು ೧೮೩೦ರ ಸಮಯಕ್ಕೆ ಅದು ಕೆಲವು ಅಮೆರಿಕಾದ ವಲಸೆಗಾರರ ಹಿಡಿತದಲ್ಲಿತ್ತು. ಅವರು ಸ್ಥಳೀಯ ನೀಗ್ರೋಗಳನ್ನು ಸೆರೆಹಿಡಿದು ಗುಲಾಮಗಿರಿಯಲ್ಲಿ ತೊಡಗಿಸಿ ಕೊಂಡರು. ಮತ್ತೆ ಕೆಲವರನ್ನು ಅಮೆರಿಕಾಕ್ಕೆ ಸಾಗಿಸಿ ಮಾರಾಟ ಮಾಡಿ ಹಣ ಸಂಪಾದನೆ ಮಾಡುತ್ತಿದ್ದರು. ಇದರಿಂದ ರೊಚ್ಚಿಗೆದ್ದ ಕೆಲವು ಬುಡಕಟ್ಟಿನ ನಾಯಕರು ಅವರೊಡನೆ ಹೊಡೆದಾಡಲು ಶುರು ಮಾಡಿದರು. ವಲಸೆಗಾರರಲ್ಲೂ ಕೆಲ ಸಾರಿ ಅವರವರೊಳಗೆ ಒಳಜಗಳಗಳುಂಟಾಗಿ ಅಲ್ಲಿ ಅಶಾಂತಿಯುಂಟಾಗುತ್ತಿತ್ತು. ಈ ಸಂದರ್ಭವನ್ನುಪಯೋಗಿಸಿಕೊಂಡು ಆಫ್ರಿಕಾದ ಇತರೆಡೆಗಳಲ್ಲಿ ಪ್ರಬಲರಾಗುತ್ತಿದ್ದ ಫ್ರೆಂಚರು ಗೇಬನ್ ಪ್ರದೇಶವನ್ನು ೧೮೮೮ರಲ್ಲಿ ನಿರಾಯಾಸವಾಗಿ ಗೆದ್ದುಕೊಂಡರು. ಫ್ರೆಂಚ್ ಸಂಶೋಧಕ ಬ್ರಝಾ (BRAZZA) ಎಂಬವನು ಓಗಾವೆ ನದಿಯ ಮೂಲವನ್ನು ಕಂಡುಹಿಡಿಯಲು ಹೊರಟು, ನದಿಯ ಮುಖಜ ಭೂಮಿಯಿಂದ ಸುಮಾರು ೨೫೦ ಮೈಲುಗಳ ದೂರದಲ್ಲಿ ಆ ಕಾಡನ್ನು ತೆರವು ಮಾಡಿ ಕೆಲಕಾಲ ಬೀಡು ಬಿಟ್ಟಿದ್ದ. ಆ ಜಾಗವೇ ಲ್ಯಾಂಬರೀನೆ. ಓಗಾವೆ ನದಿಯ ಉಗಮ ಮತ್ತು ಅಂತ್ಯದ ನಡುವೆ ಇದ್ದ ಪ್ರದೇಶ ಅದಾಗಿತ್ತು. ಸುತ್ತಲ ಕಾಡು ಪ್ರದೇಶಗಳಿಗೆ ಸಾರಿಗೆ ದೃಷ್ಟಿಯಿಂದ ಆಯಕಟ್ಟಿನ ಜಾಗ. ನದಿ ಮೂಲಕ ನಾಡು ದೋಣಿಗಳಲ್ಲಿ ಸಂಚರಿಸುವುದೇ ಅಲ್ಲಿನ ಸಾರಿಗೆ ಸೌಲಭ್ಯ. ನದಿಯ ಮೇಲು ಭಾಗ ಮತ್ತು ಕೆಳಗೆ ನೂರಾರು ಮೈಲಿಗಳಲ್ಲದೆ

ಅದರ ಉಪನದಿಗಳಲ್ಲೂ ಈ ರೀತಿ ಪ್ರಯಾಣ ಮಾಡಬಹುದಾಗಿತ್ತು. ಈ ಎಲ್ಲಾ ಸೌಲಭ್ಯಗಳ ದೃಷ್ಟಿಯಿಂದಲೇ ಡಾ॥ ಶ್ವೈಟ್ಸರ್‌ನ ಮೊದಲ ಪ್ರಯತ್ನಕ್ಕೆ ಮಿಷನರಿಗಳು ಲ್ಯಾಂಬರೀನೆಯನ್ನು ಗೊತ್ತುಮಾಡಿದ್ದು. ಆಫ್ರಿಕನ್ನರ ಭಾಷೆಯಲ್ಲಿ ಲ್ಯಾಂಬರೀನೆಯೆಂದರೆ ''ಪ್ರಯತ್ನಿಸೋಣ'' ಎಂದರ್ಥ !

ಸಮಭಾಜಕ ವೃತ್ತದ ರೇಖೆ ಈ ಪ್ರದೇಶದಲ್ಲೇ ಹಾದು ಹೋಗುತ್ತದೆ. ಅಂದ ಮೇಲೆ ಅಪ್ಪಟ ಉಷ್ಣ ವಲಯ ಪ್ರದೇಶವೆಂದು ಬೇರೆ ಹೇಳಬೇಕಾಗಿಲ್ಲ. ಎಲ್ಲೆಲ್ಲೂ ನಿತ್ಯ ಹರಿದ್ವರ್ಣದ ದಟ್ಟವಾದ ಕಾಡು. ಅಸ್ತವ್ಯಸ್ತವಾಗಿ ಬೀಸುವ ಬಿರುಗಾಳಿ, ಧಾರಾಕಾರವಾಗಿ ಸುರಿಯುವ ಮಳೆ, ಜೌಗು ಪ್ರದೇಶ, ಆದರೂ ಉಸಿರುಕಟ್ಟುವಂಥ ಸೆಕೆಯ ಹವಾಗುಣ. ಹುಲಿ, ಆನೆ, ಕಾಡುಕೋಣ, ಘಟಸರ್ಪ, ಹೆಬ್ಬಾವು, ಮನುಷ್ಯರನ್ನೇ ತಿಂದು ಅರಗಿಸುವ ''ಸೈನಿಕ ಇರುವೆ''ಗಳ ತವರು ಮನೆ. ದೈತ್ಯಾಕಾರದ ರೋಗಕಾರಕ ಸೊಳ್ಳೆ, ನೊಣ ಮುಂತಾದ ಕೀಟಸಂಕುಲದ ಆಗರ. ಲ್ಯಾಂಬರೀನೆಯೂ ಸೇರಿದಂತೆ ಆಫ್ರಿಕಾ ಖಂಡದ ನೈಜ ಚಿತ್ರಣವಿದು.

ನೂರಾರು ಉಪನದಿಗಳ ಮಿಲನದಿಂದ ಸದಾ ತುಂಬಿ ಹರಿಯುವ ಓಗಾವೆ ನದಿ ಗೇಬನ್‌ನ ದಟ್ಟವಾದ ಕಾಡಿನ ಪ್ರದೇಶವನ್ನು ಸೀಳಿಕೊಂಡು ಹರಿದು ಕೇಪ್ ಲೋಪೇಜ್ ಎಂಬಲ್ಲಿ ಸಮುದ್ರವನ್ನು ಸೇರುತ್ತದೆ. ಪ್ರವಾಹದಿಂದ ಬಗ್ಗಡವಾದ ನೀರಿನಲ್ಲಿ ಮನುಷ್ಯರನ್ನೇ ನುಂಗುವ ಮೊಸಳೆ ಮತ್ತು ನೀರಾನೆಗಳು ಹಿಂಡು ಹಿಂಡಾಗಿ ಚಲಿಸುತ್ತವೆ. ಆ ಪ್ರದೇಶದ ಪ್ರಮುಖ ಜೀವನಾಡಿಯಾದ ಓಗಾವೆಯಲ್ಲಿ ಮೊದಲು ಮರದ ದಿಣ್ಣೆಗಳನ್ನು ಮೂಲನಿವಾಸಿಗಳು ಸಾಗಿಸುತ್ತಿದ್ದರೆ ಈಗ ಯಂತ್ರಚಾಲಿತ ಸ್ಟೀಮರುಗಳು ಆ ಕೆಲಸ ಮಾಡುತ್ತವೆ.

ಅಲ್ಲಿನ ಮೂಲ ನಿವಾಸಿಗಳಾದ ನೀಗ್ರೋಗಳು ಶತಶತಮಾನಗಳಿಂದ ಈ ತೆರನ ಪ್ರಕೃತಿಯೊಡನೆ ಒಂದಾಗಿ ಜೀವಿಸುತ್ತಿದ್ದರು. ಅವರಲ್ಲೇ ಹಲವಾರು ಬುಡಕಟ್ಟುಗಳು; ಅವರೊಳಗೇ ಜನ್ಮ ಜನ್ಮಾಂತರದ ಹಗೆತನ; ಆಗಾಗ್ಗೆ ಗುಂಪು ಘರ್ಷಣೆಗಳಿಂದ ಅಪಾರ ಸಾವು ನೋವು; ಮಾನವರನ್ನೇ ಸುಲಿದು ತಿನ್ನುವ ನರಭಕ್ಷಕ ಗುಂಪುಗಳೂ ಅಲ್ಲಿದ್ದವು. ಒಂದು ಕಡೆ ನೆಲೆಯಾಗಿ ನಿಲ್ಲದ ಅಲೆಮಾರಿ ಜೀವನ; ಅಜ್ಞಾನ, ಮೂಢನಂಬಿಕೆ, ಬಡತನ, ಸೋಮಾರಿತನ ಅವರ ಜಾಯಮಾನ; ಮಲೇರಿಯಾ, ಫೈಲೇರಿಯಾ, ಕಾಲರಾ, ಆಮಶಂಕೆ, ಅತಿಸಾರ, ಪ್ಲೇಗ್, ಕ್ಷಯ, ಕುಷ್ಠರೋಗ, ಹಳದಿ ಜ್ವರ, ನಿದ್ದೆ ಜ್ವರ, ಕೊಳೆತು ನಾರುವ ಹುಣ್ಣುಗಳು – ಅವರನ್ನು ಬೆನ್ನುಹತ್ತಿದ್ದ ಕಾಯಿಲೆ-ಕಸಾಲೆಗಳು. ಜೊತೆಗೆ ಅವರನ್ನೇ ಬೇಟೆಯಾಡಿ ತಿನ್ನುವ ದುಷ್ಟ ಮೃಗಗಳ ಒಡನಾಟ; ವ್ಯವಸ್ಥಿತವಾಗಿ ಆಹಾರ-ಸಾಮಗ್ರಿಗಳನ್ನು ಬೆಳೆದುಕೊಳ್ಳುವ ಅರಿವೂ ನಮ ಇರದೆ ಕಾಡಿನಲ್ಲಿ ದೊರೆಯುವ ಗೆಡ್ಡೆ-ಗೆಣಸು, ಪ್ರಾಣಿ-ಪಕ್ಷಿ, ಮೀನುಗಳೇ ಅವರ

ಆಹಾರ. ಇತ್ತ ಮನುಷ್ಯರೂ ಅಲ್ಲ, ಅತ್ತ ಮೃಗಗಳೂ ಆಗಿರದ ಅನಾಗರಿಕ ದುರಂತ ಜೀವನಕ್ರಮ ಅವರದಾಗಿತ್ತು. ಆಫ್ರಿಕಾದಲ್ಲಿ ಅಪಾರವಾಗಿದ್ದ ನೈಸರ್ಗಿಕ ಸಂಪತ್ತುಗಳಿಂದ ವೃಕ್ಷ, ಖನಿಜ ಇತ್ಯಾದಿಗಳಿಗೆ ಆಕರ್ಷಿತರಾದ ಪಾಶ್ಚಿಮಾತ್ಯ ದೇಶಗಳ ಬಿಳಿಯ ಜನಾಂಗದವರು ಕಗ್ಗತ್ತಲೆಯ ಖಂಡದತ್ತ ತಮ್ಮ ವಕ್ರದೃಷ್ಟಿ ಹಾಯಿಸಿದರು. ಅಲ್ಲಿನ ಪ್ರದೇಶಗಳನ್ನು ವಶಪಡಿಸಿಕೊಂಡು ಸಂಪತ್ತನ್ನು ಕೊಳ್ಳೇ ಹೊಡೆದರು. ಮೂಲ ನಿವಾಸಿ ನೀಗ್ರೋಗಳನ್ನು ಗುಲಾಮರನ್ನಾಗಿಸಿಕೊಂಡು ಚಿತ್ರಹಿಂಸೆಗೊಳಪಡಿಸಿದರು. ಜತೆಗೆ ಅವರು ತಂದು ಹರಡಿದ ಮೈಲಿ-ಬೇನೆ, ಫರಂಗಿ-ಹುಣ್ಣುಗಳಂಥ ಕಾಯಿಲೆಗಳಿಂದ ಆಫ್ರಿಕಾದ ಅರ್ಧದಷ್ಟು ಜನ ಬಲಿಯಾದರೆಂಬ ಅಂದಾಜು ಇದೆ.

ಸಂಪತ್ತನ್ನು ಕೊಳ್ಳೇ ಹೊಡೆಯಲು ಜನ ಧಾವಿಸಿದಂತೆ, ಅಲ್ಲಿನ ಮೂಲ ನಿವಾಸಿಗಳನ್ನು ಮತಾಂತರಿಸಲು ಯುರೋಪಿನಿಂದ ಕ್ರೈಸ್ತ ಮಿಷನರಿಗಳೂ ಬರಲು ಆರಂಭಿಸಿದರು. ನೀಗ್ರೋಗಳ ನಿಕಟ ಸಂಪರ್ಕ ಹೊಂದಿದ ಮಿಷನರಿಗಳೂ ಅವರು ದೈಹಿಕವಾಗಿ ಹಲವು ರೋಗ-ರುಜಿನಗಳಿಂದ ನರಳುತ್ತಿರುವುದನ್ನು ನೋಡಿ ಮರುಕಪಟ್ಟರು. ತಮ್ಮ ಕೈಲಾದ ವೈದ್ಯಕೀಯ ನೆರವನ್ನೂ ನೀಡಿದರು. ಅವರ ಕಷ್ಟ ಕಾರ್ಪಣ್ಯಗಳ ವರದಿಯನ್ನು ನಾಗರಿಕ ಜಗತ್ತಿಗೂ ಮಾಡುತ್ತಿದ್ದರು. ಅಂಥ ಒಂದು ವರದಿಯ ಪ್ರಭಾವವೇ ಆಲ್ಬರ್ಟ್ ಶ್ವೈಯಿಟ್ಸರ್‌ನಂಥ ಮಹಾನುಭಾವರು ಈ ಕಡೆ ಬರಲು ಪ್ರೇರಣೆಯಾದದ್ದು.

**ಮೊದಲ ಅನುಭವ**

ಡಾ॥ ಶ್ವೈಯಿಟ್ಸರ್ ಮತ್ತು ಹೆಲೆನ್ ಲ್ಯಾಂಬರೀನೆಯನ್ನು ತಲುಪಿದಾಗ ಹೊತ್ತು ಮುಳುಗುವುದರಲ್ಲಿತ್ತು. ತಮಗಾಗಿ ಸಿದ್ಧಪಡಿಸಿದ್ದ ಕುಟೀರದಲ್ಲಿ ಉಪಾಹಾರ ತಯಾರಿಸಿಕೊಂಡು ರಾತ್ರಿಯನ್ನು ಕಳೆದರು. ಮರುದಿನ ಬೆಳಿಗ್ಗೆ ಏಳುವಷ್ಟರಲ್ಲೇ ಅವರ ಕುಟೀರದ ಸುತ್ತ ಜನಜಂಗುಳಿ ಸೇರಿತ್ತು. ಬಿಳೀ ವೈದ್ಯನೊಬ್ಬ ಆ ಪ್ರದೇಶಕ್ಕೆ ಬರುವ ಸುದ್ದಿ ಕೆಲ ಸಮಯದಿಂದ ಹರಡಿದ್ದು, ಸುತ್ತಮುತ್ತಲ ಹಲವಾರು ಮೈಲುಗಳ ದೂರದಿಂದ ರೋಗಿಗಳು ಲ್ಯಾಂಬರೀನೆಗೆ ಒಂದೆರಡು ದಿನ ಮೊದಲೇ ಹೊರಟಿದ್ದರು. ನಡೆಯಲು ಶಕ್ತರಾದವರು ಕಾಲು ನಡಿಗೆಯಲ್ಲಿ ಪ್ರಯಾಣ ಬೆಳೆಸಿದ್ದರೆ, ತೀರಾ ಅಸ್ವಸ್ಥರಾದವರನ್ನು ನಾಡು ದೋಣಿ, ಜೋಲಿಗಳಲ್ಲಿ ಹೊತ್ತು ತಂದಿದ್ದರು. ತೀರಾ ಸಾಮಾನ್ಯ ರೋಗಗಳಿಂದ ನರಳುವವರೇ ಅಲ್ಲದೆ ಅತ್ಯಂತ ಗಂಭೀರ ಸ್ವರೂಪದ ಕಾಯಿಲೆಯವರೂ ಅಲ್ಲಿದ್ದರು. ಶ್ವೈಯಿಟ್ಸರ್ ದಂಪತಿಗಳಿಗೆ ಬೆಳಗಿನ ಉಪಾಹಾರ ತಯಾರುಮಾಡುವಷ್ಟು ಅವಕಾಶವಿದ್ದಂತಿರಲಿಲ್ಲ. ಹೆಲೆನ್ ಉಪಾಹಾರ ತಯಾರುಮಾಡುವಷ್ಟರಲ್ಲಿ ಡಾ॥ ಶ್ವೈಯಿಟ್ಸರ್ ತನ್ನ ಜೊತೆಯಲ್ಲಿ ತುರ್ತು ಚಿಕಿತ್ಸೆಗಾಗಿ ತಂದಿದ್ದ ಒಂದೆರಡು ಪೆಟ್ಟಿಗೆಗಳನ್ನು ತೆರೆದು ಔಷಧಗಳನ್ನು ಜೋಡಿಸಿಕೊಂಡ.

ಅಲ್ಲಿ ನೆರೆದಿದ್ದವರ ಕಾಯಿಲೆಗಳ ಗುಟ್ಟನ್ನರಿಯಲು ಭಾಷೆಯ ಅಡಚಣೆಯನ್ನು ಶ್ವೆಯಿಟ್ಸರ್ ಮೊಟ್ಟಮೊದಲು ಎದುರಿಸಬೇಕಾಯಿತು. ಯುರೋಪಿನಿಂದ ಹೊರಡುವ ಮೊದಲೇ ತನಗೆ ದುಭಾಷಿಯಾಗಿ ನೆರವಾಗಲು ಶಾಲಾ ಮಾಸ್ತರೊಬ್ಬನನ್ನು ನಿಗದಿ ಮಾಡಿಕೊಂಡಿದ್ದ. ಮಾಸ್ತರು ತನ್ನ ಗುಂಪಿನ ಗಲಾಟೆಯ ತಕರಾರಿನಲ್ಲಿ ಸಿಲುಕಿಕೊಂಡಿದ್ದರಿಂದ ಬಂದಿರಲಿಲ್ಲ. ಜನರ ಕಾಯಿಲೆಗಳು ಬಹಳ ಮುಂದುವರಿದ ಸ್ಥಿತಿಯಲ್ಲಿದ್ದುದರಿಂದ ಪ್ರಶ್ನೆ ಕೇಳದೇ ಗುರುತಿಸಬಹುದಾಗಿತ್ತು. ಔಷಧ ತೆಗೆದುಕೊಳ್ಳುವುದು ಮತ್ತು ಪಥ್ಯದ ವಿಷಯಗಳನ್ನು ವಿವರಿಸುವುದು ಮಾತ್ರ ಸ್ವಲ್ಪ ತೊಡಕಾಗುತ್ತಿತ್ತು.

ಲ್ಯಾಂಬರೀನೆಯಲ್ಲಿ ವೈದ್ಯರಿಗಾಗಿ ಸಿದ್ಧಪಡಿಸಿದ ಕುಟೀರವೊಂದನ್ನು ಹೊರತು ಪಡಿಸಿದರೆ ಬೇರಾವ ಕಟ್ಟಡಗಳ ಸುಳಿವೂ ಇರಲಿಲ್ಲ. ರೋಗಿಗಳನ್ನು ಮಲಗಿಸಿ ಪರೀಕ್ಷಿಸುವುದು, ಅವರನ್ನು ಉರಿಬಿಸಿಲು ಮತ್ತು ಮಳೆಯಿಂದ ರಕ್ಷಿಸುವುದಕ್ಕೆ ತುರ್ತಾಗಿ ವಸತಿಯೊಂದರ ಅವಶ್ಯಕತೆಯಿತ್ತು. ಈ ಕುಂದು ಕೊರತೆಗಳನ್ನು ಲೆಕ್ಕಿಸದೆ ಶ್ವೆಯಿಟ್ಸರ್ ದಂಪತಿಗಳು ತಕ್ಷಣ ಕಾರ್ಯಪ್ರವೃತ್ತರಾದರು. ವಿಶಾಲವಾಗಿ ಬೆಳೆದಿದ್ದ ಮರಗಳ ನೆರಳಿನಲ್ಲಿಯೇ ಅವರ ತಪಾಸಣೆ ಮತ್ತು ಚಿಕಿತ್ಸೆಗಳು ಪ್ರಾರಂಭವಾದವು. ಮಲೇರಿಯಾ, ಆಮಶಂಕೆ - ಭೇದಿ, ನಾರುಹುಣ್ಣು ಮುಂತಾದ ಕಾಯಿಲೆಯವರು ಬಹಳ ಸಂಖ್ಯೆಯಲ್ಲಿದ್ದರು. ಅವರಿಗೆಲ್ಲಾ ತುರ್ತಾಗಿ ಉಪಶಮನಕಾರಿ ಮದ್ದುಗಳನ್ನು ನೀಡಿದರು. ಇನ್ನು ಕೆಲವರಂತೂ ಆಸ್ಪತ್ರೆಗೆ ದಾಖಲಾಗಿ ತೀವ್ರತೆರನಾದ ಚಿಕಿತ್ಸೆಗೊಳಗಾಗುವ ಸ್ಥಿತಿಯಲ್ಲಿದ್ದರು. ಮಧ್ಯಾಹ್ನ ಧಾರಾಕಾರವಾಗಿ ಸುರಿವ ಮಳೆಯಲ್ಲಿ ಅವರೆಲ್ಲಾ ಒದ್ದೆಮುದ್ದೆಯಾದ ದೃಶ್ಯ ಶ್ವೆಯಿಟ್ಸರ್‌ನ ಮನಸ್ಸನ್ನು ಕರಗಿಸಿತು.

ದೀರ್ಘ ಪ್ರಯಾಣದ ದಣಿವನ್ನೂ ಲೆಕ್ಕಿಸದೆ ಶ್ವೆಯಿಟ್ಸರ್ ಕೆಲವು ನೀಗ್ರೋ ಗಳನ್ನು ಕಟ್ಟಿಕೊಂಡು ಕಾಡಿನ ಅಂಚಿನಲ್ಲಿ ಯಾವುದಾದರೂ ವಸತಿಗಳಿರಬಹುದೆಂಬ ಆಶೆಯಿಂದ ಆ ಕಡೆ ಸುತ್ತಾಡಿದ. ಅದೃಷ್ಟವಶಾತ್ ಹಿಂದೆ ಆ ಪ್ರದೇಶದಲ್ಲಿ ನೆಲಸಿದ್ದವರು ಕಟ್ಟಿಸಿದ್ದ ಮುರುಕಲು ಕೋಳಿ ಸಾಕಾಣೆಯ ಗುಡಿಸಲೊಂದು ಕಾಡಿನ ಅಂಚಿನಲ್ಲಿತ್ತು. ಆಫ್ರಿಕನ್ನರ ಸಹಾಯದಿಂದ ಅದರ ನೆಲ, ಗೋಡೆಗಳನ್ನು ಗುಡಿಸಿ, ಸಾರಿಸಿ ಸ್ವಚ್ಛಗೊಳಿಸಿದನು. ಹಾರಿಹೋಗಿದ್ದ ಮೇಲ್ಛಾವಣಿಯನ್ನು ತಾಳೆ-ಎಲೆಗಳಿಂದ ಮುಚ್ಚಿ ಮಳೆ ಬಿಸಿಲಿನಿಂದ ರಕ್ಷಣೆ ದೊರೆಯುವಂತೆ ಮಾಡಿಸಿದನು. ಅದರಲ್ಲೇ ಪರೀಕ್ಷಾ ಕೊಠಡಿ, ಚಿಕಿತ್ಸಾ ವಿಭಾಗ, ವಾರ್ಡುಗಳು ತಯಾರಾದವು. ಅದೇ ಡಾ॥ ಆಲ್ಬರ್ಟ್ ಶ್ವೆಯಿಟ್ಸರ್ ಲ್ಯಾಂಬರೀನೆ ಪ್ರದೇಶದಲ್ಲಿ ಮೊಟ್ಟಮೊದಲು ನಿರ್ಮಿಸಿದ್ದ "ಅಂಡೆಂಡೆ" (ANDENDE) ಆಸ್ಪತ್ರೆ ! (ಆಸ್ಪತ್ರೆ-ಗುಡಿಸಲು ಇದ್ದ ಜಾಗದ ಹೆಸರು).

ಉಷ್ಣ ವಲಯದಲ್ಲಿ ಪ್ರಚಲಿತವಿರುವ ಕಾಯಿಲೆಗಳ ಬಗೆಗೆ ಶ್ವೆಯಿಟ್ಸರ್ ವೈದ್ಯನಾದ ನಂತರವೂ ಪ್ಯಾರಿಸ್‌ಗೆ ತೆರಳಿ ವಿಶೇಷ ಅನುಭವ ಪಡೆದುಕೊಂಡಿದ್ದ. ಆದರೆ ಲ್ಯಾಂಬರೀನೆಗೆ ಬರುತ್ತಿದ್ದವರ ರೋಗಗಳ ವೈವಿಧ್ಯತೆ ಅವನ ತಿಳುವಳಿಕೆಯನ್ನು ತಲೆಕೆಳಗು ಮಾಡಿದಂತಾಗಿತ್ತು. ಕುಷ್ಠರೋಗ ಅಲ್ಲಿ ಬಹಳ ಸಮಯದಿಂದ ನೆಲೆಯೂರಿತ್ತು. ಹೊಸದಾಗಿ ಹರಡಿದ್ದ ಕ್ಷಯರೋಗ, ಫರಂಗಿ-ಹುಣ್ಣು, ಮೈಲಿ ಬೇನೆ ಯಂಥ ಸಾಂಕ್ರಾಮಿಕ ರೋಗಗಳು ಅಲ್ಲಿನ ಜನರಲ್ಲಿ ಕಾಳ್ಗಿಚ್ಚಿನಂತೆ ಹರಡುತ್ತಿದ್ದವು. ಆಮಶಂಕೆ, ಅತಿಸಾರ ಅಲ್ಲಿನ ಜನ ಪ್ರತಿದಿನ ಅನುಭವಿಸುತ್ತಿದ್ದ ಕಾಯಿಲೆಗಳಾಗಿದ್ದವು. ಹಳದಿ-ಜ್ವರ (YELLOW FEVER) ನಿದ್ದೆ-ಜ್ವರ (SLEEPING SICKNESS)ಗಳು ಅನಾದಿಕಾಲದಿಂದಲೂ ಆಫ್ರಿಕಾದ ಜನತೆಯ ಬೆನ್ನುಹತ್ತಿದ ಬೇತಾಳದಂತೆ ಪೀಡಿಸುತ್ತಿದ್ದವು. ಜೊತೆಗೆ ನಾಗರಿಕರ ಕಾಯಿಲೆಗಳೆನ್ನ ಬಹುದಾದ ಹರ್ನಿಯ, ಹೃದ್ರೋಗಗಳು, ಮೂಳೆಗಳ ಉರಿಯೂತ (OSTEOMYLITIS), ಮೇಹಸಂಬಂಧ ಕಾಯಿಲೆಗಳಿಂದ ನರಳುವವರೂ ಸಾಕಷ್ಟು ಸಂಖ್ಯೆಯಲ್ಲಿರುತ್ತಿದ್ದರು. ಅಪೆಂಡಿಸೈಟಿಸ್ ಮತ್ತು ಕ್ಯಾನ್ಸರ್‌ನಂಥ ಕಾಯಿಲೆಗಳು ಇನ್ನೂ ತಲೆಯೆತ್ತಿರಲಿಲ್ಲ.

ಪಾಳು ಕೋಳಿ ಕೊಟ್ಟಿಗೆಯ ಆಸ್ಪತ್ರೆಯಲ್ಲೇ ಡಾ॥ ಆಲ್ಬರ್ಟ್ ಶ್ವೆಯಿಟ್ಸರ್ ಮುಂದೆ ಹಲವಾರು ವೈದ್ಯಕೀಯ ಪವಾಡಗಳಿಗೆ ಕಾರಣಕರ್ತನಾದ. ಜ್ವರ, ವಾಂತಿ, ಭೇದಿಯಂಥ ಸಾಮಾನ್ಯ ಕಾಯಿಲೆಗಳ ನೂರಾರು ಜನರಿಗೆ ಪ್ರತಿದಿನ ಚಿಕಿತ್ಸೆ ನಡೆಯುತ್ತಿದ್ದವು. ಜತೆಗೆ ಹರ್ನಿಯ, ಕರುಳು ತಡೆ (INTESTINAL OBSTRUCTION)ಯಂಥ ಭೀಕರ ಕಾಯಿಲೆಗಳಿಗೂ ಯಶಸ್ವಿಯಾಗಿ ಶಸ್ತ್ರಚಿಕಿತ್ಸೆ ಗಳನ್ನು ಮಾಡಿದ.

ಕಾಡುಮೇಡುಗಳಲ್ಲಿ ಅಲೆಮಾರಿ ಜೀವನ ನಡೆಸುತ್ತಿದ್ದ ನೀಗ್ರೋಗಳಿಗೆ ಲಭ್ಯವಿದ್ದ ಆಹಾರ ಸಾಮಗ್ರಿಗಳು ತೀರಾ ಕಳಪೆ ದರ್ಜೆಯವು. ಅಲ್ಲಿಯ ವಿಪರೀತ ಸೆಕೆ ಮತ್ತು ಜೌಗು ಪ್ರದೇಶದಲ್ಲಿ ನಾಗರಿಕ ಜಗತ್ತಿನಲ್ಲಿ ಬೆಳೆಯುವ ಪುಷ್ಟಿಕರವಾದ ಆಹಾರ ವಸ್ತುಗಳನ್ನು ಬೆಳೆಸಲಾಗುತ್ತಿರಲಿಲ್ಲ. ಕಾಡು-ಬಾಳೆಕಾಯಿ, ಮುಡಿ ಗೆಣಸು, (CASSAVA), ಮುಳುಗೆಣಸುಗಳೇ (YAM) ಅವರಿಗೆ ಸಿಗುತ್ತಿದ್ದ ಕಚ್ಚಾ ಆಹಾರ ವಸ್ತುಗಳು. ಆಹಾರಕ್ಕಾಗಿ ಬೇಟೆಯಾಡುವ, ಮೀನು ಹಿಡಿಯುವ ಇಲ್ಲವೆ ದವಸ-ಧಾನ್ಯಗಳ ಬೀಜ ಬಿತ್ತಿ ಆಹಾರ ಸಾಮಗ್ರಿಗಳನ್ನು ಬೆಳೆಯುವ ಶ್ರಮದ ಕೆಲಸಗಳು ಹುಟ್ಟು ಸೋಮಾರಿಗಳಾದ ನೀಗ್ರೋಗಳಿಗೆ ಅಷ್ಟಾಗಿ ಹಿಡಿಸದ ಕಸಬು. ಹುಟ್ಟಿದಾರಭ್ಯ ಪೌಷ್ಟಿಕ ಆಹಾರದ ಕೊರತೆಯಿಂದ ಅದರಲ್ಲೂ ಅಪೌಷ್ಟಿಕತೆ, ರಕ್ತ ಹೀನತೆ ಮುಂತಾದವುಗಳಿಂದ ಸದಾ ನರಳುತ್ತಿದ್ದುದು ಸರ್ವೇಸಾಮಾನ್ಯವಾಗಿತ್ತು.

ಆಫ್ರಿಕಾದ ನೀಗ್ರೋಗಳು ಭಯಾನಕ ದೈಹಿಕ ಕಾಯಿಲೆಗಳಿಂದ ನರಳುವುದರ

ಜೊತೆಗೆ, ಮಾನಸಿಕವಾಗಿ ದೆವ್ವ, ಭೂತಗಳ ಪ್ರಭಾವಕ್ಕೊಳಗಾಗಿ ತೊಳಲಾಡುತ್ತಿದ್ದರು ಕೂಡ. ಮೂಢನಂಬಿಕೆ, ಅಂಧಶ್ರದ್ಧೆಗಳಿಂದ ಹತ್ತು ಹಲವು ಭೂತ-ಪ್ರೇತಗಳ ಆರಾಧನೆ ಮಾಡುತ್ತಾ ಮಂತ್ರ, ತಂತ್ರಗಳ ದಾಸರಾಗಿದ್ದರು. ಮಾಂತ್ರಿಕ ವೈದ್ಯರ ಮಾಟ-ಮೋಡಿಗಳೇ ಅವರ ಕಾಯಿಲೆಗಳ ಚಿಕಿತ್ಸಾ ವಿಧಾನಗಳಾಗಿದ್ದವು.

ಈ ತೆರದ ಅನಾಗರಿಕ ಸಂಸ್ಕೃತಿಯ ಜನರನ್ನು ಪರೀಕ್ಷಿಸಿ ಮದ್ದುಗಳನ್ನು ನೀಡಿ, ಇಲ್ಲವೆ ಶಸ್ತ್ರಚಿಕಿತ್ಸೆಗಳನ್ನು ನಡೆಸಿ, ಗುಣಪಡಿಸುವುದು ಅತ್ಯಂತ ತ್ರಾಸದಾಯಕ ಕೆಲಸ. ಪರಸ್ಪರ ಅರ್ಥವಾಗದ ಭಾಷೆಯ ಅಡ್ಡಗೋಡೆ ಬೇರೆ. ಜನಗಳ ತಪ್ಪು ತಿಳುವಳಿಕೆಗಳನ್ನು ಹೋಗಲಾಡಿಸುವುದಂತೂ ಇನ್ನೂ ಕಷ್ಟಕರ. ಕೆಲದಿನಗಳ ನಂತರ ಚಿಕಿತ್ಸೆಗಾಗಿ ಬಂದ ಜೋಸೆಫ್ ಅಜವಾನಿ ಎಂಬವನಿಗೆ ಫ್ರೆಂಚ್ ಭಾಷೆ ಸ್ವಲ್ಪಮಟ್ಟಿಗೆ ಅರ್ಥವಾಗುತ್ತಿತ್ತು. ಶ್ವೈಟ್ಸರ್ ಅವನನ್ನು ಲ್ಯಾಂಬರೀನೆಯಲ್ಲೇ ಉಳಿಸಿಕೊಂಡು ಆಸ್ಪತ್ರೆಯ ಕೆಲಸ ಕಾರ್ಯಗಳಲ್ಲಿ ತರಬೇತಿ ನೀಡಿದ. ಅವನೇ ದುಭಾಷಿಯ ಕೆಲಸವನ್ನು ಮಾಡುತ್ತಿದ್ದುದು ಶ್ವೈಟ್ಸರ್‌ಗೆ ಬಹಳ ಅನುಕೂಲವಾಯಿತು. ಜೋಸೆಫ್ ಅಲ್ಲಿನ ಮೂಲನಿವಾಸಿಗಳೆಲ್ಲರಿಗಿಂತ ಚುರುಕು ಬುದ್ಧಿಯವನಾಗಿದ್ದನಲ್ಲದೆ, ಆಫ್ರಿಕನ್ನರ ನಡೆ, ನುಡಿ, ಪದ್ಧತಿ ಮತ್ತು ಜೀವನಕ್ರಮಗಳ ಬಗೆಗೆ ಹೆಚ್ಚು ತಿಳಿದವನಾಗಿದ್ದ. ಅವನು ಬಹಳ ಸಮಯ ಶ್ವೈಟ್ಸರ್‌ನ ನೆಚ್ಚಿನ ಸೇವಕನಾಗಿದ್ದು, ಇತರ ನೀಗ್ರೋಗಳ ರೀತಿ-ನೀತಿಗಳನ್ನು ಪರಿವರ್ತಿಸುವಲ್ಲಿ ಉಪಯುಕ್ತ ಸಲಹೆಗಾರನೂ ಆಗಿದ್ದ.

ಹೆಲೆನ್, ಜೋಸೆಫ್ ಮತ್ತು ಡಾ।। ಶ್ವೈಟ್ಸರ್‌ಗಳ ಒಂದು ವೈದ್ಯಕೀಯ ತಂಡವೇ ಈಗ ಲ್ಯಾಂಬರೀನೆಯಲ್ಲಿ ತಯಾರಾದಂತಾಯಿತು. ದಿನವಹಿ ನಡೆಯಬೇಕಾಗಿದ್ದ ಆಸ್ಪತ್ರೆಯ ಕೆಲಸ ಕಾರ್ಯಗಳ ಬಗೆಗೆ ಅವರಲ್ಲಿ ಪರಸ್ಪರ ಅರಿವು ಉಂಟಾಗಿತ್ತು. ದಿನವೆಲ್ಲಾ ಕೆಲಸಗಳು ವ್ಯವಸ್ಥಿತವಾಗಿ ಜರುಗಲು ವಿವರವಾದ ಪಟ್ಟಿಯನ್ನು ತಯಾರುಮಾಡಿಕೊಂಡಿದ್ದರು. ಬೆಳಗಿನ ಎಂಟೂವರೆ ಗಂಟೆಗೆಲ್ಲಾ ಆಸ್ಪತ್ರೆ ಎದುರಿನ ಮರಗಳ ನೆರಳಿನಲ್ಲಿ ರೋಗಿಗಳು ಸರದಿ ಸಾಲಿನಲ್ಲಿ ಕಾಯುತ್ತಿರಬೇಕು. ಹೊಸದಾಗಿ ಬಂದವರಿಗೆ ಜೋಸೆಫ್ ಅಲ್ಲಿನ ರೀತಿ ನೀತಿಗಳನ್ನು ಅರ್ಥವಾಗುವ ಭಾಷೆಯಲ್ಲಿ ವಿವರಿಸುತ್ತಾನೆ. ಎಲ್ಲೆಂದರಲ್ಲಿ ಉಗುಳುವುದು, ಮಲಭಾದೆ ಮಾಡುವುದು, ಮೂತ್ರ ವಿಸರ್ಜಿಸುವುದು ಮುಂತಾದವುಗಳನ್ನು ಮಾಡದಿರುವಂತೆ ಎಚ್ಚರಿಸುತ್ತಾನೆ. ಗುಂಪುಗೂಡಿ ಜಗಳವಾಡುವುದು, ಜೋರಾಗಿ ಕೂಗಾಡುವುದನ್ನು ಸಹಾ ನಿರ್ಬಂಧಿಸಬೇಕಾಗಿತ್ತು. ರೋಗಿಗಳ ಮತ್ತು ಅವರ ಸಂಬಂಧಿಕರಲ್ಲಿ ಕೆಲವರಿಗೆ ಆಹಾರವನ್ನು ಆಸ್ಪತ್ರೆಯಿಂದಲೇ ಪುಕ್ಕಟೆಯಾಗಿ ಒದಗಿಸಬೇಕಾದ್ದರಿಂದ ಅನಾವಶ್ಯಕವಾಗಿ ಇತರರು ಆಹಾರವನ್ನು ದುರುಪಯೋಗಿಸಿಕೊಳ್ಳದಂತೆಯೂ ಎಚ್ಚರವಹಿಸಬೇಕಾಗುತ್ತಿತ್ತು.

ಅತ್ಯಂತ ದಾರುಣ ಸ್ಥಿತಿಯಲ್ಲಿದ್ದ ನೀಗ್ರೋಗಳಿಗೆ ದೂರದ ಯುರೋಪಿನಿಂದ ಬಂದ ಬಿಳಿಯನೊಬ್ಬ ಔಷಧಿ, ಅನ್ನಾಹಾರ, ವಸತಿಗಳನ್ನು ಕೊಡಲಾರಂಭಿಸಿದ್ದು ಸಾಕ್ಷಾತ್ ದೇವರೇ ಅಲ್ಲಿ ಅವತರಿಸಿದಂತಾಯಿತು. ಅವರ ಸಂಬಂಧ ಗಾಢವಾಗಿ ಬೆಳೆಯಿತು; ಶ್ವೆಯಿಟ್ಸರ್ ಅವರೆಲ್ಲರ ಆರಾಧ್ಯ ದೇವತೆಯಾದ. ಧಾರ್ಮಿಕ ಮತ್ತು ತಾತ್ವಿಕ ವಿಷಯಗಳನ್ನು ಆಳವಾಗಿ ಅಭ್ಯಸಿಸಿ ಪಾಂಡಿತ್ಯ ಪಡೆದ ಡಾ॥ ಶ್ವೆಯಿಟ್ಸರ್ ಪ್ರವಾದಿ ಏಸುಕ್ರಿಸ್ತನ ಬೋಧನೆಗಳ ಅರ್ಥವನ್ನು ಸರಿಯಾಗಿ ಅರ್ಥೈಸಿಕೊಂಡಿದ್ದವ. ಆಫ್ರಿಕನ್ನರು ರೋಗ ರುಜಿನಗಳಿಂದ ನರಳುತ್ತಿರುವ ದಾರುಣ ವಾರ್ತೆಯನ್ನು ತಿಳಿದಾಕ್ಷಣ ತನಗಾಗಲೇ ಲಭ್ಯವಿದ್ದ ಸುಖಜೀವನವನ್ನು ತ್ಯಜಿಸಿ, ವೈದ್ಯನಾಗಿ ಲ್ಯಾಂಬರೀನೆಗೆ ಧಾವಿಸಿ ಬಂದವನು. ಏಸು ಬೋಧಿಸಿದ ದೀನ ದಲಿತರ ಸೇವೆಯನ್ನು ತೃಪ್ತಿಕರವಾಗಿ ಮಾಡುತ್ತಿರುವ ಹೆಮ್ಮೆ ಶ್ವೆಯಿಟ್ಸರ್ ದಂಪತಿಗಳದಾಯಿತು. ವೈಯಕ್ತಿಕವಾಗಿ ಎಷ್ಟೇ ಅನಾನುಕೂಲಗಳಿದ್ದರೂ ಆಫ್ರಿಕನ್ನರ ಸೇವೆಗೆ ಅವರಿಬ್ಬರೂ ಸಮರ್ಪಣಾ ಭಾವದಿಂದ ಅರ್ಪಿಸಿಕೊಂಡು ಹಗಲಿರುಳು ಕಾರ್ಯಪ್ರವೃತ್ತರಾಗಿರುತ್ತಿದ್ದರು. ಅವರ ಮಾನವೀಯ ಸೇವೆಯ ಸುದ್ದಿ ಸುತ್ತಮುತ್ತಲ ನೂರಾರು ಮೈಲಿಗಳವರೆಗೆ ಹರಡಿ ಅಲ್ಲಿ ಪ್ರತಿದಿನ ರೋಗಿಗಳ ಜಾತ್ರೆಯೇ ಸೇರುತ್ತಿತ್ತು.

ದಿನೇ ದಿನೇ ಹೆಚ್ಚಾಗುತ್ತಿದ್ದ ರೋಗಿಗಳ ಸೂಕ್ತ ಚಿಕಿತ್ಸೆಗೆ ಇನ್ನೂ ವಿಶಾಲವಾದ ಆಸ್ಪತ್ರೆಯ ಅವಶ್ಯಕತೆ ಇತ್ತು. ಅವರನ್ನು ಬಿಸಿಲು-ಮಳೆ-ಗಾಳಿಗಳಿಂದ ರಕ್ಷಿಸುವುದು ಆದ್ಯತೆಯ ಕೆಲಸವಾಗಿತ್ತು. ಆಸ್ಪತ್ರೆಯ ನಿರ್ಮಾಣಕ್ಕಾಗಿ ಮಿಷನರಿಯವರು ಮೊದಲು ಕೊಟ್ಟಿದ್ದ ಜಾಗ ಬಹಳ ಕಿರಿದಾಗಿತ್ತು. ಮುಂದೆ ವಿಸ್ತಾರಗೊಳ್ಳಬಹುದಾದ ಅವನ ಕಾರ್ಯಕ್ಷೇತ್ರಕ್ಕೆ ಸಾಕಾಗುವಂತಿರಲಿಲ್ಲ. ಅವನೀಗ ಖಾಯಂ ಅಲ್ಲೇ ನೆಲಸುವ ನಿರ್ಧಾರ ಮಾಡಿ, ಅವನ ಕುಟೀರ ಮತ್ತು ಓಗಾವೇ ನದಿಯ ನಡುವಿನ ವಿಸ್ತಾರವಾದ ಜಾಗವನ್ನು ಅವನಿಗೇ ಬಿಟ್ಟುಕೊಡಬೇಕೆಂದು ಮಿಷನರಿಗಳಿಗೆ ಮನವಿ ಸಲ್ಲಿಸಿದ.

ಡಾ॥ ಆಲ್ಬರ್ಟ್ ಶ್ವೆಯಿಟ್ಸರ್ ಲ್ಯಾಂಬರೀನೆಯಲ್ಲಿರುವ ಸಮಯದಲ್ಲಿ ಮತ ಮತ್ತು ಧಾರ್ಮಿಕ ವಿಷಯಗಳ ಬಗೆಗೆ ಕೈ ಹಾಕಬಾರದೆಂಬ ನಿಯಮವಿತ್ತು. ಶ್ವೆಯಿಟ್ಸರ್ ಈಗ ಮಾಡುತ್ತಿದ್ದ ನಿಸ್ವಾರ್ಥ ಸೇವೆ ಅವನ ರೀತಿ ನೀತಿಗಳು ಅಲ್ಲಿದ್ದ ಮಿಷನರಿಯವರ ಕಣ್ಣು ತೆರೆಸಿದ್ದವು. ಏಸುಕ್ರಿಸ್ತ ಶಿಖರಾಗ್ರದಲ್ಲಿ ಮಾಡಿದ ಬೋಧನೆಗಳಂತೆ, ಶ್ವೆಯಿಟ್ಸರ್‌ನ ಮಾನವೀಯ ಸೇವೆ ಸರಿಸಾಟಿಯಂತಿದೆ ಎಂಬುದರ ಅರಿವು ಅವರಿಗೂ ಆಗಿರಬೇಕು. ಈಗ ಮಿಷನರಿಗಳೇ ಅವನು ಮತ ಪ್ರಚಾರದಲ್ಲಿ ಭಾಗವಹಿಸಬಹುದೆಂದು ಕೇಳಿಕೊಂಡರು. ತಾನು ಮೊದಲು ಕೊಟ್ಟಿದ್ದ ವಚನವನ್ನು ಭಂಗ ಮಾಡಲು ನಿರಾಕರಿಸಿದರೂ ಅಂತಿಮವಾಗಿ ತನಗೆ ಪ್ರಿಯವಾಗಿದ್ದ ಧರ್ಮಬೋಧನೆಯನ್ನು ಅವಕಾಶ ದೊರೆತಾಗಲೆಲ್ಲಾ ನಿರಾಕರಿಸಲಿಲ್ಲ. ಮಿಷನರಿಗಳ

ಜತೆ ಅಂಥ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದ. ಇದಲ್ಲದೆ ಪುರುಸೊತ್ತಿದ್ದ ಸಮಯಗಳಲ್ಲಿ ಆಫ್ರಿಕನ್ನರನ್ನು ಗುಂಪುಗೂಡಿಸಿಕೊಂಡು ತನ್ನದೇ ಆದ ಸರಳ ರೀತಿಯಲ್ಲಿ ಧರ್ಮಬೋಧನೆ, ನಾಗರಿಕ-ಜೀವನದ ರೀತಿ-ನೀತಿಗಳ ಬಗೆಗೆ ಉಪದೇಶ ಮಾಡುತ್ತಿದ್ದ. ಡಾ॥ ಶ್ವೈಯಿಟ್ಸರ್‌ನ ಕೆಲಸದ ವೈಖರಿಯನ್ನು ಮೆಚ್ಚಿದ ಮಿಷನರಿಯವರು ಅವನು ಆಸ್ಪತ್ರೆ ನಿರ್ಮಾಣಕ್ಕಾಗಿ ಕೇಳಿದ ಜಾಗವನ್ನು ಮಂಜೂರು ಮಾಡಿದ್ದಲ್ಲದೆ, ಅದರ ಖರ್ಚಿಗಾಗಿ ನಾಲ್ಕು ಸಾವಿರ ಫ್ರಾಂಕುಗಳ ದೇಣಿಗೆಯನ್ನಿತ್ತು ಸಹಕರಿಸಿದರು.

**ಮೊದಲ ಆಸ್ಪತ್ರೆ**

ಹೊಸದೊಂದು ಆಸ್ಪತ್ರೆಯ ನಿರ್ಮಾಣದ ಬಗೆಗೆ ನಿರ್ಧಾರ ಮಾಡಿದ್ದೇನೋ ಆಯಿತು. ಆದರೆ ಅವನು ಯೋಚಿಸಿದಂತೆ ಅದು ಅಷ್ಟು ಸರಳ ಕೆಲಸವಾಗಿರಲಿಲ್ಲ. ಆ ಪ್ರದೇಶದಲ್ಲಿ ನಾಟಾ ಸಾಗಣೆಯ ಕೆಲಸ ಆಗ ಅತ್ಯಂತ ಬಿರುಸಿನಿಂದ ಜರಗುತ್ತಿತ್ತು. ಹೆಚ್ಚು ಕೂಲಿ ದೊರೆಯುತ್ತಿದ್ದ ಆ ಕೆಲಸಕ್ಕೇ ಜನ ಹೋಗುತ್ತಿದ್ದರು. ಕೆಲಸಕ್ಕೆ ಬರುತ್ತಿದ್ದ ನೀಗ್ರೋಗಳು ಸೋಮಾರಿತನಕ್ಕೆ ಹೆಸರಾಗಿದ್ದವರು. ಅವರಿಂದ ದುಡಿಸಿಕೊಳ್ಳುವುದು ಅತ್ಯಂತ ದುಸ್ತರವಾದ ಕೆಲಸವೇ ಸರಿ. ಜೊತೆಯಲ್ಲಿ ಶ್ವೈಯಿಟ್ಸರನೂ ಕೆಲಸದಲ್ಲಿ ನಿರತನಾದರೆ ಮಾತ್ರ ಅವರೂ ಕೆಲಸದಲ್ಲಿ ತೊಡಗುತ್ತಿದ್ದರು. ಆಸ್ಪತ್ರೆಯ ರೋಗಿಗಳನ್ನು ನೋಡಲು ಹೋದಾಗಲೆಲ್ಲಾ ಅವನು ಬರುವವರೆಗೂ ಅವರು ಕೈಕಟ್ಟಿ ಕುಳಿತುಕೊಳ್ಳುವುದು ವಾಡಿಕೆ. ಹಾಗೇಕೆ ಮಾಡುತ್ತಾರೆಂದು ವಿಚಾರಿಸಿದರೆ ಯಜಮಾನನೇ ಕೆಲಸ ಮಾಡದಿರುವಾಗ ಅವರೇಕೆ ಮಾಡಬೇಕೆಂಬ ಹುಂಬತನದ ಉತ್ತರ ತಯಾರಿರುತ್ತಿತ್ತು. ಅವರನ್ನು ಸಂಭಾಳಿಸುವುದರಲ್ಲಿ ತಲೆ ಚಿಟ್ಟು ಹಿಡಿಯುತ್ತಿತ್ತು. ಹೆಚ್ಚುತ್ತಿದ್ದ ರೋಗಿಗಳ ಶುಶ್ರೂಷೆಯ ಜತೆಯಲ್ಲೇ ಆಸ್ಪತ್ರೆಯ ನಿರ್ಮಾಣವೂ ನಡೆಯುತ್ತಿದ್ದು ಶ್ವೈಯಿಟ್ಸರ್‌ಗೆ ಬಿಡುವೇ ಇರುತ್ತಿರಲಿಲ್ಲ.

ಲ್ಯಾಂಬರೀನೆಯಂಥ ಸಮಭಾಜಕ ವೃತ್ತ ಪ್ರದೇಶದಲ್ಲಿ ನಿರ್ಮಾಣವಾಗುವ ಕಟ್ಟಡಗಳನ್ನು ಅಲ್ಲಿನ ಹವಾ ಮತ್ತು ಪರಿಸರಕ್ಕೆ ಹೊಂದಿಕೊಳ್ಳುವಂತೆ ಯೋಜಿಸಿ ಕಟ್ಟಬೇಕಾಗುತ್ತದೆ. ದಿನದ ಮುಕ್ಕಾಲು ಸಮಯ ಇರುವ ಉರಿಬಿಸಿಲು ಒಳಗೆ ಬರದ ಹಾಗೆ ವಿನ್ಯಾಸ ಮಾಡಬೇಕು. ಕೆಲಸಾರಿ ಎಡೆಬಿಡದೆ ಸುರಿಯುವ ಮಳೆ-ಗಾಳಿಗಳಿಂದ ರಕ್ಷಣೆ ದೊರೆಯುವಂತೆ ಗೋಡೆ, ಕಿಟಕಿ ಮತ್ತು ಮೇಲ್ಛಾವಣಿಗಳನ್ನು ರೂಪಿಸಬೇಕಾಗುತ್ತದೆ. ಸೆಕೆಯನ್ನು ಕಡಿಮೆ ಮಾಡಲು ಕಟ್ಟಡದ ಒಳಗಡೆ ಚೆನ್ನಾಗಿ ಗಾಳಿಯಾಡುವ ಅವಕಾಶವಿರಬೇಕು. ಇವೆಲ್ಲಕ್ಕಿಂತ ಮಿಗಿಲಾಗಿ ಜನರನ್ನು ಸದಾ ಬಾಧಿಸುವ ಸೊಳ್ಳೆ-ನೊಣಗಳಿಂದಲೂ ರಕ್ಷಿಸುವಂತಿರಬೇಕು. ಬೇರೆ ಕಡೆಗಳಲ್ಲಿ ಬಳಕೆಯಲ್ಲಿರುವ ವಿಧಾನಗಳನ್ನು ತ್ಯಜಿಸಿ, ಶ್ವೈಯಿಟ್ಸರ್ ತನ್ನದೇ ಆದ ನಿಯಮಗಳನ್ನು ರೂಪಿಸಿಕೊಂಡು, ಆಸ್ಪತ್ರೆ ನಿರ್ಮಾಣಕ್ಕೆ ಕೈ ಹಾಕಿದ. ನೆಲವನ್ನು ಸಮತಟ್ಟು ಮಾಡಿ,

ಗಟ್ಟಿಯಾಗುವಂತೆ ಬಡಿದು ಸರಿ ಮಾಡಿಸಿದ. ಮರದ ದಿಣ್ಣೆಗಳ ಗೋಡೆ; ಹಲಗೆಗಳ ಕಿಟಕಿ-ಬಾಗಿಲು; ಚಾವಣಿಗೆ ಜಿಂಕ್‌ಷೀಟ್ ಹೊದಿಸಿದ ಕಟ್ಟಡ ಕೆಲವೇ ದಿನಗಳಲ್ಲಿ ತಯಾರಾಯಿತು. ಸೊಳ್ಳೆ ಕಾಟ ತಡೆಯಲು ಕಿಟಕಿ ಬಾಗಿಲು, ಗವಾಕ್ಷಗಳಿಗೆ ಕ್ಯಾಲಕೊ ಬಟ್ಟೆಯ ಸೊಳ್ಳೆ ಪರದೆಗಳ ಹೊದಿಕೆ ! ತನ್ನದೇ ಆದ ಸಂಪನ್ಮೂಲಗಳಿಂದ ಅವನೇ ತಯಾರಿಸಿದ ಯೋಜನೆಗಳಿಗನುಸಾರ ಕಟ್ಟಿದ ಕಟ್ಟಡ ಅದಾಗಿತ್ತು. ಸುಮಾರು ನಲವತ್ತು ಜನ ಒಳರೋಗಿಗಳೇ ಅಲ್ಲದೆ ಅವರ ಸಂಬಂಧಿಕರು ಅಲ್ಲಿ ತಂಗಬಹು ದಾಗಿತ್ತು. ಜೊತೆಗೆ ಹೊರರೋಗಿಗಳ ವಿಭಾಗ, ಔಷಧಾಗಾರ, ಪ್ರಸವ ಕೋಣೆ, ಶಸ್ತ್ರಚಿಕಿತ್ಸಾ ಕೊಠಡಿ ಮುಂತಾದ ಪ್ರತ್ಯೇಕ ವಿಭಾಗಗಳೂ ಅದಕ್ಕೆ ಹೊಂದಿಕೊಂಡಂತೆ ನಿರ್ಮಾಣವಾದವು. ಸಹಾಯಕ ಜೋಸೆಫ್‌ನಿಗೂ ಪ್ರತ್ಯೇಕ ಗುಡಿಸಲು. ಇತರರ ಸಂಪರ್ಕದಿಂದ ದೂರವಿರಬೇಕಾಗಿದ್ದ ನಿದ್ದೆ - ಜ್ವರದ ರೋಗಿಗಳಿಗೆ ಪ್ರತ್ಯೇಕ ವಸತಿ, ನದಿಯ ಇನ್ನೊಂದು ದಡದಲ್ಲಿ ತಯಾರಾಯಿತು.

ಡಾ॥ ಶ್ವೈಯಿಟ್ಸರ್ ಲ್ಯಾಂಬರೀನೆಗೆ ಬಂದು ನೆಲಸಿದ ಮೊದಲ ಒಂಬತ್ತು ತಿಂಗಳುಗಳಲ್ಲಿ ಆಸ್ಪತ್ರೆ ನಿರ್ಮಾಣದ ಒತ್ತಡದ ಜೊತೆಗೂ, ಚಿಕಿತ್ಸೆ ಮಾಡಿದ ರೋಗಿಗಳ ಸಂಖ್ಯೆ ಎರಡು ಸಾವಿರಕ್ಕೂ ಮಿಕ್ಕಿತ್ತೆಂದರೆ ಅವನ ಶ್ರಮದ ಅಗಾಧತೆಯ ಅರಿವಾಗಬಹುದು. ಬಹುಶಃ ಅವನಲ್ಲಿದ್ದ ಉದಾತ್ತ ಧ್ಯೇಯದ ಗುರಿಮುಟ್ಟುವ ಉತ್ಕಟಾಕಾಂಕ್ಷೆ ಅಷ್ಟೊಂದು ಮಾನಸಿಕ ಹಾಗೂ ದೈಹಿಕ ಶ್ರಮವನ್ನು ಸಹಿಸಲು ಪ್ರೇರಕವಾಯಿತೆನ್ನಬಹುದು. ರೋಗ-ರುಜಿನಗಳ ಬೇನೆಯಿಂದ ಸಾಯುವ ನತದೃಷ್ಟರಿಗೆ ಸಹಾಯ ಮಾಡುವುದಕ್ಕಿಂತ ಶ್ರೇಷ್ಠ ಕಾಯಕ ಬೇರಿಲ್ಲವೆಂಬುದು ಅವನ ದೃಢನಂಬಿಕೆ. ''ಸಾವಿಗಿಂತಲೂ ನೋವೇ ಮಾನವ ಕುಲದ ಕ್ರೂರ ಯಜಮಾನ'' ಎಂದು ಅವನೊಂದು ಸಾರಿ ಚರ್ಚ್‌ನಲ್ಲಿ ಮಾಡಿದ ಪ್ರವಚನ ಆಗಾಗ್ಗೆ ಅವನ ನೆನಪಿಗೆ ಬರುತ್ತಿತ್ತು.

ಯುರೋಪಿನಲ್ಲಿ ಡಾ॥ ಶ್ವೈಯಿಟ್ಸರ್ ಕಲಿತ ವೈದ್ಯವಿದ್ಯೆ ಸಾಮಾನ್ಯ ಚಿಕಿತ್ಸೆಗಳಿಗೆ ಮೀಸಲಾಗಿತ್ತು. ವಿಶೇಷತರಹೆಯ ಶಸ್ತ್ರಚಿಕಿತ್ಸೆಗಳನ್ನು ಕೈಗೊಳ್ಳಲು ಪ್ರತ್ಯೇಕ ಅನುಭವ ಪಡೆಯಲು ಸಾಧ್ಯವಾಗಿರಲಿಲ್ಲ. ತುರ್ತು ಶಸ್ತ್ರಚಿಕಿತ್ಸೆ ಮಾಡಬೇಕಾದ ಹರ್ನಿಯ (ಅಂಡವಾಯು) ಕಾಯಿಲೆ ಅಲ್ಲಿನ ಬಹಳಷ್ಟು ಜನರಿಗಿತ್ತು. ಅದರಲ್ಲಿ ಕೆಲ ಸಾರಿ ಕರುಳು ತಿರುವಿ ಸಿಕ್ಕಿ ಹಾಕಿಕೊಳ್ಳುವುದರಿಂದ ಕರುಳಿನ ಚಲನೆಗೆ ತಡೆಯಾಗಿ ಭೀಕರ ನೋವು ಮತ್ತು ವಾಂತಿಯಿಂದ ಕೆಲವರು ವಿಲಿವಿಲಿ ಒದ್ದಾಡುತ್ತಿದ್ದರು. ಒಂದೆರಡು ದಿನ ಪಡಲಾರದ ಯಾತನೆಯಿಂದ ಅವರೆಲ್ಲಾ ಸಾಯುತ್ತಿದ್ದರು. ಮಾಂತ್ರಿಕ ವೈದ್ಯರಿಂದ ದೆವ್ವ-ಭೂತಗಳನ್ನು ಸಂತೃಪ್ತಿಪಡಿಸುವ ಸಂಸ್ಕಾರಗಳು ನಡೆಯುತ್ತಿದ್ದರೂ ಪ್ರಯೋಜನವಾಗುತ್ತಿರಲಿಲ್ಲ. ಶ್ವೈಯಿಟ್ಸರ್ ಅಂಥವರನ್ನು ಪ್ರತ್ಯಕ್ಷವಾಗಿ ನೋಡಿದ

ಮೇಲೆ ಸುಮ್ಮನೆ ಕುಳಿತುಕೊಳ್ಳಲಾಗಲಿಲ್ಲ. ಕೆಲವರಿಗೆ ಹೆಲೆನ್‌ಳಿಂದ ಅರಿವಳಿಕೆ ಸಾಧನ (ANAESTHESIA) ಕೊಡಿಸಿ, ಶಸ್ತ್ರಚಿಕಿತ್ಸೆ ಮಾಡಿ ಪ್ರಾಣ ಉಳಿಸಿದ. ಇಂಥ ಪ್ರತಿಫಲಗಳಿಂದ ನೀಗ್ರೋಗಳು ಚಕಿತರಾಗುತ್ತಿದ್ದರೂ, ಯಾರಾದರೂ ಸತ್ತರಂತೂ ರಗಳೆಯೆಬ್ಬಿಸುತ್ತಿದ್ದರು. ಹೀಗಾಗಿ ಎಲ್ಲಾ ಸಮಯಗಳಲ್ಲೂ ರೋಗಿಗಳನ್ನು ಶಸ್ತ್ರಚಿಕಿತ್ಸೆಗೆ ಒಪ್ಪಿಸಲಾಗುತ್ತಿರಲಿಲ್ಲ. ಅಂಥವರಿಗೆ ಯಾರೋ ಮಾಟ ಮಾಡಿಸಿದ್ದಾರೆಂದು ಅವರ ಮಾಂತ್ರಿಕ ವೈದ್ಯ ಹೇಳಿದ್ದರಂತೂ, ಅವನನ್ನು ಶ್ವೈಯಿಟ್ಸರ್ ಮುಟ್ಟುವಂತಿರಲಿಲ್ಲ. ಪ್ರತಿಸಾರಿ ಯಾರಾದರೂ ಸತ್ತಾಗ ಅದು ಮಾಟ ಮಾಡಿದುದರ ಪರಿಣಾಮವೇ ಎಂದು ಗುಂಪು ಘರ್ಷಣೆಗಳಾಗಿ ಹಲವಾರು ಜನ ಸಾವು-ನೋವಿಗೀಡಾಗುತ್ತಿದ್ದರು. ಸಾವಿನ ಕಾರಣವನ್ನು ಶ್ವೈಯಿಟ್ಸರ್ ಮನದಟ್ಟಾಗುವಂತೆ ವಿವರಿಸಿದ್ದರೂ, ಊರಿಗೆ ಹಿಂದಿರುಗಿದ ಮೇಲೆ ಘರ್ಷಣೆಗಳಾಗುವುದು ತಪ್ಪುತ್ತಿರಲಿಲ್ಲ. ಆಫ್ರಿಕನ್ನರ ಮನೋಭಾವವನ್ನರಿತಿದ್ದ ಜೋಸೆಫ್, ಕೆಲವರನ್ನು ಶಸ್ತ್ರಚಿಕಿತ್ಸೆಗೊಳಪಡಿಸದಂತೆ ಶ್ವೈಯಿಟ್ಸರ್‌ಗೆ ಎಚ್ಚರಿಕೆ ನೀಡುತ್ತಿದ್ದುದೂ ಉಂಟು. ಮಾನವ ಜೀವಗಳನ್ನುಳಿಸಲು ಎಂತಹ ತೊಂದರೆಯನ್ನಾದರೂ ಎದುರಿಸಲು ತಯಾರಿದ್ದ ಡಾ|| ಶ್ವೈಯಿಟ್ಸರ್ ಹೆದರಿ ಕೈಕಟ್ಟಿ ಕುಳಿತುಕೊಳ್ಳುವ ಸ್ವಭಾವದವನಾಗಿರಲಿಲ್ಲ.

ಮೊದಲ ಕೆಲವು ಹರ್ನಿಯದ ಶಸ್ತ್ರಚಿಕಿತ್ಸೆಗಳು ಯಶಸ್ವಿಯಾದಾಗ ಮುಗ್ಧ ಆಫ್ರಿಕನ್ನರಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ರೋಗಿ ಆಸ್ಪತ್ರೆಗೆ ಬಂದ ಕೆಲವೇ ತಾಸುಗಳಲ್ಲಿ ಶಸ್ತ್ರಚಿಕಿತ್ಸಾ ಕೊಠಡಿಗೆ ಕೊಂಡೊಯ್ಯುವುದು; ಹೆಲೆನ್ ಅವನಿಗೆ ಈಥರ್ ಬಳಸಿ ಅರಿವಳಿಕೆಯುಂಟುಮಾಡುವುದು ಡಾ|| ಶ್ವೈಯಿಟ್ಸರ್ ಹರ್ನಿಯದ ಜಾಗದಲ್ಲಿ ಕತ್ತರಿಸಿ ಕರುಳನ್ನು ಬಿಡಿಸುವುದು; ಮತ್ತೆ ಹೊಲಿಗೆ ಹಾಕಿ ವಾರ್ಡಿಗೆ ತಂದಾಗ ಜೀವವಿಲ್ಲ ದವನಂತೆ ಅವನು ಮಲಗಿರುವುದು; ಅವನಿನ್ನೇನು ಸತ್ತೇಹೋಗಿರುವನೆಂದು ಸಂಬಂಧಿಗಳು ದುಃಖಿಸುವಷ್ಟರಲ್ಲೇ ಎಚ್ಚರಗೊಂಡ ರೋಗಿ, ಕೈಕಾಲುಗಳನ್ನು ಆಡಿಸಿ "ನೋವೇನಿಲ್ಲ, ನೋವೇನಿಲ್ಲ" ಎಂದು ಕೂಗಾಡುವುದು ಅವರನ್ನು ಬೆರಗುಗೊಳಿಸುತ್ತಿತ್ತು. ಇವನ್ನೆಲ್ಲಾ ನೋಡಿ "ಈ ಬಿಳಿ ವೈದ್ಯ ಸಾಮಾನ್ಯನಲ್ಲ; ರೋಗಿಯನ್ನು ಸಾಯಿಸಿ ಮತ್ತೆ ಜೀವ ಬರಿಸುತ್ತಾನೆ ! ಇವನೂ ಒಂದು ತರದ ಮಾಂತ್ರಿಕ ವೈದ್ಯನೇ ! ಸರಿ !" ಎಂದು ಹರ್ಷೋದ್ಗಾರ ಮಾಡುತ್ತಾರೆ. ಮುಂದೆ ಡಾ|| ಶ್ವೈಯಿಟ್ಸರ್ "ಓಗಂಗಾ" – ಮಾಂತ್ರಿಕ ವೈದ್ಯನೆಂದೇ ಪ್ರಖ್ಯಾತನಾದ !

ಹೊಸದಾಗಿ ವೈದ್ಯ ವೃತ್ತಿಯನ್ನು ಕಲಿತು, ಒಂಟಿಯಾಗಿ ಅರಣ್ಯದ ನಡುವೆ ಕಾರ್ಯನಿರತರಾದ ಯಾರಿಗಾದರೂ ಕೆಲವು ಸಾರಿ ಅನುಮಾನಗಳು ಉದ್ಭವಿಸುವುದು ಸ್ವಾಭಾವಿಕವೇ. ವೈದ್ಯಕೀಯ ಗ್ರಂಥಗಳಲ್ಲಿ ವಿವರಿಸಿದ ಸಾಮಾನ್ಯ ಚಿಹ್ನೆಗಳಿರುವವರು ಇಲ್ಲಿ ಸಿಗುವುದು ಅಪರೂಪವೇ. ಕಾಯಿಲೆ ಪ್ರಗತಿ ಬಹಳ

ಮುಂದುವರಿದಿದ್ದು, ಹಲವು ತೊಡಕುಗಳು ಉದ್ಭವಿಸಿರುತ್ತಿದ್ದವು. ಅವುಗಳ ಬಗೆಗೆ ಚರ್ಚಿಸಿ ಸೂಕ್ತ ರೋಗ ನಿರ್ಣಯಕ್ಕೆ ಬರಲು ಅಲ್ಲಿ ಬೇರಾವ ವೈದ್ಯರ ಸಹಾಯ, ಸಹಕಾರಗಳಿಗೆ ಅವಕಾಶಗಳಿರಲಿಲ್ಲ. ಆದರೂ ಸಮಸ್ಯೆ ಎಷ್ಟೇ ಜಟಿಲವಾಗಿದ್ದರೂ ಡಾ॥ ಶ್ವೈಟ್ಸರ್ ತನ್ನೆಲ್ಲಾ ಬುದ್ಧಿವಂತಿಕೆ ಮತ್ತು ಸಾಮರ್ಥ್ಯಗಳನ್ನುಪಯೋಗಿಸಿ ಚಿಕಿತ್ಸೆ ಮಾಡುತ್ತಿದ್ದ. ಫಲಿತಾಂಶ ಕೆಟ್ಟದಾಗಿ ತನ್ನ ಘನತೆಗೆ ಕುಂದಾಗಬಹುದೆಂಬ ಕಾರಣದಿಂದ ಯಾರಿಗೂ ಶಸ್ತ್ರಚಿಕಿತ್ಸೆಯನ್ನು ನಿರಾಕರಿಸದ ಧಾರ್ಷ್ಟ್ಯ ಅವನದಾಗಿತ್ತು. ಧ್ಯೇಯ ಒಳ್ಳೆಯದಾಗಿ ಇರುವಾಗ ಘನತೆಯ ಪ್ರಶ್ನೆ ಅವನಲ್ಲಿ ಉದ್ಭವಿಸುತ್ತಲೇ ಇರಲಿಲ್ಲ.

ಬರೇ ದೀನ ದಲಿತ ಅಲೆಮಾರಿಗಳೇ ತುಂಬಿರುವ ಅರಣ್ಯ ಮಧ್ಯದಲ್ಲಿ ವೈದ್ಯಕೀಯ ನೆರವು ನೀಡುವುದು ಆರ್ಥಿಕವಾಗಿ ದುಸ್ತರ ಕೆಲಸವೆಂದು ಬೇರೆ ಹೇಳಬೇಕಾಗಿಲ್ಲ. ಅಲ್ಲಿ ಬರುವ ರೋಗಿಗಳಿಗೆ ಪುಕ್ಕಟೆಯಾಗಿ ಔಷಧೋಪಚಾರ ಮತ್ತು ಆಹಾರವನ್ನು ಒದಗಿಸಲೇಬೇಕಾಗಿತ್ತು. ರೋಗಿಯ ಜೊತೆ ಬಂದವರಿಗೂ ಆಹಾರ-ಸಾಮಗ್ರಿಗಳನ್ನು ಕೊಡುವುದು ಅನಿವಾರ್ಯವೇ. ಯುರೋಪಿನಿಂದ ಬಂದಾಗ ತಂದಿದ್ದ ಸರಬರಾಜೇ ಅವನ ಭಂಡಾರ. ಯುರೋಪಿನಲ್ಲಿ ಮೊದಲು ಭರವಸೆಯಿತ್ತ ಕೆಲವು ಸ್ನೇಹಿತರು ಮತ್ತು ಹಿತೈಷಿಗಳು ಆಗಾಗ್ಗೆ ಕೆಲವು ಔಷಧ ಮತ್ತು ಆಹಾರ ಸಾಮಗ್ರಿಗಳನ್ನು ಕಳುಹಿಸುತ್ತಿದ್ದುದು ಅವನ ಅದೃಷ್ಟ. ಆದರೆ ಅದನ್ನೇ ನಂಬಿ ಕುಳಿತುಕೊಳ್ಳುವ ಹಾಗಿರಲಿಲ್ಲ. ಒಳ್ಳೆಯ ಸ್ಥಿತಿಯಲ್ಲಿರುವ ಕೆಲವು ರೋಗಿಗಳಿಂದ ಅವರು ಬೆಳೆಯುತ್ತಿದ್ದ ಬಾಳೇಕಾಯಿ, ಮೊಟ್ಟೆ ಇತ್ಯಾದಿಗಳನ್ನು ತಂದುಕೊಡಲು ಪ್ರೋತ್ಸಾಹಿಸುತ್ತಿದ್ದ. ಆಸ್ಪತ್ರೆಯ ಆವರಣದಲ್ಲಿ ಹಣ್ಣು, ತರಕಾರಿ ಮತ್ತು ಕೆಲವು ಆಹಾರ ಧಾನ್ಯಗಳನ್ನು ಬಿತ್ತಿ ಬೆಳೆಯುವ ಅಭ್ಯಾಸವನ್ನೂ ಮಾಡಬೇಕಾಯಿತು. ಹೀಗಾಗಿ ಬಾಳೆ, ಮೂಲಂಗಿ, ಅನಾನಸ್, ಕಿತ್ತಳೆ ಮುಂತಾದವುಗಳ ತೋಟವೇ ಅಲ್ಲಿ ತಲೆಯೆತ್ತಿತ್ತು. ರೋಗಿಗಳ ಜೊತೆ ಬರುತ್ತಿದ್ದ ಆರೋಗ್ಯವಂತ ಸಂಬಂಧಿಗಳಿಂದ ಈ ತೋಟಗಳಲ್ಲಿ ಕೆಲಸ ಮಾಡಿಸುತ್ತಿದ್ದ.

## ೯. ಮೊದಲನೇ ಮಹಾಯುದ್ಧ

ಯುರೋಪಿನ ಶೀತ ವಾತಾವರಣದಲ್ಲಿ ಹುಟ್ಟಿ ಬೆಳೆದ ಬಿಳಿಯರಿಗೆ, ಆಫ್ರಿಕಾದ ಉಷ್ಣವಲಯದ ವಾತಾವರಣಕ್ಕೆ ಹೊಂದಿಕೊಳ್ಳುವುದು ತ್ರಾಸದಾಯಕ. ಇಲ್ಲಿಗೆ ಬಂದ ಒಂದೆರಡು ವರ್ಷಗಳಲ್ಲೇ ಹೆಚ್ಚು ಜನ ಅನಾರೋಗ್ಯದಿಂದ ಬಳಲುತ್ತಾರೆ. ವಿಪರೀತ ದೇಹಾಲಸ್ಯ, ಶರೀರ ಬಡಕಲಾಗುವುದು ಮೊದಲಾದ ಚಿಹ್ನೆಗಳು ಕ್ರಮೇಣ

ಪ್ರಕಟವಾಗುತ್ತವೆ. ಶ್ವೈಯಿಟ್ಸರ್‌ದಂಪತಿಗಳೂ ಇವಕ್ಕೆ ಹೊರತಾಗಿರಲಿಲ್ಲ. ಜೊತೆಗೆ ಬಂದಾಗಿನಿಂದ ಎಡೆಬಿಡದೆ ಕಾರ್ಯನಿರತರಾಗಿ ಬೇಸತ್ತುಹೋಗಿದ್ದರು. ಇತರ ಯುರೋಪಿನವರಂತೆ ಅವರೂ ಕೆಲಕಾಲ ತಾಯ್ನಾಡಿಗೆ ತೆರಳಿ ಪುನಃಶ್ಚೇತನ ಪಡೆದು ಬರುವ ಆಲೋಚನೆ ಸಹಾ ಮಾಡಿದ್ದರು.

ಅಷ್ಟರಲ್ಲೇ ಯುರೋಪಿನಲ್ಲಿ ಯುದ್ಧದ ಕಾರ್ಮೋಡಗಳು ಕವಿಯಲು ಆರಂಭಿಸಿದವು. ೧೯೧೪ರ ವಸಂತಋತುವಿನಲ್ಲಿ ಜರ್ಮನ್ ಮತ್ತು ಫ್ರೆಂಚ್‌ರ ನಡುವೆ ಕಾದಾಟದ ಭುಗಿಲೆದ್ದಿತು. ಯುದ್ಧದ ಕಿಡಿ ಆಫ್ರಿಕಾಕ್ಕೆ ಸಿಡಿಯಲು ಬಹಳ ಕಾಲ ಹಿಡಿಯಲಿಲ್ಲ. ಡಾ॥ ಶ್ವೈಯಿಟ್ಸರ್‌ನ ಹುಟ್ಟೂರು ಗನ್ಸ್‌ಬಾಕ್, ಕೆಲವು ವರ್ಷಗಳಿಂದ ಜರ್ಮನ್ನರ ವಶದಲ್ಲಿತ್ತು. ಅದರಿಂದ ಈ ದಂಪತಿಗಳೂ ಜರ್ಮನ್ ಪೌರರೆಂದು ಪರಿಗಣಿಸಲ್ಪಟ್ಟರು. ಅವರೀಗ ಕಾರ್ಯನಿರತರಾಗಿದ್ದ ಲ್ಯಾಂಬರೀನೆ ಫ್ರೆಂಚರ ವಸಾಹತು. ಶ್ವೈಯಿಟ್ಸರ್ ದಂಪತಿಗಳು ಈಗ ಒಂದು ವಿಚಿತ್ರ ಪರಿಸ್ಥಿತಿಯಲ್ಲಿ ಸಿಲುಕಿದಂತಾಯಿತು. ಗೇಬನ್‌ನ ಫ್ರೆಂಚ್ ಆಡಳಿತಗಾರರು ಜರ್ಮನ್ ಪೌರರೆನ್ನಲಾದ ಅವರ ಚಲನ ವಲನಗಳಿಗೆ ನಿರ್ಬಂಧ ವಿಧಿಸಿದರು. ಆಗಸ್ಟ್ ತಿಂಗಳ ೫ನೇ ದಿನ ಫ್ರೆಂಚ್ ಸೈನಿಕರು ಆಸ್ಪತ್ರೆಯನ್ನು ಸ್ವಾಧೀನಕ್ಕೆ ತೆಗೆದುಕೊಂಡು ಶ್ವೈಯಿಟ್ಸರ್ ದಂಪತಿಗಳನ್ನು ಗೃಹಬಂಧನಕ್ಕೊಳಪಡಿಸಿದರು. ಅವರು ರೋಗಿಗಳನ್ನು ಪರೀಕ್ಷಿಸಿ ಚಿಕಿತ್ಸೆಮಾಡುವುದಕ್ಕೂ ತಡೆಯೊಡ್ಡಿದರು !

ಪೌರತ್ವಗಳ ಸಂಕುಚಿತ ಎಲ್ಲೆಗಳನ್ನು ತ್ಯಜಿಸಿ ರೋಗರುಜಿನಗಳ ಬಾಧೆಯಿಂದ ಬಸವಳಿಯುತ್ತಿದ್ದ ನತದೃಷ್ಟ ನೀಗ್ರೋಗಳ ಸೇವೆಗಾಗಿ ಬಹುದೂರ ಪ್ರಯಾಣ ಮಾಡಿ, ಅರಣ್ಯ ಮಧ್ಯದಲ್ಲಿ ಕಾರ್ಯನಿರತನಾದ ಆಲ್ಬರ್ಟ್ ಶ್ವೈಯಿಟ್ಸರ್‌ನಂಥ ವಿಶ್ವಪ್ರಜೆಗೆ ಇದರಿಂದಾದ ಆಘಾತವನ್ನು ವಿವರಿಸುವುದು ಅಸಾಧ್ಯ. ಭಗವಾನ್ ಏಸುಕ್ರಿಸ್ತನ ಅನುಯಾಯಿಗಳೆನಿಸಿದ ಯುರೋಪಿಯನ್ನರೇ ವೈದ್ಯ ದಂಪತಿಗಳನ್ನು ತಮ್ಮ ಉದ್ಧಾರಕ್ಕೆ ಕಳುಹಿಸಿದ್ದರೆಂದು ನಂಬಿದ್ದರು ಮುಗ್ಧ ನೀಗ್ರೋಗಳು. ಈಗ ಅವರೇ ವೈದ್ಯರನ್ನು ಬಂಧಿಸಿ ಚಿಕಿತ್ಸೆ ಮಾಡದಂತೆ ತಡೆ ಮಾಡಿದ್ದರ ಮರ್ಮ ತಿಳಿಯದೆ ಪರಿತಪಿಸಿದರು. ವಿಶ್ವ ರಾಜಕೀಯದ ಪರಿಸ್ಥಿತಿಯ ಅರಿವಿರದ ಆಫ್ರಿಕನ್ನರಿಗೆ ತನ್ನ ಬಂಧನದ ಗುಟ್ಟನ್ನು ವಿವರಿಸುವಲ್ಲಿ ಸ್ವತಃ ಶ್ವೈಯಿಟ್ಸರನೇ ವಿಫಲನಾದ. ಏಸುವಿನ ಅನುಯಾಯಿಗಳು ಪರಸ್ಪರ ಪ್ರೀತಿ ವಿಶ್ವಾಸದಿಂದ ಬಾಳುವೆ ನಡೆಸಬೇಕೆಂದು ಮಿಷನರಿಗಳು ಪ್ರತಿ ದಿನ ಬೋಧಿಸುತ್ತಿದ್ದರು. ಆದರೆ ತಲೆತಲಾಂತರದಿಂದ ಕ್ರೈಸ್ತ ಮತಾವಲಂಬಿಗಳೆನಿಸಿದವರೇ ಈಗ ತಮ್ಮ ತಮ್ಮಲ್ಲೇ ಕಾದಾಡುತ್ತಿದ್ದಾರೆಂದರೆ ಈ ತನಕ ಅವರಿಗೆ ಬೋಧಿಸುತ್ತಿದ್ದುದು ನಿರರ್ಥಕವೆನಿಸಿರಬೇಕು. ದೂರದ ಯುರೋಪಿನಲ್ಲಿ ಕಾದಾಟ ನಡೆಯುತ್ತಿದ್ದರೆ, ಲ್ಯಾಂಬರೀನೆಯಲ್ಲಿ ಶುಶ್ರೂಷೆ ಮಾಡುತ್ತಿರುವ ಅವರ

ಆರಾಧ್ಯ ದೈವ 'ಒಗಂಗಾ'ನಿಗೇಕೆ ಸೈನಿಕ ಪಹರೆ, ಕಾಯಿಲೆಯಿಂದ ನರಳುವವರಿಗೆ ಅವನೇಕೆ ಮದ್ದು ಕೊಡಬಾರದೆಂಬುದು ಅವರು ಬಿಡಿಸಲಾರದ ಒಗಟಾಯಿತು.

ತನ್ನ ವಿದ್ಯಾರ್ಥಿ- ಜೀವನದ ಮೊದಲ ಮೊಂಡುತನದ ದಿನಗಳನ್ನು ಹೊರತು ಪಡಿಸಿದರೆ ಆಲ್ಬರ್ಟ್ ಶ್ವೈಯಿಟ್ಸರ್ ಎಂದೂ ಕೆಲಸವಿಲ್ಲದೆ ನಿರುದ್ಯೋಗಿಯಾಗಿ ಕಾಲ ಕಳೆದವನಲ್ಲ. ಮುಂದೇನು ಮಾಡಬೇಕೆಂಬುದು ಅವರಿಬ್ಬರಿಗೂ ಹೊಳೆಯಲಿಲ್ಲ. ಬಹಳ ದಿನಗಳಿಂದ ಮೂಲೆಯಲ್ಲಿ ಬಿದ್ದಿದ್ದ ಪಿಯಾನೋ ನುಡಿಸುವುದು ಒಂದೆರಡು ದಿನ ಮನಸ್ಸಿಗೆ ಮುದ ನೀಡಿತು. ಕ್ರಮೇಣ ಮನಸ್ಸಿನಲ್ಲಿ ಹುದುಗಿದ್ದ ಧಾರ್ಮಿಕ ವಿಷಯಗಳು ಈಗ ಮೇಲೇಳಲಾರಂಭಿಸಿದವು. ನಾಗರಿಕ ಸಂಸ್ಕೃತಿಯ ಬೆಳವಣಿಗೆ ಮತ್ತು ಅದರ ಅಧೋಗತಿಯ ಬಗೆಗೆ ಅವನ ಅಂತರಾಳದಲ್ಲಿ ಕುದಿಯುತ್ತಿದ್ದ ಭಾವನೆಗಳು ಈಗ ಉಕ್ಕಿ ಹರಿಯುವ ಅವಕಾಶ ಸಿಕ್ಕಿತು. ವಿಚಾರಧಾರೆ ಟಿಸಿಲೊಡೆದು ಬೆಳೆಯಲಾರಂಭಿಸಿತು. ಈ ದಿಸೆಯಲ್ಲಿ ಬಹಳ ದಿನಗಳಿಂದ ಅವನು ಬರೆಯಬೇಕೆಂದಿದ್ದ ''ನಾಗರಿಕತೆಯ ಅಧಃಪತನ ಹಾಗೂ ಅದರ ಉತ್ಥಾನ'' (THE DECAY AND RESTORATION OF CIVILIZATION) ಗ್ರಂಥದ ಕರಡು ಟಿಪ್ಪಣಿಯ ತಯಾರಿಯಲ್ಲಿ ಶ್ವೈಯಿಟ್ಸರ್ ಮುಂದಿನ ದಿನಗಳಲ್ಲಿ ತಲ್ಲೀನನಾದ.

ಲ್ಯಾಂಬರೀನೆಯಲ್ಲಿನ ವೈದ್ಯಕೀಯ ನೆರವು ನಿರ್ಗತಿಕ ನೀಗ್ರೋಗಳಿಗೆ ಅಲ್ಲದೆ, ಆಜುಬಾಜಿನಲ್ಲಿದ್ದ ಬಿಳಿಯರು, ಅಧಿಕಾರಿಗಳು, ವರ್ತಕರಿಗೂ ಸಹಾ ದೊರೆಯುತ್ತಿತ್ತು. ಸೈನ್ಯಾಧಿಕಾರಿಗಳು ಅದನ್ನು ಸ್ಥಗಿತಗೊಳಿಸಿದ್ದರಿಂದ ಅವರಿಗೆಲ್ಲಾ ಅನಾನುಕೂಲಗಳಾದವು. ಸೈನ್ಯಾಧಿಕಾರಿಯ ಆಪ್ತೇಷ್ಟರಿಗೇ ಕಾಯಿಲೆಯಾದಾಗ, ಅಂಥವರನ್ನು ಡಾ|| ಶ್ವೈಯಿಟ್ಸರ್‌ನಲ್ಲಿಗೆ ಕಳುಹಿಸುವುದು ಅನಿವಾರ್ಯವಾಯಿತು. ಮುಂದೆ ಅವನು ಇತರರನ್ನೂ ತಡೆಯಲಾರದಂಥ ಪರಿಸ್ಥಿತಿಯೂ ಉಂಟಾಯಿತು. ಶ್ವೈಯಿಟ್ಸರ್‌ನ ವೈದ್ಯಕೀಯ ನೆರವಿನ ಕೆಲಸ ಹೆಚ್ಚೂ ಕಡಿಮೆ ಮೊದಲಿನ ಸ್ಥಿತಿಗೆ ಬರಲು ಬಹಳ ಕಾಲ ಹಿಡಿಯಲಿಲ್ಲ. ಇದೇ ಸಮಯದಲ್ಲಿ ಪ್ಯಾರಿಸ್‌ನಲ್ಲಿ ಅವನ ಹಿತೈಷಿಗಳಾದ ವೈಡರ್ ಮುಂತಾದವರು ಫ್ರೆಂಚ್ ಸರ್ಕಾರದ ಮೇಲೆ ಒತ್ತಡ ತಂದರು. ಪರಿಣಾಮವಾಗಿ ಲ್ಯಾಂಬರೀನೆಯಲ್ಲಿ ಡಾ|| ಶ್ವೈಯಿಟ್ಸರ್ ಮೊದಲಿನಂತೆ ನಿರಾತಂಕವಾಗಿ ತನ್ನ ವೃತ್ತಿಯನ್ನು ಮುಂದುವರಿಸಿಕೊಂಡು ಹೋಗುವ ಪರಿಸ್ಥಿತಿ ಏರ್ಪಟ್ಟಿತು. ಅಲ್ಲಿ ಹೆಚ್ಚು ಕಡಿಮೆ ಮೊದಲಿನ ವಾತಾವರಣ ಉಂಟಾಯಿತು. ಶ್ವೈಯಿಟ್ಸರ್ ದಂಪತಿಗಳು ಯುರೋಪಿಗೆ ಕೆಲಕಾಲ ಹಿಂದಿರುಗಿ ವಿಶ್ರಾಂತಿ ಪಡೆದು ಬರಬೇಕೆಂಬ ಹಂಬಲ ಈಡೇರದಿದ್ದರೂ ತಮ್ಮ ಕೆಲಸವನ್ನು ಮುಂದುವರೆಸಿಕೊಂಡು ಹೋಗಲು ಮತ್ತೆ ಅವಕಾಶ ದೊರಕಿದ್ದಕ್ಕೆ ಹರ್ಷಿತರಾದರು.

# ೧೦. "ಜೀವೋಪಾಸನೆ"

ಬಾಲ್ಯದಿಂದಲೂ ಧಾರ್ಮಿಕ ವಾತಾವರಣದಲ್ಲಿ ಬೆಳೆದು ತತ್ವ ಮತ್ತು ಧರ್ಮ ಶಾಸ್ತ್ರಗಳ ಪಾಂಡಿತ್ಯವನ್ನು ಗಳಿಸಿದ ಆಲ್ಬರ್ಟ್ ಶ್ವೈಯಿಟ್ಸರ್‌ನಂಥ ವಿಚಾರಪರ ಮೇಧಾವಿ ಹಠಾತ್ತನೆ ವೈದ್ಯನಾಗಿ ಪರಿವರ್ತನೆಯಾಗುವುದು ಪವಾಡವೇ ಸರಿ. ಏಸುಕ್ರಿಸ್ತನ ಬೋಧನೆಗಳನ್ನು ಕೇವಲ ಭಾನುವಾರದ ಪ್ರವಚನಗಳಿಗಾಗಿ ಬಳಸಿಕೊಳ್ಳದೆ ಅವನ್ನು ಅಕ್ಷರಶಃ ಆಚರಿಸುವುದೇ ಆ ಯುಗಪುರುಷನನ್ನು ಗೌರವಿಸುವ ವಿಧಾನವೆನ್ನುವುದರಲ್ಲಿ ಅನುಮಾನವಿಲ್ಲ. ಆಫ್ರಿಕಾದ ಮುಗ್ಧ ದೀನ ದಲಿತರ ಸೇವೆಗಾಗಿ ತನ್ನೆಲ್ಲಾ ಸುಖ ಸಂತೋಷಗಳನ್ನು ಬದಿಗಿಟ್ಟು ಕಾರ್ಯ ಪ್ರವೃತ್ತನಾದ ಮೆಡಿಕಲ್ ಮಿಷನರಿಗಳಲ್ಲಿ ಅವನೇ ಮೊದಲಿಗನೆನ್ನಬಹುದು. ಇಷ್ಟೆಲ್ಲಾ ತ್ಯಾಗ, ಬಲಿದಾನ ಮಾಡಿ ಆಫ್ರಿಕಾದ ಅರಣ್ಯದ ಮಧ್ಯದಲ್ಲಿ ಕಾಯಿಲೆಗಳಿಂದ ನರಳುವವರನ್ನು ಬದುಕಿಸಲು ಹಗಲಿರುಳು ಶ್ರಮಿಸುತ್ತಿರುವ ಅವನ ಕಾರ್ಯ ವಿಧಾನವನ್ನು, ನಾಗರಿಕ ಸಂಸ್ಕೃತಿಯ ಹೆಸರಿನಲ್ಲಿ ಪ್ರಪಂಚದ ಇತರೆಡೆ ನಡೆಯುತ್ತಿರುವ ವಿದ್ಯಮಾನಗಳೊಡನೆ ಹೋಲಿಸಿದಾಗ ಅವನಿಗಾಗುತ್ತಿದ್ದ ನಿರಾಶೆ ಅಷ್ಟಿಷ್ಟಲ್ಲ. ಅವನಂತೆ ಏಸುಕ್ರಿಸ್ತನ ಅನುಯಾಯಿಗಳೆನ್ನಿಸಿಕೊಂಡ ಜನಗಳೇ ಪ್ರತಿದಿನ ಪ್ರಪಂಚದಾದ್ಯಂತ ಹಿಂಸೆ, ದಬ್ಬಾಳಿಕೆ, ಸಾವು-ನೋವುಗಳಿಗೆ ಕಾರಣರಾಗುತ್ತಿದ್ದಾರೆ. ಏಸುವಿಗೆ ಪ್ರಿಯವಾಗಿದ್ದ ಶಾಂತಿ, ಪ್ರೀತಿ, ಭ್ರಾತೃತ್ವ ಇತ್ಯಾದಿ ತತ್ವಗಳಿಗೆ ಅವರೇ ತಿಲಾಂಜಲಿಯಿತ್ತು ಪರಸ್ಪರ ಹೊಡೆದಾಟ, ಯುದ್ಧಗಳಲ್ಲಿ ತೊಡಗಿದ್ದರು. ರಾಷ್ಟ್ರ-ರಾಷ್ಟ್ರಗಳ ನಡುವೆ ಯುದ್ಧ, ಮತಧರ್ಮಗಳ ಹೆಸರಿನಲ್ಲಿ ಆಗುತ್ತಿದ್ದ ಘರ್ಷಣೆಗಳು ಶ್ವೈಯಿಟ್ಸರ್‌ನ ಮನಸ್ಸನ್ನು ಸದಾ ಕೆದಕುತ್ತಿದ್ದವು. ಶಾಂತಿದೂತ ಏಸುಕ್ರಿಸ್ತನ ಅನುಯಾಯಿಗಳೇ ಇಂಥ ಘೋರ ಕೃತ್ಯಗಳಲ್ಲಿ ತೊಡಗುವುದು ಮಹಾಪರಾಧವೆನ್ನುವುದು ಅವನ ಅನಿಸಿಕೆ. ಪರಿಸ್ಥಿತಿ ಅದೇ ರೀತಿಯಲ್ಲಿ ಮುಂದುವರಿದರೆ ಆಧುನಿಕ ನಾಗರಿಕ ಸಂಸ್ಕೃತಿ ಉಳಿದೀತೆ ? ಈ ಸಮಸ್ಯೆಗೆ ಪರಿಹಾರವೇ ಇಲ್ಲವೇ ? ಎಂಬ ಪ್ರಶ್ನೆಗಳು ಅವನನ್ನು ಬಾಧಿಸುತ್ತಿದ್ದವು. ಕ್ರೈಸ್ತ-ಮತ ಧರ್ಮವೇ ಅಲ್ಲದೆ ಇತರ ಹಲವಾರು ಮತಧರ್ಮಗಳ ಗ್ರಂಥಗಳನ್ನು ಮನನ ಮಾಡಿದ್ದ ಶ್ವೈಯಿಟ್ಸರ್‌ಗೆ ಈ ದಿಸೆಯಲ್ಲಿ ಎಲ್ಲೂ ಬೆಳಕು ಕಾಣಿಸುತ್ತಿರಲಿಲ್ಲ. ಯುರೋಪಿನಲ್ಲಿ ಯುದ್ಧ ಆರಂಭವಾಗಿ, ವಿನಾಕಾರಣ ಅವನ ಚಲನ ವಲನಗಳನ್ನು ನಿರ್ಬಂಧಿಸಿ, ರೋಗಿಗಳ ಚಿಕಿತ್ಸೆಯನ್ನೂ ಮಾಡದಂತೆ ತಡೆಗಟ್ಟಿದಾಗಲಂತೂ ಅವನ ಮನಸ್ಸಿನ ತುಮುಲ ಪರಾಕಾಷ್ಠತೆಯನ್ನು ಮುಟ್ಟಿತ್ತು.

ಡಾ॥ ಶ್ವೈಯಿಟ್ಸರ್‌ನ ಮನಸ್ಸು ಈ ರೀತಿ ಗೊಂದಲಮಯವಾಗಿರುವ ಸಂದರ್ಭದಲ್ಲಿ ಒಂದು ಸಾರಿ –ಸೆಪ್ಟೆಂಬರ್‌೧೫, ೧೯೧೫– ತೀವ್ರ ಅಸ್ವಸ್ಥತೆ ಯಲ್ಲಿರುವ ರೋಗಿಯೊಬ್ಬಳನ್ನು ನೋಡಲು ನದಿಯಲ್ಲಿ ಪ್ರಯಾಣ ಹೊರಡ ಬೇಕಾಯಿತು. ಓಗಾವೆ ನದಿಯಲ್ಲಿ ಸುಮಾರು ೧೬೦ ಮೈಲಿಗಳಷ್ಟು ದೂರದ ಏನ್‌ಗೋಮವನ್ನು ತಲುಪಲು ೨-೩ ದಿನ ದೋಣಿಯಲ್ಲಿ ಹೋಗಬೇಕಾಗಿತ್ತು. ದಿನಗಟ್ಟಲೆ ನದಿಯನ್ನು ಸೀಳಿಕೊಂಡು ಹೋಗುತ್ತಿದ್ದ ದೋಣಿಯ ಡೆಕ್‌ನ ಮೂಲೆಯೊಂದರಲ್ಲಿ ಕುಳಿತು ಸದಾ ಯೋಚನಾಕ್ರಾಂತನಾಗಿರುತ್ತಿದ್ದ. ವಿನಾಶದ ಅಂಚಿನಲ್ಲಿದ್ದ ನಾಗರಿಕ ಸಂಸ್ಕೃತಿಯ ಭವಿಷ್ಯ ಅವನನ್ನು ಬಹುಶಃ ಕಾಡುತ್ತಿದ್ದಿರಬೇಕು. ಮೂರನೇ ದಿನ ಸೂರ್ಯಾಸ್ತಮಾನದ ಸಮಯದಲ್ಲಿ ದೋಣಿ ನೀರಾನೆಗಳ ಸಮೂಹವೊಂದನ್ನು ಸಮೀಪಿಸುತ್ತಿತ್ತು. ನದಿಯಲ್ಲಿ ಚಲಿಸುವಾಗ ನೀರಾನೆಗಳನ್ನು ಕೆಣಕುವಂತೆ ಹತ್ತಿರದಲ್ಲಿ ಸಾಗಿದ ದೋಣಿಗಳನ್ನು ಎತ್ತಿಹಾಕಿ ಅನಾಹುತಗಳಾದ ಪ್ರಕರಣಗಳೇನಕವಿದ್ದವು. ನೀರಾನೆಗಳ ತಂಡವನ್ನು ನೋಡಿದ ಪ್ರಯಾಣಿಕರೆಲ್ಲಾ ಭಯಭೀತರಾಗಿ ದೇವರ ಧ್ಯಾನದಲ್ಲಿ ತಲ್ಲೀನರಾದರು. ಶ್ವೈಯಿಟ್ಸರ್ ಇವಾವುದರ ಅರಿವಿಲ್ಲದೆ ಆಲೋಚನಾ ಮಗ್ನನಾಗೇ ಕುಳಿತಿದ್ದ. ಅಂಬಿಗರು ಚಾಣಾಕ್ಷತೆಯಿಂದ ನೀರಾನೆಗಳ ತಂಡದಿಂದ ಆದಷ್ಟು ದೂರದಿಂದಲೇ ಹೆಚ್ಚು ಸದ್ದು ಗದ್ದಲ ಮಾಡದೆ ದೋಣಿಯನ್ನು ಮುಂದೆ ಸಾಗಿಸಿದರು. ಆ ಭಯಂಕರ ಮೃಗಸಂಕುಲವೂ ದೋಣಿಯತ್ತ ಸುಳಿಯಲಿಲ್ಲ. ಅಪಾಯದಿಂದ ಪಾರಾದುದಕ್ಕೆ ಪ್ರಯಾಣಿಕರೆಲ್ಲಾ ಹರ್ಷಿತರಾದರು. ಘಟನೆಯನ್ನು ಕುತೂಹಲದಿಂದ ವೀಕ್ಷಿಸುತ್ತಿದ್ದ ಡಾ॥ ಶ್ವೈಯಿಟ್ಸರ್‌ನ ಮನಃಪಟಲದಲ್ಲಿ ತಕ್ಷಣ ಸಂದೇಶವೊಂದು ಮಿಂಚಿದಂತಾಯಿತು. –REVERENCE FOR LIFE – ''ಜೀವೋಪಾಸನೆ''– ಎಂಬರ್ಥದ ಸಂದೇಶವೆನ್ನಬಹುದು. ಪ್ರತಿಯೊಂದು ಜೀವಿಯನ್ನೂ ಪ್ರೀತಿ, ಗೌರವಾದರಗಳಿಂದ ನೋಡುವ ಭಾವನೆ. ಆ ತನಕ ಅವನ ಮನಸ್ಸನ್ನು ಅದುಮಿ ಹಿಡಿದ ಕಬ್ಬಿಣದ ಬಾಗಿಲು ತೆರೆಯಿತು. ಕತ್ತಲು ದಾರಿಯಲ್ಲಿ ತಡಕಾಡುತ್ತಿದ್ದವನಿಗೆ ಅಪೂರ್ವ ಪ್ರಕಾಶದ ಬೆಳಕು ಮಿಂಚಿ ದಾರಿ ಸುಗಮವಾಯಿತು. ಸಕಲ ಜೀವಾತ್ಮಗಳನ್ನು –ಮನುಷ್ಯರಾಗಲೀ, ನೀರಾನೆಗಳಂಥ ದುಷ್ಟ ಜಂತುಗಳನ್ನಾಗಲೀ– ಹಿಂಸಿಸದೆ ಗೌರವ, ಪ್ರೀತಿ, ಉಪಾಸನಾ ಭಾವನೆಯಿಂದ ಪ್ರತಿಯೊಬ್ಬರೂ ನೋಡುವಂತಾದರೆ ಧರೆಯಲ್ಲಿ ಯುದ್ಧ, ಹೊಡೆದಾಟ, ಅಶಾಂತಿ, ಹಿಂಸಾಪ್ರವೃತ್ತಿಗಳಿಗೆ ಅವಕಾಶಗಳು ಉದ್ಭವಿಸಲಾರ ವೆಂಬುದು ಆಗ ಅವನಿಗಾದ ಅನುಭವದ ತಿರುಳೆನ್ನಬಹುದು. ಈ ಯೋಚನೆ ಹೊಳೆದಾಗ ಐದು ಸಾವಿರ ವರ್ಷಗಳ ಹಿಂದೆ ಭಗವಾನ್ ಬುದ್ಧನ ಬೋಧನೆಗಳನ್ನು ಶ್ವೈಯಿಟ್ಸರ್ ಮೆಲುಕು ಹಾಕುತ್ತಿದ್ದನಂತೆ. ಬೋಧಿ ವೃಕ್ಷದಡಿಯಲ್ಲಿ ಬುದ್ಧನಿಗಾದ

ಜ್ಞಾನೋದಯ ಆಫ್ರಿಕಾದ ಅರಣ್ಯದ ನಡುವಿನ ಓಗಾವೆ ನದಿಯಲ್ಲಿ ದೋಣಿಯಲ್ಲಿ ಚಲಿಸುತ್ತಿದ್ದ ಆಲ್ಬರ್ಟ್ ಶ್ವೈಯಿಟ್ಸರ್‌ಗೂ ಆಯಿತು. ಹೆಚ್ಚು ಕಡಿಮೆ ಈ ಕಾಲದಲ್ಲೇ ಭಾರತದಲ್ಲಿ ಮತ್ತೊಬ್ಬ ಯುಗಪುರುಷ ಸಹಾ ನಮ್ಮ ಪ್ರಾಚೀನ ಧರ್ಮದಲ್ಲಿದ್ದ ಇದೇ ರೀತಿಯ ಅಹಿಂಸಾ ಧರ್ಮದ ತಿರುಳನ್ನು ಬೋಧಿಸುತ್ತಿದ್ದರು.

ಪ್ರಪಂಚದ ಹಲವು ಮತಧರ್ಮಗಳ ಸಾರವನ್ನು ಅರಿತಿದ್ದ ಶ್ವೈಯಿಟ್ಸರ್‌ಗೆ ಭಾರತದ ಹಿಂದು, ಬೌದ್ಧ ಮತ್ತು ಜೈನ ಧರ್ಮಗಳಲ್ಲಿ ಪ್ರಾಣಹಿಂಸೆಯ ಬಗೆಗೆ ಇದ್ದ ವಿರೋಧ ಭಾವನೆಯ ಬಗೆಗೆ ಮೆಚ್ಚಿಗೆ ಇದ್ದುದು ಇಲ್ಲಿ ಗಮನಾರ್ಹ. ಪಾಶ್ಚಿಮಾತ್ಯ ಧಾರ್ಮಿಕ ವಲಯದಲ್ಲಿ ಆ ತನಕ ಪ್ರತಿಪಾದನೆಯಾಗದ ವಿಷಯ ಒಂದನ್ನು ತಾನು ಕಂಡುಹಿಡಿದ ಭಾವನೆ ಅವನಲ್ಲಿ ಅಂದಿನಿಂದಲೇ ಮೂಡಿತು. ಈ ಭಾವನೆಯ ಆಳವಾದ ಚಿಂತನೆ, ವಿಸ್ತರಣೆ ಮತ್ತು ವ್ಯಾಖ್ಯಾನಗಳೇ ಅವನ ಮುಂದಿನ ಜೀವನ ಧ್ಯೇಯವಾಯಿತು. ಸ್ವತಃ ಅವನ ಜೀವನಶೈಲಿಯೂ ಜೀವೋಪಾಸನಾ ತತ್ವಕ್ಕನುಗುಣವಾಗಿ ರೂಪುಗೊಂಡಿತು. ಜೀವೋಪಾಸನಾ ತತ್ವದ ಬಗೆಗೆ ಅವನೇ ಅಲ್ಲದೆ ಹಲವಾರು ಚಿಂತಕರಿಂದ ಬೃಹತ್‌ಗ್ರಂಥಗಳೇ ರಚನೆಯಾದವು.

## ೧೧. ಯುದ್ಧಕೈದಿ - ಮರಳಿ ಯುರೋಪಿಗೆ

ಉಷ್ಣವಲಯದ ಪ್ರತಿಕೂಲ ಹವೆಯ ಪರಿಣಾಮ ಶ್ವೈಯಿಟ್ಸರ್ ದಂಪತಿಗಳಲ್ಲೂ ನಿಧಾನವಾಗಿ ಪ್ರಕಟವಾದವು. ಹೆಲೆನ್ ಅತಿಯಾದ ರಕ್ತಹೀನತೆಯಿಂದ ಬಳಲುತ್ತಿದ್ದಳು. ದೈಹಿಕ - ವ್ಯಾಯಾಮಕ್ಕಾಗಿ, ಅವರು ಮೊದಲು ಸುತ್ತಾಡುತ್ತಿದ್ದರು. ಈಗ ಹೊರಗಡೆ ಹೋಗಲು ಸಾಧ್ಯವಾಗುತ್ತಿರಲಿಲ್ಲ. ಅವರ ಚಟುವಟಿಕೆಗಳನ್ನು ಮಿತಗೊಳಿಸಿದ ನಂತರ ಸಮುದ್ರ ತೀರದ ಕೇಪ್ ಲೋಪೇಜ್‌ಗೆ ಹೋಗಿ ಕೆಲ ಸಮಯ ವಿಶ್ರಾಂತಿ ಪಡೆದು ಬರುವ ಯೋಚನೆ ಮಾಡಿದರು. ಜುಲೈ ೧೯೧೭ರಲ್ಲಿ ಲ್ಯಾಂಬರೀನೆಯ ಸೈನ್ಯಾಧಿಕಾರಿಯ ಅಪ್ಪಣೆ ಪಡೆದು ಅಲ್ಲಿಗೆ ತೆರಳಿದರು. ತಮ್ಮ ವಾಸಕ್ಕೆ ಕುಟೀರ ಒಂದನ್ನು ಖರೀದಿಸಿ ಅದರಲ್ಲಿ ವಾಸಮಾಡುತ್ತಿದ್ದರು. ಜತೆಗೆ ಶ್ವೈಯಿಟ್ಸರ್ ತನ್ನ ಬರವಣಿಗೆಯ ಕೆಲಸವನ್ನೂ ಮುಂದುವರಿಸಿದ.

ಆರೋಗ್ಯ ಸುಧಾರಣೆಯ ನಂತರ ಲ್ಯಾಂಬರೀನೆಗೆ ಹಿಂತಿರುಗಿದಾಗ ಇಮ್ಮಡಿ ಕೆಲಸ ಕಾದಿತ್ತು. ಲ್ಯಾಂಬರೀನೆಯ ಸುತ್ತಮುತ್ತ ನಡೆಯುತ್ತಿದ್ದ ಕಾಳಗದಲ್ಲಿ ಗಾಯಗೊಂಡವರನ್ನೂ ಸಹ ಇಲ್ಲಿಯ ಆಸ್ಪತ್ರೆಗೆ ತರುತ್ತಿದ್ದರು. ಯುದ್ಧ ಲ್ಯಾಂಬರೀನೆಯ ಸಮೀಪದವರೆಗೂ ವಿಸ್ತರಿಸಿ, ಆಸ್ಪತ್ರೆಯ ಕಟ್ಟಡಗಳಿಗೂ ಗುಂಡು ತಗಲುತ್ತಿದ್ದವು. ಆದರೂ ಶ್ವೈಯಿಟ್ಸರ್ ಎದೆಗುಂದದೆ ತನ್ನ ವೈದ್ಯಕೀಯ ಸೇವೆಯನ್ನು

ಮುಂದುವರೆಸಿದ. ಸೈನ್ಯಾಧಿಕಾರಿ ಹಠಾತ್ತಾಗಿ ಆ ಪ್ರದೇಶದ ಸಂರಕ್ಷಣಾ ವ್ಯವಸ್ಥೆಗಳನ್ನು ಇನ್ನೂ ಬಿಗಿಗೊಳಿಸಿದ, ಡಾ॥ ಶ್ವೈಯಿಟ್ಸರ್ ಸೇರಿದಂತೆ ಅಲ್ಲಿದ್ದ ವಿದೇಶೀಯರನ್ನು ಮತ್ತೆ ಯುದ್ಧ-ಕೈದಿಗಳೆಂದು ಘೋಷಿಸಿದ. ಅವರನ್ನೆಲ್ಲಾ ಆ ಸ್ವಲ್ಪ ಸಮಯದಲ್ಲೇ ಯುರೋಪಿಗೆ ರವಾನಿಸುವ ತನ್ನ ನಿರ್ಧಾರವನ್ನೂ ಪ್ರಕಟಿಸಿದ.

ಈ ಸಮಯದಲ್ಲೇ ಶ್ವೈಯಿಟ್ಸರ್‌ಗೆ ಯುರೋಪಿನ ದಾರುಣವಾರ್ತೆಯೊಂದು ಬಂದಿತು. ಗನ್ಸ್‌ಬಾಕ್‌ನಲ್ಲಿ ನಡೆಯುತ್ತಿದ್ದ ಕಾಳಗದಲ್ಲಿ ಅವನ ತಾಯಿ ಕುದುರೆಗಳ ಕಾಲ್ತುಳಿತಕ್ಕೆ ಸಿಕ್ಕಿ ಇಹಲೋಕವನ್ನು ತ್ಯಜಿಸಿದ್ದಳು. ಶ್ವೈಯಿಟ್ಸರ್ ದಂಪತಿಗಳಿಗೆ ಒಂದಾದ ಮೇಲೊಂದರಂತೆ ಆಗುತ್ತಿದ್ದ ಆಘಾತಗಳನ್ನು ಸಹಿಸುವುದು ಅತ್ಯಂತ ಕಷ್ಟಕರ ವಾಗಿದ್ದರೂ, ಅವರೇನೂ ಮಾಡಲಾಗದ ನಿಸ್ಸಹಾಯಕರಾಗಿದ್ದರು. ಕೋಲ್ಮಾರ್‌ನಲ್ಲಿ ಕಡೆಸಾರಿ ಬೀಳ್ಕೊಡುವಾಗ ತಾಯಿ ಕೈಬೀಸದೇ ಕಣ್ಣೀರು ಸುರಿಸುತ್ತಾ ನಿಂತಿದ್ದ ದೃಶ್ಯ ಅವರ ಮುಂದೆ ಹಾದುಹೋಯಿತು. ದುಃಖ ಉಮ್ಮಳಿಸಿ ಬಂತು. ಮೌನ ಪ್ರಾರ್ಥನೆಯೊಂದೇ ಅವರಿಗಿದ್ದ ಸಂತಾಪದ ದಾರಿ.

ಅಂತೂ ಶ್ವೈಯಿಟ್ಸರ್ ದಂಪತಿಗಳು ನಿರೀಕ್ಷಿಸಿದ್ದ ದುರ್ದಿನಗಳು ಅಂತಿಮವಾಗಿ ಎದುರಾದವು. ಕೈದಿಗಳಾಗಿ ಯುರೋಪಿನತ್ತ ಹೊರಡುವ ಸಿದ್ಧತೆಗಳನ್ನು ಮಾಡಿಕೊಂಡರು. ಜತೆಯಲ್ಲಿ ತೆಗೆದುಕೊಂಡು ಹೋಗಬೇಕಾಗಿದ್ದ ಸಾಮಾನು-ಸರಂಜಾಮುಗಳನ್ನು ಗಂಟು ಮೂಟೆಯಾಗಿ ಕಟ್ಟಿಕೊಂಡರು. ಅವರು ಹೊರಡುವ ಹಿಂದಿನ ಸಾಯಂಕಾಲವೂ ಹರ್ನಿಯದಿಂದ ಕರುಳು ತಡೆಯಾದ ನೀಗ್ರೋ ಒಬ್ಬ ಬಂದ. ಅವನಿಗೆ ಸೈನ್ಯಾಧಿಕಾರಿಯ ಅಪ್ಪಣೆ ಪಡೆದು ತುರ್ತು ಶಸ್ತ್ರಚಿಕಿತ್ಸೆ ಮಾಡಬೇಕಾಯಿತೆಂದರೆ, ಅಲ್ಲಿ ವೈದ್ಯಕೀಯ ನೆರವಿನ ಅವಶ್ಯಕತೆ ಎಷ್ಟಿತ್ತೆಂಬುದರ ಅರಿವಾಗಬಹುದು.

ಶ್ವೈಯಿಟ್ಸರ್ ದಂಪತಿಗಳು ಲ್ಯಾಂಬರೀನೆಗೆ ಬಂದಾಗಿನಿಂದಲೂ ಸಾವಿರಾರು ಜನ ನಿರ್ಗತಿಕ ಆಫ್ರಿಕನ್ನರನ್ನು ಭಯಂಕರ ರೋಗ-ರುಜಿನಗಳಿಂದ ಕಾಪಾಡಿದ್ದರು. ನೂರಾರು ಜನರನ್ನು ಸಾವಿನ ದವಡೆಯಿಂದ ಹೊರಗೆಳೆದು ರಕ್ಷಿಸಿದ್ದರು. ಆಧುನಿಕ ನಾಗರಿಕತೆಯ ಭ್ರಾತೃತ್ವ, ದಯೆ, ಪ್ರೀತಿ ಸೌಹಾರ್ದ ಜೀವನ ಕ್ರಮವನ್ನು ಅನಾಗರಿಕ ನೀಗ್ರೋಗಳಿಗೆ ತೋರಿಸಿಕೊಟ್ಟಿದ್ದರು. ಅಲ್ಲಿ ನೆಲೆಸಿದ್ದ ನೂರಾರು ಜನ ಬಿಳಿಯರಿಗೂ ತ್ಯಾಗ ಮತ್ತು ಸೇವಾ ಮನೋಭಾವಗಳ ಪ್ರತ್ಯಕ್ಷದರ್ಶನ ಮಾಡಿಸಿದ್ದರು. ಕಷ್ಟಕಾಲದಲ್ಲೂ ಸಹಾಯ ಮಾಡಿ ಅವರೆಲ್ಲರ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿದ್ದರು. ತಾವೇ ಸಂಗ್ರಹಿಸಿದ ಹಣದಲ್ಲಿ ಆಸ್ಪತ್ರೆಯನ್ನು ನಿರ್ಮಿಸಿದ್ದರು ! ಯಾವ ಪ್ರತಿಫಲಾಪೇಕ್ಷೆ ಇಲ್ಲದೆ ಔಷಧೋಪಚಾರಗಳನ್ನು ಮಾಡಿ, ದೀನ- ದಲಿತರ ಮಾನವೀಯ ಸೇವೆಯಲ್ಲಿ ತೊಡಗಿಕೊಂಡಿದ್ದರು. ಆಸ್ಪತ್ರೆಗೆ ಬರುವವರ

ಉಪಯೋಗಕ್ಕಾಗಿ ತರಕಾರಿ, ಹಣ್ಣು-ಹಂಪಲುಗಳ ತೋಟಗಳನ್ನು ಬೆಳೆಸಿದ್ದರು. ಸ್ವತಃ ಅವರದಾಗಿರದ ತಪ್ಪಿಗಾಗಿ ಅವನ್ನೆಲ್ಲಾ ತ್ಯಜಿಸಿ ಯುದ್ಧ-ಕೈದಿಗಳಾಗಿ ಮತ್ತೆ ಯುರೋಪಿಗೆ ಹಿಂದಿರುಗಬೇಕಾದ ವಿಪರ್ಯಾಸ ಆ ಕಾಲದ ಸಾಮಾಜಿಕ ಹಾಗೂ ರಾಜಕೀಯ (ಈ ಕಾಲದ್ದೂ ಸಹ) ಪರಿಸ್ಥಿತಿಗೆ ಹಿಡಿದ ಕೈಗನ್ನಡಿಯಾಗಿತ್ತು. ಅವರನ್ನು ದೇವರೆಂದು ನಂಬಿದ್ದ ಮುಗ್ಧ ನೀಗ್ರೋಗಳು ಅನಾಥರಾದರು.

ಇತರ ಹಲವಾರು ಯುದ್ಧ-ಕೈದಿಗಳ ಜತೆ ಶ್ವೈಯಿಟ್ಸರ್ ದಂಪತಿಗಳನ್ನು ಕೇಪ್ ಲೋಪೇಜ್‌ಗೆ ಸಾಗುಹಾಕಲಾಯಿತು. ಮುಂದೆ ಯುರೋಪಿನ ಬೋರ್ಡೋ ಬಂದರಿಗೆ ಹೋಗುವ ಹಡಗಿನಲ್ಲಿ ಅತ್ಯಂತ ಅಪಾಯಕಾರಿ ಯುದ್ಧ-ಕೈದಿಗಳೆಂದು ವರ್ಗೀಕರಿಸಿ ಇತರರಿಂದ ಬೇರ್ಪಡಿಸಿ ಪ್ರತ್ಯೇಕವಾದ ಕಾವಲಿನಲ್ಲಿ ಅವರನ್ನು ಸಾಗಿಸುವ ವ್ಯವಸ್ಥೆಯಾಗಿತ್ತು!

ಆ ವರ್ಷ ನವೆಂಬರ್ (೧೯೧೭)ರಲ್ಲಿ ಅವರೆಲ್ಲಾ ಬೋರ್ಡೋ ಬಂದರನ್ನು ತಲುಪಿದಾಗ ಕೊರೆಯುವ ಚಳಿಗಾಲ. ನಾಲ್ಕು ವರ್ಷಕ್ಕೂ ಹೆಚ್ಚು ಕಾಲ ಉಸಿರು ಗಟ್ಟುವ ಸೆಕೆಯ ವಾತಾವರಣದಲ್ಲಿ ಕಾಲಕಳೆದವರಗೆ ಈ ಹಠಾತ್ ಬದಲಾವಣೆ ಸಹಿಸಲಸದಳವಾಗಿತ್ತು. ಚಳಿಯಿಂದ ರಕ್ಷಣೆಗೆ ಉಣ್ಣೆಯ ಬಟ್ಟೆ-ಬರೆಗಳೂ ಅವರಲ್ಲಿರಲಿಲ್ಲ. ಸೇನಾಪಡೆಗಳು ಒಂದೆಡೆಯಿಂದ ಇನ್ನೊಂದೆಡೆಗೆ ಹೋಗುವಾಗ ಹಂಗಾಮಿಯಾಗಿ ತಂಗಲು ನಿಯಮಿತವಾದ ಬ್ಯಾರೆಕ್ಕು, ಅವರೆಲ್ಲರ ತಂಗುದಾಣ ವಾಯಿತು. ಅಶೌಚದ ಕೂಪದಲ್ಲಿ ಅವರೆಲ್ಲಾ ಚಳಿಯಿಂದ ಗಡಗಡ ನಡಗುತ್ತಿದ್ದರು. ಲ್ಯಾಂಬರೀನೆಯಲ್ಲೇ ತಗುಲಿಸಿಕೊಳ್ಳದಿದ್ದ ಆಮಶಂಕೆ ಶ್ವೈಯಿಟ್ಸರ್ ದಂಪತಿಗಳಿಗೆ, ಅಲ್ಲಿದ್ದ ಕೇವಲ ಮೂರು ವಾರಗಳಲ್ಲೇ ಬೆನ್ನು ಹತ್ತಿತು. ಅವರಲ್ಲಿದ್ದ ಮದ್ದುಗಳು ಈಗ ಅವರಿಗೇನೂ ಫಲಕಾರಿಯಾಗಲಿಲ್ಲ. ಹೆಲೆನ್ ಮುಂದೆ ತನ್ನ ಜೀವಮಾನವೆಲ್ಲಾ ಬಳಲಿ ಬಸವಳಿದ ಕ್ಷಯರೋಗವನ್ನು ಪಡೆದದ್ದು ಈ ಬ್ಯಾರೆಕ್ಕಿನ ವಾಸ್ತವ್ಯದಲ್ಲೇ ಎಂದು ನಂಬಲಾಗಿದೆ. ಶ್ವೈಯಿಟ್ಸರ್‌ಗೆ ತಗುಲಿದ್ದ ಆಮಶಂಕೆ ಕೂಡ ಮುಂದೆ ಬಹಳ ಕಾಲ ಬಳಲುವಂತೆ ಮಾಡಿತು.

ಮೂರು ವಾರಗಳನ್ನು ಕಳೆದ ನಂತರ ಅವರನ್ನೆಲ್ಲಾ ಪೈರೆನ್ನೀಸ್ ಪರ್ವತ ಪ್ರದೇಶದ ಗೆರೈಸನ್ ಎಂಬ ಯುದ್ಧಕೈದಿಗಳ ತಂಗುದಾಣಕ್ಕೆ ಕಳುಹಿಸಿದರು.

ಗೆರೈಸನ್‌ನಲ್ಲಿ ಅವರನ್ನಿಟ್ಟಿದ್ದ ವಠಾರ ಹಿಂದೆ ಕ್ರಿಶ್ಚಿಯನ್ ಸನ್ಯಾಸಿಗಳ ಮಠವಾಗಿತ್ತಂತೆ. ಹಿಂದಿನ ಸಾರಿ ಅಲ್ಲಿ ತಂಗಿದ್ದವರು ಅದನ್ನು ಬಹಳಷ್ಟು ಶುಚಿಯಾಗಿ ಇಟ್ಟಿದ್ದರು. ವಠಾರದಲ್ಲಿ ತಕ್ಕಮಟ್ಟಿಗೆ ಬೆಚ್ಚಗಿರುವ ವ್ಯವಸ್ಥೆ ಕೂಡಾ ಇತ್ತು. ಅದರ ಆಡಳಿತಾಧಿಕಾರಿ ದಯಾಳುವಾಗಿದ್ದ. ಕೈದಿಗಳಿಗೆ ಉತ್ತಮ ಆಹಾರ ಒದಗಿಸುವ ಏರ್ಪಾಡು ಮಾಡಿದ್ದ. ಶ್ವೈಯಿಟ್ಸರ್ ದಂಪತಿಗಳಿಗೆ ಪ್ರತ್ಯೇಕ ಕೊಠಡಿಯನ್ನೂ ಸಹಾ

ಒದಗಿಸಿದ್ದ. ಬೋರ್ಡೋದಲ್ಲಿ ಚಳಿಯಿಂದ ನಡುಗುತ್ತಿದ್ದವರಿಗೆ ಇಲ್ಲಿಯ ಪರ್ವತ ಶ್ರೇಣಿಯಿಂದ ಬೀಸುತ್ತಿದ್ದ ಹಿತಕರ ಗಾಳಿ ಚೇತರಿಸಿ ಕೊಳ್ಳಲು ಸಹಾಯ ಮಾಡಿತು.

ಈ ತಂಗುದಾಣದಲ್ಲಿ ಜೀವನದ ಹಲವಾರು ರಂಗಗಳಲ್ಲಿ ಪರಿಣತರಾದ ಜನರಿದ್ದರು. ಒಬ್ಬರ ಜೀವಮಾನದಲ್ಲೆಲ್ಲಾ ಸಂಧಿಸಲಾಗದ ಜಾತಿ, ವರ್ಣ ಮತ್ತು ಕಸುಬುಗಳ ಜನರ ಸಮೂಹವೇ ಅಲ್ಲಿ ಇತ್ತು. ಮೊದಮೊದಲು ಮಾಡಲು ಉದ್ಯೋಗವಿಲ್ಲದೆ ಅಲ್ಲಿನ ವಾತಾವರಣ ಬೇಸರ ಹುಟ್ಟಿಸುವಂತಿತ್ತು. ಶ್ವೈಯಿಟ್ಸರ್ ಲ್ಯಾಂಬರೀನೆಯಲ್ಲಿ ಬೇರೊಬ್ಬರಿಗೆ ಕೊಟ್ಟಿದ್ದ ಮದ್ದುಗಳನ್ನು ಉಪಯೋಗಿಸಿ ಚೇತರಿಸಿಕೊಂಡಿದ್ದ ಇಂಜಿನಿಯರ್ ಒಬ್ಬರು ಅವನನ್ನು ಗುರುತಿಸಿ ತಮ್ಮ ಕೃತಜ್ಞತೆ ಸೂಚಿಸಿದರು. ಅಲ್ಲಿ ಲಭ್ಯವಿದ್ದ ಮರದ ತುಂಡುಗಳನ್ನು ಉಪಯೋಗಿಸಿ ಅವನಿಗೊಂದು ಜೊತೆ ಕುರ್ಚಿ-ಮೇಜುಗಳನ್ನು ಮಾಡಿಕೊಟ್ಟರು. ಇದರಿಂದ ಅವನ ಬರೆಯುವ ಮತ್ತು ಸಂಗೀತ ನುಡಿಸುವ ಹವ್ಯಾಸಕ್ಕೆ ಮತ್ತೆ ಜೀವ ಬಂದಂತಾಯಿತು. ಅಲ್ಲಿದ್ದ ಕೆಲವು ಜಾನಪದ ಕಲಾವಿದರು ಯುರೋಪಿನಲ್ಲಿದ್ದಾಗ ಶ್ವೈಯಿಟ್ಸರ್‌ನ ಸಂಗೀತ ವಿದ್ವತ್ತನ್ನು ಕೇಳಿ ತಿಳಿದಿದ್ದವರು. ಅವರ ಗುಂಪಿನಲ್ಲಿ ಸಂಗೀತ ನುಡಿಸುವುದಕ್ಕೆ ಸೇರಿಸಿಕೊಂಡರು. ಅವನ ನಡೆ-ನುಡಿ ವಿದ್ವತ್ತುಗಳನ್ನು ಮೆಚ್ಚಿದ ಆಡಳಿತಾಧಿಕಾರಿ ಯುದ್ಧ-ಕೈದಿಗಳು ಅಸ್ವಸ್ಥರಾದಾಗ ಚಿಕಿತ್ಸೆ ಮಾಡುವ ಅವಕಾಶವನ್ನು ಒದಗಿಸಿದ. ಕೈದಿಯಾಗಿ ನಿರ್ಬಂಧದಲ್ಲಿದ್ದರೂ, ಡಾ॥ ಶ್ವೈಯಿಟ್ಸರ್ ತನ್ನ ಮೊದಲಿನ ಚಟುವಟಿಕೆಗಳನ್ನು ಮತ್ತೆ ನಡೆಸುವಂತಾಗಿ ಹರ್ಷಿತನಾದ.

ಗೆರೈಸನ್‌ದ ತಂಗುದಾಣಕ್ಕೆ ಬಂದ ನಂತರ ಅವರು ತಮ್ಮ ತಮ್ಮ ಮನೆಗಳಿಗೆ ಹಾಗೂ ಸ್ನೇಹಿತರಿಗೂ ಪತ್ರ ವ್ಯವಹಾರ ಮಾಡುವ ಸೌಲಭ್ಯ ಒದಗಿಸಿದ್ದರು. ಪ್ಯಾರಿಸ್‌ನಲ್ಲಿದ್ದ ಅವರ ಹಿತೈಷಿಗಳಿಗೆ ಶ್ವೈಯಿಟ್ಸರ್ ದಂಪತಿಗಳಂಥ ಮಹೋನ್ನತ ವ್ಯಕ್ತಿಗಳು ಮಿಲಿಟರಿ-ಬ್ಯಾರಕ್ಕುಗಳಲ್ಲಿ ವ್ಯರ್ಥ ಜೀವನ ನಡೆಸುತ್ತಿರುವುದು ತಿಳಿಯಿತು. ಕೆಲವರು ಅವರ ಬಿಡುಗಡೆಗಾಗಿ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಆದರೆ ಅದಕ್ಕಿಂತ ಉತ್ತಮ ಸ್ಥಳಕ್ಕೆ ಬದಲಾಯಿಸುವದಕ್ಕೆ ಒಪ್ಪಿಗೆ ಪಡೆಯುವುದರಲ್ಲಿ ಯಶಸ್ವಿಯಾದರು. ಗೆರೈಸನ್‌ರ ವಾತಾವರಣಕ್ಕೆ ಹೊಂದಿಕೊಂಡಿದ್ದ ಶ್ವೈಯಿಟ್ಸರ್ ದಂಪತಿಗಳು ವರ್ಗಾವಣೆಗೆ ಸಮ್ಮತಿಸದೆ ಅಲ್ಲೇ ಮುಂದುವರಿದರು.

ಗೆರೈಸನ್‌ನ ತಂಗುದಾಣದಲ್ಲೇ ಮುಂದುವರಿಯುವ ಅವರ ಆಸೆ ಬಹಳ ಕಾಲ ಉಳಿಯಲಿಲ್ಲ. ವಸಂತಕಾಲ ಹತ್ತಿರವಾಗುತ್ತಿದ್ದಂತೆ ಸೇಂಟ್‌ರೆಮಿ ಎಂಬಲ್ಲಿನ ಇನ್ನೊಂದು ತಂಗುದಾಣಕ್ಕೆ ಬದಲಾಯಿಸುವ ಏರ್ಪಾಡಾಯಿತು. ಶ್ವೈಯಿಟ್ಸರ್ ಮತ್ತು ಸಂಗಡಿಗರಿಗೆ ಈ ಬದಲಾವಣೆ ಇಷ್ಟವಿರಲಿಲ್ಲ. ಆಡಳಿತಾಧಿಕಾರಿಯೂ ಅವನ ನಡತೆ ಮತ್ತು ಅವನ ಉಪಕಾರಕ್ಕೆ ಮಾರುಹೋಗಿ ಅಲ್ಲಿಂದ ಕಳುಹಿಸಲು ತಯಾರಿರಲಿಲ್ಲ.

ಆದರೆ ಮೇಲಿನವರ ಹುಕುಂ ಮೀರಲಾರದೆ ಅವರೆಲ್ಲಾ ಒಂದು ದಿನ ಸೇಂಟ್‌ರೆಮಿಗೆ ಹೊರಡಲೇಬೇಕಾಯಿತು.

ಸೇಂಟ್‌ರೆಮಿಯ ತಂಗುದಾಣದ ವಾತಾವರಣವೂ ಹಿತಕರವಾಗೇ ಇತ್ತು. ಡಾ|| ಶ್ವೈಯಿಟ್ಸರ್‌ನ ಪರಿಚಿತರನೇಕರು ಅಲ್ಲಿದ್ದು ಕಾಲ ಕಳೆಯುವುದು ಸುಲಭ ವಾಗಿತ್ತು. ಆಡಳಿತಾಧಿಕಾರಿಯೂ ಒಳ್ಳೆಯ ಸ್ವಭಾವದವನಾಗಿದ್ದು ಅವರನ್ನೆಲ್ಲಾ ಚೆನ್ನಾಗಿ ನೋಡಿಕೊಳ್ಳುತ್ತಿದ್ದನು. ಡಾ|| ಶ್ವೈಯಿಟ್ಸರ್‌ನ ವೈದ್ಯಕೀಯ ಸಹಾಯವೂ ಕೈದಿಗಳಿಗೆ ದೊರೆಯುವಂತೆ ಮಾಡಿದ್ದನು. ಅವರನ್ನೆಲ್ಲಾ ಆಡಳಿತಾಧಿಕಾರಿಯೇ ಹೊರಗಿನ ಗಾಳಿ ಸಂಚಾರಕ್ಕೆ ಕರೆದುಕೊಂಡು ಹೋಗುತ್ತಿದ್ದನು. ಬೋರ್ಡೋ ತಂಗುದಾಣದಲ್ಲಿ ತಗುಲಿದ್ದ ಆಮಶಂಕೆ ಇಲ್ಲಿ ಉಲ್ಬಣವಾಗಿ ಶ್ವೈಯಿಟ್ಸರ್‌ನ ಆರೋಗ್ಯವನ್ನು ಇನ್ನೂ ಹದಗೆಡಿಸಿತು. ಹೆಲೆನ್ ಕೂಡ ಬಹಳ ನಿಶ್ಶಕ್ತಿಯಿಂದ ಬಳಲಿದಳು.

ಪ್ಯಾರಿಸ್‌ನಲ್ಲಿ ಡಾ|| ಶ್ವೈಯಿಟ್ಸರ್‌ನ ಹಿತೈಷಿಗಳು ಬಿಡುಗಡೆಗಾಗಿ ನಡೆಸುತ್ತಿದ್ದ ಪ್ರಯತ್ನಗಳು ಅವರು ಸೇಂಟ್ ರೆಮಿಗೆ ಬಂದ ಕೆಲವೇ ತಿಂಗಳುಗಳಲ್ಲಿ ಫಲಕಾರಿ ಯಾದುವು. ಶತ್ರುಪಕ್ಷದ ವಶದಲ್ಲಿದ್ದ ಕೆಲವು ಕೈದಿಗಳ ಬದಲಿಗೆ ಇವರನ್ನು ಬಿಡುಗಡೆ ಮಾಡುವ ಒಪ್ಪಂದವಾಯಿತು.

ಜುಲೈ ಹನ್ನೆರಡರ ೧೯೧೮ರ ರಾತ್ರಿ ಅವರನ್ನೆಲ್ಲಾ ಎಬ್ಬಿಸಿ ಬಿಡುಗಡೆಯ ಕಾಗದ ಪತ್ರಗಳನ್ನು ನೀಡಿದರು. ರಾತ್ರಿ ಸಮಯದಲ್ಲೇ ಅವರನ್ನು ನಡೆಸಿಕೊಂಡು ಟೆರೆಸ್‌ಕಾನ್ ರೈಲ್ವೆ ನಿಲ್ದಾಣಕ್ಕೆ ಕರೆದೊಯ್ದರು. ದೈಹಿಕವಾಗಿ ಬಳಲಿದ್ದ ಹೆಲೆನ್ ಮತ್ತು ಶ್ವೈಯಿಟ್ಸರ್ ಅವರ ಗಂಟು ಮೂಟೆಗಳನ್ನು ಹೊತ್ತುಕೊಂಡು ಸಾಗಿಸುವುದು ಅತ್ಯಂತ ಪ್ರಯಾಸದಾಯಕವಾಗಿತ್ತು. ಅವುಗಳನ್ನು ಬೀದಿಯಲ್ಲಿ ಎಳೆದುಕೊಂಡು ಹೋಗುವುದನ್ನು ಗಮನಿಸಿದ ಅಂಗವಿಕಲನೊಬ್ಬ ಅವರ ಕೆಲವು ಸಾಮಾನುಗಳನ್ನು ಸಾಗಿಸಲು ಮುಂದಾದ. ಶ್ವೈಯಿಟ್ಸರ್ ಎಷ್ಟು ನಿರಾಕರಿಸಿದರೂ ಅವನೂ ಕೆಲವು ಸಾಮಾನುಗಳನ್ನು ಕುಂಟುತ್ತಲೇ ಹೊತ್ತು ರೈಲ್ವೆ ನಿಲ್ದಾಣಕ್ಕೆ ಸಾಗಿಸಿದ ದೃಶ್ಯ ಶ್ವೈಯಿಟ್ಸರ್‌ನ ಮನಸ್ಸನ್ನು ಕಲಕಿತು. ಕಷ್ಟದಲ್ಲಿರುವ ಯಾರಿಗಾದರೂ ತಾನೂ ಸಹಾಯ ಮಾಡಬೇಕೆಂಬ ನೀತಿಯನ್ನು ಆ ದಿನ ಕಲಿತ ಶ್ವೈಯಿಟ್ಸರ್, ಮುಂದೆ ತನ್ನ ಜೀವನದಲ್ಲಿ ಅಳವಡಿಸಿಕೊಂಡಿದ್ದ. ಹಲವು ಬಾರಿ ತನ್ನ ಬಂಧುಗಳು, ಸ್ನೇಹಿತರೇ ಅಲ್ಲದೆ, ಅಪರಿಚಿತರ ಸಾಮಾನುಗಳನ್ನೂ ಶ್ವೈಯಿಟ್ಸರ್ ಸಾಗಿಸುವುದು ಮುಂದೆ ಸರ್ವೇಸಾಮಾನ್ಯ ಸಂಗತಿಯಾಯಿತು.

ಸ್ವಿಟ್ಸರ್‌ಲೆಂಡಿನ ಗಡಿಯನ್ನು ತಲುಪಲು ಅವರು ಹಲವು ದಿನಗಳು ಪ್ರಯಾಣ ಮಾಡಿದರು. ದಾರಿಯುದ್ದಕ್ಕೂ ಯುದ್ಧ-ಕೈದಿಗಳಿರುವ ಬೋಗಿಗಳ ಜೊಡಣೆ

ಆಗುತ್ತಲೇ ಇತ್ತು. ಜುಲೈ ಹದಿನೈದರ ಬೆಳಿಗ್ಗೆ ಜೂರಿಕ್ ರೈಲ್ವೆ ನಿಲ್ದಾಣದಲ್ಲಿ ಕೈದಿಗಳ ಬದಲಾವಣೆಯಾಯಿತು. ಶ್ವೈಯಿಟ್ಸರ್ ದಂಪತಿಗಳು ರೈಲಿನಿಂದ ಹೊರಬರುತ್ತಿದ್ದಂತೆ ಹಲವಾರು ಸ್ನೇಹಿತರು ಅಲ್ಲಿ ನೆರೆದಿದ್ದು ಅವರನ್ನು ಸ್ವಾಗತಿಸಿದ್ದು, ಅತ್ಯಾನಂದವನ್ನು ಉಂಟುಮಾಡಿತ್ತು.

ಜ್ಯೂರಿಕ್‌ನಲ್ಲಿ ಶ್ವೈಯಿಟ್ಸರ್ ದಂಪತಿಗಳನ್ನು ನೋಡಿದವರೊಬ್ಬರು ಅವನ ತಂದೆಗೆ ತಂತಿ ಮೂಲಕ ಸಮಾಚಾರ ಮುಟ್ಟಿಸಿದರು. ತಂದೆಯೂ ಕೂಡಲೇ ಹೊರಟು ಸ್ಟ್ರಾಸ್‌ಬರ್ಗ್ ಹತ್ತಿರದಲ್ಲಿದ್ದ ಮಗಳ ಊರಲ್ಲಿ ಬಂದು ಕಾಯ್ದುಕೊಂಡಿದ್ದ. ಯುದ್ಧದ ಹಾವಳಿಯಿಂದ ಆದ ವಿನಾಶದ ದೃಶ್ಯಗಳು ದಾರಿಯುದ್ದಕ್ಕೂ ಶ್ವೈಯಿಟ್ಸರ್‌ನನ್ನು ಮತ್ತೆ ಚಿಂತೆಗೀಡು ಮಾಡಿದವು. ಉಣ್ಣಲು ಉಡಲು ಆಹಾರ ಬಟ್ಟೆಗಳಿರದಿದ್ದ ಜನರ ಪಾಡು ಆಫ್ರಿಕಾದ ಜನರನ್ನು ಜ್ಞಾಪಕಕ್ಕೆ ತರುವಂತಿದ್ದವು.

ಹೆಲೆನ್, ಕಾನ್ಸ್ಟಾನ್ಸ್ (CONSTANCE) ನಗರವನ್ನು ತಲುಪಿದ ದಿನವೇ ಸ್ಟ್ರಾಸ್‌ಬರ್ಗ್‌ನ ತಂದೆ- ತಾಯಿಯವರ ಮನೆಗೆ ತೆರಳಿದಳು. ಶ್ವೈಯಿಟ್ಸರ್ ಇತರ ಕೈದಿಗಳ ಬಿಡುಗಡೆಯ ಸಮಸ್ಯೆಗಳನ್ನು ಪರಿಹರಿಸುವ ಸಲುವಾಗಿ ಒಂದೆರಡು ದಿನ ಅಲ್ಲೇ ಉಳಿದುಕೊಂಡನು. ಜುಲೈ ಹದಿನೇಳರಂದು ಸ್ಟ್ರಾಸ್‌ಬರ್ಗ್ ಪಟ್ಟಣವನ್ನು ತಲುಪಿದಾಗ ಕಗ್ಗತ್ತಲೆ ಆವರಿಸಿತ್ತು. ಯುದ್ಧದ ದೆಸೆಯಿಂದ ನಗರದಲ್ಲೆಲ್ಲೂ ಬೆಳಕು ಕಾಣಿಸದ ವ್ಯವಸ್ಥೆಯಾಗಿತ್ತು. ಪತ್ನಿ ಹೆಲೆನ್‌ಳ ಮನೆಯನ್ನು ಅತ್ಯಂತ ಪ್ರಯಾಸದಿಂದ ಹುಡುಕ ಬೇಕಾಯಿತು. ಅಲ್ಲಿಂದ ಅವನ ತಂದೆ ಮತ್ತು ತಂಗಿ ಅಡಿಲೀ ಇಳಿದುಕೊಂಡಿದ್ದ ಮನೆಯನ್ನು ಹುಡುಕುವುದು ಇನ್ನೂ ಕಷ್ಟವಾಯಿತು. ಐದು ವರ್ಷಗಳಿಂದ ಅಗಲಿದ ಮಗನನ್ನು ಸಂದಿಸಿದ ಪಾದ್ರಿಯ ಸಂತೋಷಕ್ಕೆ ಪಾರವಿರಲಿಲ್ಲ. ಯುದ್ಧ ಸಮಯದಲ್ಲಿ ತಾಯಿಯನ್ನು ಕಳೆದುಕೊಂಡಿದ್ದ ಶ್ವೈಯಿಟ್ಸರ್‌ನ ದುಃಖ ಉಮ್ಮಳಿಸಿಬಂತು. ಗನ್ಸ್‌ಬಾಕ್‌ನಲ್ಲಿ ಇನ್ನೂ ಕಾಳಗದ ಕಿಡಿಗಳು ಹಾರುತ್ತಲೇ ಇದ್ದವು. ಸೈನ್ಯಾಧಿಕಾರಿಯ ಅಪ್ಪಣೆ ಪಡೆಯದೆ ಅಗಲಿದ ತಾಯಿಯ ಸಮಾಧಿಗೆ ಗೌರವ ಅರ್ಪಿಸಲು ಸಹಾ ಗನ್ಸ್‌ಬಾಕ್‌ಗೆ ತಕ್ಷಣ ಹೊರಡುವಂತಿರಲಿಲ್ಲ.

ಮಿಲಿಟರಿ ಸ್ನೇಹಿತರೊಬ್ಬರ ದಯೆಯಿಂದ ಶ್ವೈಯಿಟ್ಸರ್ ದಂಪತಿಗಳು ಗನ್ಸ್‌ಬಾಕ್‌ಗೆ ತೆರಳಲು ಪರವಾನಿಗೆ ಇನ್ನೆರಡು ದಿನಗಳಲ್ಲಿ ದೊರೆಯಿತು. ಮೊಳಗುತ್ತಿದ್ದ ಗುಂಡಿನ ಶಬ್ದಗಳ ನಡುವೆ, ರಾತ್ರಿಯೆಲ್ಲಾ ಪ್ರಯಾಣ ಮಾಡಿ ಒಂದು ದಿನ ಬೆಳಿಗ್ಗೆ ಶ್ವೈಯಿಟ್ಸರ್ ದಂಪತಿಗಳು ಗನ್ಸ್‌ಬಾಕನ್ನು ತಲುಪಿದರು.

ಯುದ್ಧದ ಹಾವಳಿಯಿಂದ ಗನ್ಸ್‌ಬಾಕ್ ನಗರ ಸಂಪೂರ್ಣ ನಾಶವಾಗಿತ್ತು. ಕುಸಿದು ಬಿದ್ದಿದ್ದ ಕಟ್ಟಡಗಳಲ್ಲಿ ಇನ್ನೂ ಹೊಗೆ ಮೇಲೇಳುತ್ತಿತ್ತು. ಸುತ್ತಲಿನ ಗುಡ್ಡಗಳೆಲ್ಲಾ ಬೋಳಾಗಿದ್ದವು. ರಸ್ತೆಗಳಲ್ಲೆಲ್ಲಾ ಯುದ್ಧ ಸನ್ನದ್ಧಿನ ಅಡ್ಡಗೋಡೆಗಳು, ಸೈನಿಕರು ಅವಿತು

ಕುಳಿತಿರುವ ಗುಂಡಿಗಳು, ಜನರ ಚಲನವಲನಗಳನ್ನು ನಿಯಂತ್ರಿಸುವ ತಂತಿ-ಬೇಲಿಗಳು ಶ್ವೈಯಿಟ್ಸರ್‌ನ ಮನಸ್ಸಿನಲ್ಲಿ ಯುದ್ಧದ ಬಗೆಗಿದ್ದ ಜಿಗುಪ್ಸೆಯನ್ನು ಇನ್ನೂ ಇಮ್ಮಡಿಗೊಳಿಸಿದವು. ೧೯೧೩ರ ಶುಭ ಶುಕ್ರವಾರ ಗನ್ಸ್‌ಬಾಕ್‌ನಿಂದ ಹೊರಡುವಾಗಿದ್ದ ಶಾಂತ, ಸುಂದರ, ನಿರ್ಮಲ ವಾತಾವರಣ ಸಂಪೂರ್ಣವಾಗಿ ಅಳಿಸಿ ಹೋಗಿತ್ತು. ಆ ದಿನ ಮಧ್ಯಾಹ್ನವೇ ತಾಯಿಯ ಸಮಾಧಿಗೆ ಭೇಟಿಕೊಟ್ಟು ತಮ್ಮ ಅಶ್ರುತರ್ಪಣ ಸಲ್ಲಿಸಿದರು.

ಮುಂದಿನ ಹತ್ತು ದಿನ ಶ್ವೈಯಿಟ್ಸರ್ ಗನ್ಸ್‌ಬಾಕ್‌ನಲ್ಲೇ ಉಳಿದುಕೊಂಡಿದ್ದು ಆಗಾಗ್ಗೆ ಸ್ಟ್ರಾಸ್‌ಬರ್ಗ್‌ಗೆ ಹೋಗಿಬರುತ್ತಿದ್ದ. ಹುಟ್ಟಿದೂರಿನ ಆತ್ಮೀಯ ಪರಿಸರ ಮತ್ತು ಹಿತಕರ ಗಾಳಿ ಸೇವನೆಯಿಂದ ಆಫ್ರಿಕಾದಲ್ಲಿ ಕಳೆದುಕೊಂಡಿದ್ದ ಆರೋಗ್ಯವನ್ನು ಮರಳಿ ಪಡೆದುಕೊಳ್ಳುವ ಅವನ ಆಶೆಗೂ ಕಲ್ಲುಬಿದ್ದಿತ್ತು. ಬೆನ್ನುಹತ್ತಿದ್ದ ಆಮಶಂಕೆ ಮತ್ತೆ ಉಲ್ಬಣವಾಯಿತು. ಜತೆಗೆ ವಿಪರೀತ ಜ್ವರವೂ ಬರುತ್ತಿತ್ತು. ಬಹಳ ಕಾಲದ ಆಮಶಂಕೆಯ ಪರಿಣಾಮದಿಂದ ಆಸನದ ಸುತ್ತ ಕೀವುಗಟ್ಟಿ ಕುರುಗಳಾಗಿದ್ದವು. ಅವನು ಎದ್ದು ತಿರುಗಾಡುವುದೂ ಪ್ರಯಾಸಕರವಾಯಿತು. ಈ ಸಮಯದಲ್ಲೇ ಗನ್ಸ್‌ಬಾಕ್‌ಗೆ ಶತ್ರುದಾಳಿ ಸನ್ನಿಹಿತವಾಗುವ ವರ್ತಮಾನವೂ ಬಂದಿತು.

ಶ್ವೈಯಿಟ್ಸರ್‌ನ ಮುಂದಿನ ಚಿಕಿತ್ಸೆಗೆ ಸ್ಟ್ರಾಸ್‌ಬರ್ಗ್ ಆಸ್ಪತ್ರೆಗೆ ಕರೆದೊಯ್ಯಬೇಕಾಗಿತ್ತು. ಶತ್ರುದಾಳಿಯ ಸಂದರ್ಭದಲ್ಲಿ ಅಲ್ಲಿಯ ಪ್ರಯಾಣ ಬಹಳ ದುಸ್ತರವೆಂದು ಬೇರೆ ಹೇಳಬೇಕಾಗಿಲ್ಲ. ಅವರ ಮಿಲಿಟರಿ ಸ್ನೇಹಿತರೊಬ್ಬರು ಆ ದಿನ ಕೋಲ್ಮಾರ್‌ನ ಕಡೆ ಮದ್ದು ತುಂಬಿ ಹೊರಟಿದ್ದ ರೈಲಿನಲ್ಲಿ ಶ್ವೈಯಿಟ್ಸರ್‌ನನ್ನು ಸಾಗಿಸುವ ಏರ್ಪಾಡು ಮಾಡಿಕೊಟ್ಟರು. ರಾತ್ರಿ ಒಂಭತ್ತು ಗಂಟೆಗೆ ತನ್ನ ಗರ್ಭಿಣಿ ಹೆಂಡತಿಯ ಜೊತೆ ಕುಂಟುತ್ತಾ ಆದರೂ ತಮಾಷೆ ಮಾತುಗಳನ್ನಾಡುತ್ತಲೇ ರೈಲ್ವೆ ನಿಲ್ದಾಣಕ್ಕೆ ನಡೆದುಕೊಂಡೇ ಹೋದರು. ರೈಲ್ವೆ ನಿಲ್ದಾಣವನ್ನು ತಲುಪುವಷ್ಟರಲ್ಲಿ ಶ್ವೈಯಿಟ್ಸರ್ ಮುಂದೆ ಪ್ರಯಾಣ ಮಾಡದಷ್ಟು ಸುಸ್ತಾಗಿದ್ದ. ಹತ್ತಿರದಲ್ಲಿದ್ದ ಸ್ನೇಹಿತರ ಮನೆಯಲ್ಲಿ ಆ ದಿನ ಉಳಿಯುವುದು ಅನಿವಾರ್ಯವಾಯಿತು. ಇನ್ನೂ ಒಂದು ದಿನ ಸುಧಾರಿಸಿಕೊಂಡು ಮರುದಿನ ಕುದುರೆ ಗಾಡಿಯೊಂದರಲ್ಲಿ ಕೋಲ್ಮಾರ್ ತಲುಪಿದರು. ನೋವಿನಿಂದ ಒದ್ದಾಡುತ್ತಿದ್ದ ಶ್ವೈಯಿಟ್ಸರ್‌ನನ್ನು ತಕ್ಷಣ ವೈದ್ಯರೊಬ್ಬರು ಬಂದು ನೋಡಿ ನೋವಿನ ಉಪಶಮನಕ್ಕೆ ತುರ್ತುಚಿಕಿತ್ಸೆ ನೀಡಿದರು. ಆ ದಿನ ರಾತ್ರಿ ಒಂಭತ್ತುಗಂಟೆಗೆ ಸ್ಟ್ರಾಸ್‌ಬರ್ಗ್‌ಗೆ ಹೋಗುವ ರೈಲಿನಲ್ಲಿ ಮುಂದೆ ಪ್ರಯಾಣ ಮುಂದುವರಿಸಿದರು. ಮರುದಿನ ಬೆಳಿಗ್ಗೆ ಸ್ಟ್ರಾಸ್‌ಬರ್ಗ್‌ನ್ನು ತಲುಪಿದಾಗ ಆಂಬುಲೆನ್ಸ್ ವಾಹನದಲ್ಲೇ ಡಾ॥ ಶ್ವೈಯಿಟ್ಸರ್‌ನನ್ನು ಆಸ್ಪತ್ರೆಗೆ ಸಾಗಿಸಬೇಕಾಯಿತು. ಮಾರನೆಯ ದಿನ ಬೆಳಿಗ್ಗೆ ಆಸನದ ಸುತ್ತ ಕತ್ತರಿಸಿ ಕೀವು ತೆಗೆದರು. ಈ ರೀತಿ ವೈಯಕ್ತಿವಾಗಿ

ನೋವಿನಿಂದ ಬಳಲಿದ್ದ ಡಾ|| ಶ್ವೈಯಿಟ್ಸರ್‌ಗೆ ಹೊಸದೊಂದು ಅನುಭವವನ್ನು ಉಂಟುಮಾಡಿತು. 'ನೋವಿನಿಂದ ನರಳುವವರೆಲ್ಲರೊಡನೆ ಅವನ ಸ್ನೇಹ ಕೂಟ' (FELLOWSHIP OF THOSE SUFFERING FROM PAIN) ಅವನ ಮನಸ್ಸಿನಲ್ಲಿ ಮನೆ ಮಾಡಿತು.

## ೧೨. ಯುರೋಪಿನಲ್ಲಿ ಪ್ರವಾಸ

ಡಾ|| ಶ್ವೈಯಿಟ್ಸರ್ ಶಸ್ತ್ರಚಿಕಿತ್ಸೆಯಿಂದ ಚೇತರಿಸಿಕೊಳ್ಳುತ್ತಿದ್ದಂತೆ ಯುದ್ಧವೂ ಕೊನೆಗೊಳ್ಳುವ ಸೂಚನೆಗಳು ಕಂಡುಬಂದವು. ಅಕ್ಟೋಬರ್ ಹದಿನಾರರಂದು ಜರ್ಮನಿಯವರು ಶಾಂತಿ ಸಂದೇಶವನ್ನು ಅಮೆರಿಕಾದ ಅಧ್ಯಕ್ಷರಿಗೆ ಕಳುಹಿಸಿದರು. ಸ್ವಲ್ಪ ಸಮಯದಲ್ಲೇ ಯುದ್ಧ ಕೊನೆಗೊಂಡಿತು. ಜರ್ಮನಿಯಲ್ಲಾದ ಕ್ಷಿಪ್ರ ಕ್ರಾಂತಿಯಿಂದ ಕೈಸರ್ ದೊರೆ ಪದಚ್ಯುತನಾದ. ಆ ತನಕ ಜರ್ಮನ್ನರ ವಶದಲ್ಲಿದ್ದ ಆಲ್‌ಸೇಶ್ ಮತ್ತು ಗನ್ಸ್‌ಬಾಕ್ ಪ್ರದೇಶಗಳು ಮತ್ತೆ ಫ್ರೆಂಚರ ಹಸ್ತಾಂತರವಾದವು. ಆಫ್ರಿಕಾದಲ್ಲಿ ಜರ್ಮನ್ ಪೌರನೆಂದು ಫ್ರೆಂಚರ ಕೈದಿಯಾಗಿದ್ದ ಡಾ|| ಶ್ವೈಯಿಟ್ಸರ್ ಈಗ ಫ್ರೆಂಚ್ ಪ್ರಜೆಯಾದ ! ಯುದ್ಧಕಾಲದಲ್ಲಿ ಸ್ಟ್ರಾಸ್‌ಬರ್ಗ್‌ನ ಚರ್ಚ್‌ಗಳ ಪಾದ್ರಿಗಳಲ್ಲಿ ಕೆಲವರು ಜರ್ಮನ್ ಅಥವಾ ಫ್ರೆಂಚರ ಕಡೆ ಸಹಾನುಭೂತಿ ತೋರಿಸಿದ್ದರೆಂಬ ಕಾರಣದಿಂದ ಸ್ಥಾನಪಲ್ಲಟವಾದರು. ಹೀಗೆ ತೆರನಾದ ಸೇಂಟ್ ನಿಕೋಲಾಸ್ ಚರ್ಚಿನ ಪಾದ್ರಿ ಕೆಲಸದ ಜವಾಬ್ದಾರಿ ಡಾ|| ಶ್ವೈಯಿಟ್ಸರನದಾಯಿತು. ಯುದ್ಧಕಾಲದಲ್ಲಿ ಫ್ರೆಂಚರ ಕೈದಿಯಾಗಿದ್ದರೂ ಈಗ ಅವರ ಆಡಳಿತದಲ್ಲಿ ಮತ್ತೆ ಜವಾಬ್ದಾರಿಯ ಕೆಲಸಕ್ಕೆ ನೇಮಕವಾದದ್ದು ಅವನ ತಟಸ್ಥ ಧೋರಣೆಯ ದ್ಯೋತಕವೇ ಸರಿ.

ಸೇಂಟ್ ನಿಕೋಲಾಸ್ ಚರ್ಚ್‌ನಲ್ಲಿ ಡಾ|| ಶ್ವೈಯಿಟ್ಸರ್ ಆ ಸಮಯದಲ್ಲಿ ಮಾಡಿದ ಪ್ರವಚನಗಳು ತುಂಬಾ ಗಹನ ಹಾಗೂ ವಿದ್ವತ್ಪೂರ್ಣವಾಗಿದ್ದವೆನ್ನಲಾಗಿವೆ. ಆಫ್ರಿಕಾದ ಅನುಭವದಿಂದ ಮೂಡಿಬಂದ ಅಣಿಮುತ್ತುಗಳವು. ಆಫ್ರಿಕಾಕ್ಕೆ ತೆರಳುವ ಮೊದಲು ಇದ್ದ ಪರಿಸ್ಥಿತಿ ಮತ್ತು ನಂತರ ಯುರೋಪು ಈಗ ತಲುಪಿದ ಚಿಂತಾಜನಕ ಅಧೋಗತಿಯ ವಿಶ್ಲೇಷಣೆ ಅವುಗಳಲ್ಲಿರುತ್ತಿದ್ದವು. ಆಫ್ರಿಕಾದ ಬಡ ನೀಗ್ರೋಗಳ ಪರಿಸ್ಥಿತಿ, ಅವರ ಅಜ್ಞಾನ ಮತ್ತು ಬಡತನಗಳನ್ನು ಬಿಳಿಯರು ದುರುಪಯೋಗ ಪಡಿಸುತ್ತಿರುವ ರೀತಿ, ಅಂಥ ನತದೃಷ್ಟರಿಗೆ ಸಹಾಯ ಮಾಡಲು ಸ್ವಪ್ರೇರಣೆಯಿಂದ ಅಲ್ಲಿಗೆ ಹೋದ ತನ್ನಂತಹವರು ಅನುಭವಿಸಬೇಕಾದ ಅಸಹನೀಯ ಸೆರೆಮನೆ ವಾಸ, ಯುದ್ಧದ ದುಷ್ಪರಿಣಾಮಗಳು, ಎಲ್ಲಕ್ಕಿಂತ ಮಿಗಿಲಾಗಿ ಅವನಲ್ಲೀಗ ಸ್ಫುಟಗೊಳ್ಳುತ್ತಿದ್ದ ಜೀವೋಪಾಸನದ ತತ್ವದ ವಿಸ್ತರಣೆ – ಇತ್ಯಾದಿಗಳೇ ಆ ಸಮಯದ ಪ್ರವಚನ

ವಿಷಯಗಳಾಗಿರುತ್ತಿದ್ದವು.

ಯುದ್ಧದ ನಂತರದ ಸ್ಟ್ರಾಸ್‌ಬರ್ಗ್ ಜನಜೀವನ ಅಸ್ತವ್ಯಸ್ತವಾಗಿತ್ತು. ಅಲ್ಲಿಯ ಜನ ಜರ್ಮನ್‌ಪರ ಹಾಗೂ ಫ್ರೆಂಚ್‌ಪರ ಎಂಬ ಎರಡು ಗುಂಪುಗಳಾಗಿ ಒಡೆದು ಹೋಗಿದ್ದರು. ಈಗ ಒಬ್ಬರ ಮೇಲೊಬ್ಬರು ತಮ್ಮ ಹಿರಿಮೆಯನ್ನು ಹೇರುವ ಸ್ಪರ್ಧೆಯಲ್ಲಿ ತೊಡಗಿದ್ದರು. ಡಾ॥ ಶ್ವೈಟ್ಸರ್ ಯುರೋಪಿನಿಂದ ಆಫ್ರಿಕಾಕ್ಕೆ ತೆರಳಿದ ನಂತರ ಹೊಸದೊಂದು ತಲೆಮಾರಿನ ಜನರ ಸಮುದಾಯವೇ ಉದ್ಭವಿಸಿತ್ತು. ಶ್ವೈಟ್ಸರ್‌ನ ವ್ಯಕ್ತಿತ್ವದ ಹಿರಿಮೆಯನ್ನು ಅವರು ಗ್ರಹಿಸಿದಂತಿರಲಿಲ್ಲ. ಕಪಾಟಿನ ಕೆಳಗೆ ಎಷ್ಟೋ ದಿನಗಳ ಹಿಂದೆ ಉರುಳಿಹೋಗಿ ಮರೆತ ನಾಣ್ಯದಂತಾಯಿತು ಅವನ ಸ್ಥಿತಿ. ಜತೆಗೆ ಅಲ್ಲಿಗೆ ಬಂದಾಕ್ಷಣವೇ ಶಸ್ತ್ರಚಿಕಿತ್ಸೆಗೆ ಒಳಗಾಗಿ ಅದರ ನರಳಾಟದಿಂದ ಹಾಸಿಗೆ ಹಿಡಿದು ಮಲಗಿದ್ದರಿಂದ ಬಾಹ್ಯ ಜಗತ್ತಿಗೆ ಅವನ ಪರಿಚಯವಿನ್ನೂ ಸಾಧ್ಯವಾಗಿರಲಿಲ್ಲ. ಶಸ್ತ್ರಚಿಕಿತ್ಸೆಗೂ ಸಾಕಷ್ಟು ಹಣ ಖರ್ಚಾಗಿದ್ದು, ಸಾಲ ಮಾಡಬೇಕಾಯಿತು. ಜೀವನ ನಡೆಸುವುದು ಇಂಥ ಪರಿಸ್ಥಿತಿಯಲ್ಲಿ ಕಷ್ಟಕರವೇ ಆಗಿತ್ತು. ಮತ್ತೆ ಸೇಂಟ್ ನಿಕೋಲಾಸ್ ಚರ್ಚ್‌ನ ಕ್ಯೂರೇಟ್ ಹುದ್ದೆಯನ್ನು ವಹಿಸಿಕೊಂಡಿದ್ದಲ್ಲದೆ, ಅಲ್ಲಿನ ಮುನಿಸಿಪಲ್ ಆಸ್ಪತ್ರೆಯಲ್ಲಿ ಹಂಗಾಮಿಯಾಗಿ ಸಹಾಯಕ ವೈದ್ಯನಾಗಿ ಕೆಲಸ ಮಾಡಲು ಸೇರಿಕೊಂಡಿದ್ದ. ಈ ಸಮಯದಲ್ಲಿ ಕುದುರೆ ಸವಾರಿ ಮಾಡುವಾಗ ಕೆಳಗೆ ಬಿದ್ದು ಮೂಳೆ ಮುರಿತದಿಂದ ಕೆಲ ಸಮಯ ನೋವನ್ನನುಭವಿಸಬೇಕಾಯಿತು.

ಇಷ್ಟೆಲ್ಲಾ ತೊಂದರೆಗಳಿದ್ದರೂ ಶ್ವೈಟ್ಸರ್‌ಗೆ ಮೊದಲಿನ ಸಮಾಜ ಸೇವೆಯ ಗೀಳು ಬಿಟ್ಟಿರಲಿಲ್ಲ. ಸ್ವಲ್ಪ ಚೇತರಿಸುತ್ತಿದ್ದಂತೆಯೇ ಯುದ್ಧದಲ್ಲಿ ಗಾಯಗೊಂಡವರ ಹಾಗೂ ನಿರಾಶ್ರಿತರ ಯೋಗಕ್ಷೇಮದ ಕೆಲಸಗಳನ್ನು ಕೈಗೆತ್ತಿಕೊಂಡಿದ್ದ. ಪ್ರತಿದಿನ ಆಹಾರ ಸಾಮಗ್ರಿ, ಉಡುಪು ಇತ್ಯಾದಿಗಳನ್ನು ಸಂಗ್ರಹಿಸಿ ರೈನ್ ನದಿಯ ಸೇತುವೆಯನ್ನು ದಾಟಿ ಜರ್ಮನಿಯ ಕೀತ್ ನಗರಕ್ಕೆ ಕಳುಹಿಸುವ ಜವಾಬ್ದಾರಿ ಅವನೇ ವಹಿಸಿಕೊಂಡಿದ್ದ. ಕಷ್ಟದ ಪರಿಸ್ಥಿತಿಯಲ್ಲಿದ್ದ ಗುರುಪತ್ನಿ ಕೋಸಿಮಾ ವಾಗ್ನರ್‌ಳಿಗೂ ಆಗಾಗ್ಗೆ ಸಹಾಯ ಮಾಡುತ್ತಿದ್ದ. ಈ ಸಮಯದಲ್ಲೇ ಹೆಲೆನ್, ಶ್ವೈಟ್ಸರ್‌ಗೆ ಜನ್ಮದಿನದ ಉಡುಗೊರೆಯೆಂಬಂತೆ ೧೯೧೯ರ ಜನವರಿ ಹದಿನಾಲ್ಕರಂದು ಹೆಣ್ಣು ಮಗುವಿಗೆ ಜನ್ಮವಿತ್ತಳು – ರೇನ್ನಾ ಫಾನಿ ಶುಜಾನೆಯ ಆಗಮನದಿಂದ ಶ್ವೈಟ್ಸರ್ ಈಗ ಪೂರ್ಣ ಸಂಸಾರಿಗನಾದ.

ಮುಂದಿನ ವರ್ಷ ಅವನ ಜೀವನದಲ್ಲಿ ಹೆಚ್ಚಿನ ಬದಲಾವಣೆಗಳಾಗಲಿಲ್ಲ. ಹೆಲೆನ್ ಮತ್ತು ಶ್ವೈಟ್ಸರ್ ಉಷ್ಣವಲಯದಲ್ಲಿ ಕಳೆದುಕೊಂಡಿದ್ದ ಆರೋಗ್ಯವನ್ನು ಇನ್ನೂ ಮರಳಿ ಪಡೆದುಕೊಂಡಿರಲಿಲ್ಲ. ಉಷ್ಣವಲಯದ ಬಳಲಿಕೆ ಅವರಿಂದ ತೊಲಗಿರಲಿಲ್ಲ.

ಶ್ವೈಯಿಟ್ಸರ್‌ನ ಆಸನದ ಕೀವುಗಟ್ಟುವ ಪರಿಸ್ಥಿತಿ ಮತ್ತೆ ಉಲ್ಬಣಗೊಂಡು ಇನ್ನೂ ಒಂದು ಬಾರಿ ಶಸ್ತ್ರಚಿಕಿತ್ಸೆಗೊಳಗಾಗಬೇಕಾಯಿತು. ಮಾನಸಿಕವಾಗಿ ಡಾ॥ ಶ್ವೈಯಿಟ್ಸರ್ ಬಹಳ ಚಿಂತೆಗೊಳಗಾದವನಂತೆ ಕಂಡುಬಂದರೂ, ಅವನ ನೈತಿಕ ಸ್ಥೈರ್ಯ ಮಾತ್ರ ಎಷ್ಟೂ ಕುಗ್ಗಿರಲಿಲ್ಲ.

ಆಫ್ರಿಕಾದಲ್ಲಿನ ಕೆಲಸ ಕಾರ್ಯ ಮತ್ತು ಯುರೋಪಿಗೆ ಹಿಂದಿರುಗಿದ ಮೇಲೆ ಶಸ್ತ್ರಚಿಕಿತ್ಸೆ ಇತ್ಯಾದಿಗಳಿಗಾಗಿ ಸ್ನೇಹಿತರಲ್ಲಿ ಮಾಡಿದ ಸಾಲ ತೀರಿಸುವ ಯೋಚನೆ ಡಾ॥ ಶ್ವೈಯಿಟ್ಸರ್‌ನನ್ನು ಸದಾ ಬಾಧಿಸುತ್ತಲೇ ಇತ್ತು. ಒಂದೊಂದು ಸಾರಿ ಮಾನಸಿಕ ದೌರ್ಬಲ್ಯಕ್ಕೊಳಗಾದವನಂತೆ ಕಾಣುತ್ತಿದ್ದ. ಅವನಲ್ಲಿದ್ದ ಸಂಗೀತ-ಪ್ರೌಢಿಮೆಯೂ ಈಗ ಯಾರ ಗಮನಕ್ಕೂ ಬಾರದಿದ್ದುದು ವ್ಯಥೆಯನ್ನು ಇಮ್ಮಡಿಗೊಳಿಸಿತ್ತು.

ಡಾ॥ ಶ್ವೈಯಿಟ್ಸರ್ ಮಾನಸಿಕ ಹಾಗೂ ದೈಹಿಕ ಬಳಲಿಕೆಯಿಂದ ಕಾಲ ತಳ್ಳುತ್ತಿರುವ ಸಮಯದಲ್ಲೇ ಆ ವರ್ಷದ ಅಕ್ಟೋಬರ್ ತಿಂಗಳಿನಲ್ಲಿ ಒಂದು ಕಡೆಯಿಂದ ಆಶಾಜನಕ ಹೊಂಗಿರಣಗಳು ಕಾಣಿಸಿದವು. ಬಾರ್ಸಿಲೋನಾ ಪ್ರದೇಶದಲ್ಲಿದ್ದ ಕೆಲವರು ಶ್ವೈಯಿಟ್ಸರ್ ಈಗ ಯುರೋಪಿನಲ್ಲಿರುವುದನ್ನು ತಿಳಿದು ಸಂಗೀತ ಕಛೇರಿಗಳನ್ನು ನಡೆಸಲು ಆಹ್ವಾನ ಕಳುಹಿಸಿದರು. ತನ್ನ ಪ್ರತಿಭೆಯನ್ನು ಗುರುತಿಸುವ ಜನ ಇನ್ನೂ ಇರುವುದನ್ನರಿತ ಶ್ವೈಯಿಟ್ಸರ್ ಆಹ್ವಾನಗಳನ್ನು ಸ್ವೀಕರಿಸಿದ. ಅಲ್ಲಿ ಹಲವಾರು ಸಂಗೀತ ಕಛೇರಿಗಳನ್ನು ನಡೆಸಿ ಜನಮನ್ನಣೆಗಳಿಸಿದನಲ್ಲದೆ, ಅವುಗಳಿಂದ ಸಾಕಷ್ಟು ಹಣವನ್ನೂ ಗಳಿಸಿದ.

ಆಲ್ಬರ್ಟ್ ಶ್ವೈಯಿಟ್ಸರ್ ಮತೀಯ ವಿಚಾರಗಳಲ್ಲಿ ತಳೆದಿದ್ದ ಭಾವನೆಗಳನ್ನು ಮೆಚ್ಚಿದವರಲ್ಲಿ ಸ್ವೀಡನ್ನಿನ ಆರ್ಚ್‌ಬಿಷಪ್ ನಾಥನ್ ಸೋಡರ್ ಬ್ಲಾಮ್ ಒಬ್ಬರಾಗಿದ್ದರು. ಉಪ್ಸಾಲಾ ವಿಶ್ವವಿದ್ಯಾಲಯದಲ್ಲಿ ಮತಧರ್ಮಗಳ ವಿಚಾರವಾಗಿ ಹಲವಾರು ಪ್ರತಿಷ್ಠಿತರ ಭಾಷಣ ಮಾಲೆಯೊಂದನ್ನು ಅವರು ಏರ್ಪಡಿಸಿದ್ದರು. ಡಾ॥ ಶ್ವೈಯಿಟ್ಸರ್‌ನನ್ನೂ ಆ ಸರಣಿ ಭಾಷಣಗಳಿಗೆ ಆಹ್ವಾನಿಸಬೇಕೆಂಬ ಇಚ್ಛೆ ಅವರಿಗಿದ್ದರೂ, ಆ ಸಮಯದಲ್ಲಿ ಅವನು ಎಲ್ಲಿರುವನೆಂಬುದು ತಿಳಿದಿರಲಿಲ್ಲ. ಹೇಗಾದರೂ ಮಾಡಿ ಡಾ॥ ಶ್ವೈಯಿಟ್ಸರ್‌ನನ್ನು ಅಲ್ಲಿಗೆ ಕರೆಸಲೇಬೇಕೆಂಬ ಉತ್ಕಟಾಕಾಂಕ್ಷೆಯಿಂದ ಇಂಗ್ಲೆಂಡಿನ ಆರ್ಚ್‌ಬಿಷಪ್ ಆಫ್ ಕ್ಯಾಂಟರಿಬರಿಯವರ ಮುಖಾಂತರ ಶ್ವೈಯಿಟ್ಸರ್‌ಗೆ ಆಹ್ವಾನ ಕಳುಹಿಸಿದರು. ಡಾ॥ ಶ್ವೈಯಿಟ್ಸರ್ ಬಿಡುಗಡೆಯಾಗಿ ಸ್ಟ್ರಾಸ್‌ಬರ್ಗ್‌ನಲ್ಲಿದ್ದ ವಿಷಯ ತಿಳಿದಿದ್ದ ಬಿಷಪ್‌ರು ಆಹ್ವಾನವನ್ನು ಅಲ್ಲಿಗೇ ರವಾನಿಸಿದರು.

ಆಹ್ವಾನ ತಲಪುವಷ್ಟರಲ್ಲಿ ಶ್ವೈಯಿಟ್ಸರ್‌ನ ಆರೋಗ್ಯ ಸರಿಯಾಗಿರಲಿಲ್ಲ. ಅದನ್ನು ನಿರಾಕರಿಸಿ ಕಾಗದ ಬರೆದಿದ್ದ. ಆದರೆ ಆರ್ಚ್ ಬಿಷಪ್ ಸೋಡರ್ ಬ್ಲಾಮ್ ಅಷ್ಟಕ್ಕೇ

ಕೈಬಿಡುವಂತವರಲ್ಲ. ಉಪ್ಸಾಲದ ಹವಾಗುಣ ಅವನ ಆರೋಗ್ಯವನ್ನು ಸುಧಾರಿಸುತ್ತದೆಂದು ಮತ್ತೆ ಒತ್ತಾಯಿಸಿಪತ್ರ ಬರೆದರು. ಆರ್ಥಿಕ ಮುಗ್ಗಟ್ಟು ಮತ್ತು ಮಾನಸಿಕ ದುಗುಡದಿಂದ ತೊಳಲಾಡುತ್ತಿದ್ದ ಶ್ವೈಯಿಟ್ಸರ್ ಈ ಅವಕಾಶವನ್ನು ಒಂದು ಊರುಗೋಲಾಗಬಹುದೆಂಬ ಆಶಯದಿಂದ ಒಪ್ಪಿಕೊಂಡು ಉಪ್ಸಾಲಕ್ಕೆ ಪ್ರಯಾಣ ಮಾಡಿದ.

ಡಾ।। ಶ್ವೈಯಿಟ್ಸರ್ ದಂಪತಿಗಳಿಗೆ ಉಪ್ಸಾಲಾದಲ್ಲಿ ಹಾರ್ದಿಕ ಸ್ವಾಗತ ದೊರೆಯಿತು. ಬಿಷಪ್ ಸೋಡರ್ ಬ್ಲಾಮ್ ಸರಳ ಹಾಗೂ ಸದ್ಗುಣಗಳ ವ್ಯಕ್ತಿ. ಅವರ ಕಾರ್ಯವಿಧಾನಗಳು ಶ್ವೈಯಿಟ್ಸರ್‌ನ ಮನಸ್ಸನ್ನು ಸೂರೆಗೊಂಡವು. ಡಾ।। ಶ್ವೈಯಿಟ್ಸರ್ ಉಪ್ಸಾಲಾ ವಿಶ್ವವಿದ್ಯಾಲಯದಲ್ಲಿ ಧಾರ್ಮಿಕ ವಿಷಯಗಳ ಬಗೆಗೆ ಹಲವು ಭಾಷಣಗಳನ್ನು ಮಾಡಿ ಜನರ ಮನಸ್ಸನ್ನು ಆಕರ್ಷಿಸುವುದರಲ್ಲಿ ಯಶಸ್ವಿಯಾದ. ಬಿಷಪ್ ಸೋಡರ್ ಬ್ಲಾಮ್, ಡಾ।। ಶ್ವೈಯಿಟ್ಸರ್ ಆಫ್ರಿಕಾದಲ್ಲಿ ಮಾಡಿದ ವೈದ್ಯಕೀಯ ಸೇವೆಯ ವಿವರಗಳನ್ನು ತಿಳಿಯಲು ಅತ್ಯಂತ ಉತ್ಸುಕನಾಗಿದ್ದನು. ಶ್ವೈಯಿಟ್ಸರ್ ದಂಪತಿಗಳು ಇನ್ನೇನು ಅಲ್ಲಿಂದ ಹೊರಡುವುದು ಒಂದೆರಡು ದಿನಗಳಿದ್ದವು. ಒಂದು ಸಾಯಂಕಾಲ ವಾಯುವಿಹಾರಕ್ಕೆ ಬಿಷಪ್‌ರ ಜೊತೆ ಹೊರಟಾಗ ಆಫ್ರಿಕಾದ ಕೆಲಸಗಳ ಮಾಹಿತಿಯನ್ನು ಶ್ವೈಯಿಟ್ಸರ್ ನೀಡಿದ; ಅಲ್ಲಿನ ಕೆಲಸಕ್ಕಾಗಿ ಅವನೀಗ ಎದಿರಿಸುತ್ತಿರುವ ಸಾಲದ ಪ್ರಸ್ತಾಪವೂ ಬಾರದಿರಲಿಲ್ಲ. ಶ್ವೈಯಿಟ್ಸರ್ ಅಷ್ಟೊಂದು ಸ್ವಾರ್ಥ ತ್ಯಾಗದಿಂದ ದೂರದ ಅರಣ್ಯದ ನಡುವೆ ಮಾನವ ಸೇವೆ ಮಾಡಿ ಅನುಭವಿಸಿದ ಕಷ್ಟನಷ್ಟಗಳನ್ನು ಕೇಳಿದ ಬಿಷಪರ ಮನಸ್ಸು ಕರಗಿತು. ಆಫ್ರಿಕಾದಲ್ಲಿ ಆ ಕೆಲಸ ಮುಂದುವರಿಯುವಂತೆ ಮಾಡುವುದಲ್ಲದೆ ಡಾ।। ಶ್ವೈಯಿಟ್ಸರ್‌ನನ್ನು ಋಣಮುಕ್ತನನ್ನಾಗಿ ಮಾಡಲೇಬೇಕೆಂದು ಆ ಸಾಯಂಕಾಲವೇ ನಿರ್ಧರಿಸಿದರು.

ಶ್ವೈಯಿಟ್ಸರ್ ದಂಪತಿಗಳು ಇನ್ನೂ ಕೆಲವು ಕಾಲ ಅಲ್ಲೇ ಇರುವಂತೆ ಬಿಷಪ್‌ರು ಒತ್ತಾಯಿಸಿದರು. ಬಿಷಪ್‌ರೇ ಸ್ವತಃ ಹಲವು ಯೋಜನೆಗಳನ್ನು ಸಿದ್ಧಪಡಿಸಿದರು. ಸ್ವೀಡನ್ನಿನ ಹಲವಾರು ಊರುಗಳಲ್ಲಿ ಶ್ವೈಯಿಟ್ಸರ್‌ನ ಭಾಷಣ ಮತ್ತು ಸಂಗೀತ ಕಚೇರಿಗಳ ಏರ್ಪಾಡು ಮಾಡಿಸಿದರು. ಆರು ವಾರಗಳು ಸತತವಾಗಿ ನಡೆದ ಈ ಕಾರ್ಯಕ್ರಮಗಳಲ್ಲಿ ಶ್ವೈಯಿಟ್ಸರ್‌ನ ಧಾರ್ಮಿಕ ವಿದ್ವತ್ತು ಮತ್ತು ಸಂಗೀತದ ಪ್ರತಿಭೆಗಳು ಮತ್ತೆ ಪ್ರಕಟವಾದವು. ಆಫ್ರಿಕಾದಲ್ಲಿ ಅವನು ನಡೆಸಿದ್ದ ಮಾನವೀಯ ಸೇವೆಗೆ ಜನ ಮಾರುಹೋದರು. ಈ ಕಾರ್ಯಕ್ರಮಗಳಿಂದ ಸಾಕಷ್ಟು ಹಣ-ಶೇಖರಣೆ ಕೂಡ ಆಯಿತು. ಶ್ವೈಯಿಟ್ಸರ್‌ನ ಆಫ್ರಿಕಾದ ಅನುಭವಗಳ ಬಗೆಗೂ ಪುಸ್ತಕಗಳನ್ನು ಬರೆದು ಪ್ರಕಟಿಸುವ ಪ್ರಚೋದನೆಯನ್ನು ಸೋಡರ್‌ಬ್ಲಾಮ್‌ರೇ ಮಾಡಿದರು. ಅವುಗಳೆಲ್ಲದರಿಂದ ಸಂಗ್ರಹವಾದ ಸುಮಾರು ೧೭,೦೦೦

ಫ್ರಾಂಕುಗಳು ಸಾಲ ತೀರಿಸುವುದಕ್ಕೆ ಸಾಕಾಯಿತು. ಎಲ್ಲಕ್ಕಿಂತ ಮಿಗಿಲಾಗಿ ಕುಸಿಯುತ್ತಿದ್ದ ಮನಃಸ್ಥೈರ್ಯ ಮರುಕಳಿಸುವಂತಾಯಿತು. ಆಫ್ರಿಕಾಕ್ಕೆ ಹಿಂದಿರುಗಿ ಅರ್ಧದಲ್ಲೇ ಕೈಬಿಟ್ಟು ಬಂದಿದ್ದ ಕೆಲಸವನ್ನು ಮುಂದುವರಿಸುವ ಅಭಿಲಾಷೆ ಮತ್ತೆ ಚಿಗುರಿತು. ಆರ್ಚ್‌ಬಿಷಪ್ ಸೋಡರ್ ಬ್ಲಾಮ್ ಆಹ್ವಾನಿಸಿ, ಉತ್ತೇಜನ ನೀಡದಿದ್ದಲ್ಲಿ ತಾನು ಮತ್ತೆ ಲ್ಯಾಂಬರೀನೆಗೆ ಹಿಂದಿರುಗುವುದು ಕಷ್ಟವಾಗುತ್ತಿತ್ತೆಂದು ಮುಂದೊಂದು ಸಾರಿ ಕೃತಜ್ಞತೆ ಸಲ್ಲಿಸಿದ್ದಾನೆ.

ಸ್ಟ್ರಾಸ್‌ಬರ್ಗ್‌ಗೆ ಶ್ವೆಯಿಟ್ಸರ್ ಹಿಂದಿರುಗಿದಾಗ ಕೈತುಂಬಾ ಕೆಲಸಗಳಿದ್ದವು. ಕ್ರೈಸ್ತ-ಧರ್ಮ ಮತ್ತು ತತ್ವಶಾಸ್ತ್ರಗಳ ಬಗೆಗೆ ಆಗಾಗ್ಗೆ ಬರೆದಿದ್ದ ಟಿಪ್ಪಣಿಗಳನ್ನು ಒಂದುಗೂಡಿಸಿ ಹಸ್ತಪ್ರತಿಯನ್ನು ತುರ್ತಾಗಿ ತಯಾರಿಸಬೇಕಾಗಿತ್ತು. ಯುರೋಪಿನಲ್ಲಿ ಈ ತನಕ ಮಾಡಿದ ಭಾಷಣ, ಸಂಗೀತ ಕಚೇರಿ ಮತ್ತು ಪ್ರಕಟಿಸಿಧ ಗ್ರಂಥಗಳಿಂದ ಅವನ ಖ್ಯಾತಿ ಹರಡಲಾರಂಭಿಸಿತ್ತು. ಯುರೋಪ್ ಮತ್ತು ಇಂಗ್ಲೆಂಡ್‌ಗಳಿಂದ ಆಮಂತ್ರಣಗಳು ಬರುತ್ತಿದ್ದವು. ಜತೆಗೆ ರಾಶಿರಾಶಿಯಾಗಿ ಬರುತ್ತಿದ್ದ ಪತ್ರಗಳಿಗೆ ಉತ್ತರಿಸುವುದೂ ಪ್ರಯಾಸದ ಕೆಲಸವಾಗಿತ್ತು. ಲ್ಯಾಂಬರೀನೆಗೆ ಹಿಂದಿರುಗುವ ನಿರ್ಧಾರ ಮಾಡಿದ್ದರಿಂದ ಪ್ಯಾರಿಸ್ ಮಿಷನರಿ ಸೊಸೈಟಿಯವರೊಡನೆ ಮತ್ತೆ ಹೊಸ ಒಪ್ಪಂದ ಮಾಡಿಕೊಳ್ಳಬೇಕಾಗಿದ್ದು ಅದಕ್ಕಾಗಿ ಅವರ ಜೊತೆ ಮಾತುಕತೆಗಳಾಗಬೇಕಿತ್ತು.

ಜೂನ್ ೧೯೨೧ರಲ್ಲಿ ಲ್ಯಾಂಬರೀನೆಯ ತನ್ನ ಅನುಭವದ ಬಗೆಗೆ ಡಾ॥ ಶ್ವೆಯಿಟ್ಸರ್ ಬರೆದ ಪುಸ್ತಕ ''ಪ್ರಾಚೀನ ಕಾಡಿನ ಅಂಚಿನಲ್ಲಿ'' (ON THE EDGE OF PRIMEVAL FOREST) ಪ್ರಕಟವಾಯಿತು. ಆಲ್ಬರ್ಟ್ ಶ್ವೆಯಿಟ್ಸರ್‌ನ ಸಾಹಸ ಪ್ರವೃತ್ತಿ, ನೈತಿಕ ಜವಾಬ್ದಾರಿ, ಆಫ್ರಿಕಾದ ಜನರ ದಾರುಣ ಪರಿಸ್ಥಿತಿಗೆ ಮತ್ತಿತರ ಸಮಸ್ಯೆಗಳು ಶ್ವೆಯಿಟ್ಸರ್‌ನ ಲಘು ಹಾಸ್ಯಮಯ ಶೈಲಿಯಲ್ಲಿ ಚಿತ್ರಿತವಾದ ರೀತಿ ಕೂಡಲೇ ಸಾರ್ವಜನಿಕರ ಗಮನ ಸೆಳೆಯಿತು. ಪ್ರಕಟವಾದ ಸ್ವಲ್ಪ ಸಮಯದಲ್ಲೇ ಅದು ಫ್ರೆಂಚ್, ಇಂಗ್ಲಿಷ್ ಮುಂತಾದ ಭಾಷೆಗಳಿಗೆ ಭಾಷಾಂತರವಾಗಿ ಜನಪ್ರಿಯತೆ ಗಳಿಸಿತು.

ಡಾ॥ ಶ್ವೆಯಿಟ್ಸರ್ ತನ್ನ ಇತರ ಪುಸ್ತಕಗಳ ಹಸ್ತಪ್ರತಿಗಳನ್ನು ತಯಾರಿಸುತ್ತಿರುವಾಗಲೇ ಸ್ವಿಟ್ಸರ್‌ಲೆಂಡ್, ಸ್ವೀಡನ್ ಮತ್ತು ಇಂಗ್ಲೆಂಡಿನಿಂದ ಸಂಗೀತ ಕಚೇರಿ ಮತ್ತು ಭಾಷಣಗಳಿಗೆ ಆಹ್ವಾನಗಳು ಬರುತ್ತಿದ್ದವು. ಇಂಥ ಕಾರ್ಯಕ್ರಮಗಳಿಂದ ತನಗೆ ತುರ್ತಾಗಿ ಬೇಕಾಗಿದ್ದ ಹಣ ಸಂಗ್ರಹಣೆಯೂ ಆಗುವ ಸಾಧ್ಯತೆಗಳಿದ್ದುದರಿಂದ ಆಹ್ವಾನಗಳನ್ನು ಒಪ್ಪಿಕೊಂಡ. ಚರ್ಚ್‌ನ ಕೆಲಸ ಮತ್ತು ಮುನಿಸಿಪಲ್ ಆಸ್ಪತ್ರೆಗಳನ್ನು ಜತೆಯಲ್ಲೇ ನಿರ್ವಹಿಸಲು ಸಾಧ್ಯವಾಗದಿದ್ದುದರಿಂದ ಅವುಗಳಿಗೆ ರಾಜೀನಾಮೆ ಕೊಡಬೇಕಾಯಿತು.

ಆ ವರ್ಷದ ಕೊನೆಯಲ್ಲಿ ಡಾ|| ಶ್ವೈಯಿಟ್ಸರ್ ಸ್ವಿಟ್ಸರ್‌ಲೆಂಡ್ ಮತ್ತು ಸ್ವೀಡನ್‌ಗಳ ಹಲವಾರು ನಗರಗಳಲ್ಲಿ ಸಂಗೀತ ಕಚೇರಿ ನಡೆಸಿದ. ಧಾರ್ಮಿಕ ವಿಷಯಗಳೇ ಅಲ್ಲದೆ ಆಫ್ರಿಕಾದ ಜನರ ಸ್ಥಿತಿಗತಿಗಳ ಬಗೆಗೂ ಭಾಷಣ ಮಾಡಿದ. ಆಗತಾನೇ ಮುಗಿದ ಯುದ್ಧದಿಂದ ಜರ್ಝರಿತವಾದ ಈ ದೇಶಗಳ ಜನರಿಗೆ ಶ್ವೈಯಿಟ್ಸರ್‌ನ ಮಾನವೀಯ ದೃಷ್ಟಿಕೋನ ತುಂಬಾ ಹಿಡಿಸಿದವು. ಮುಂದಿನ ಜನವರಿಯಲ್ಲಿ ಶ್ವೈಯಿಟ್ಸರ್ ದಂಪತಿಗಳು ಇಂಗ್ಲೆಂಡನ್ನು ತಲುಪಿದಾಗ ಜನ ಅವರನ್ನು ಅತ್ಯಂತ ಆದರದಿಂದ ಸ್ವಾಗತಿಸಿ ಗೌರವಿಸಿದರು. ಎಂದಿನಂತೆ ಹಲವಾರು ಕಡೆ ಸಂಗೀತ ಕಚೇರಿ ಮತ್ತು ಭಾಷಣಗಳು ಏರ್ಪಾಡು ಆಗಿದ್ದವು. ಜರ್ಮನ್ ಭಾಷೆಯಲ್ಲಿ ಅವನು ಮಾಡುತ್ತಿದ್ದ ಭಾಷಣಗಳನ್ನು ದಕ್ಷ ಭಾಷಾಂತರಕಾರರಿಂದ ಇಂಗ್ಲಿಷ್‌ಗೆ ತರ್ಜುಮೆ ಮಾಡಿ ತಿಳಿಸಿದ್ದರಿಂದ ಅವನ ಸಂದೇಶ ಜನರನ್ನು ತಲುಪಿತು. ವಿಶಾಲ ಮನೋಭಾವದ ಇಂಗ್ಲಿಷ್ ಜನರಿಗೆ ಶ್ವೈಯಿಟ್ಸರ್‌ನ ಅನಿಸಿಕೆಗಳು ತುಂಬಾ ಹಿಡಿಸಿದವು. ಇಂಗ್ಲೆಂಡಿನಿಂದ ವಾಪಾಸು ಬರುವಾಗ ಮತ್ತೆ ಸ್ವೀಡನ್, ಸ್ವಿಟ್ಸರ್‌ಲ್ಯಾಂಡ್‌ನ ಮುಖಾಂತರವೇ ಪ್ರಯಾಣ ಮಾಡಿದ. ಮತ್ತಷ್ಟು ಭಾಷಣ ಮತ್ತು ಸಂಗೀತ ಕಚೇರಿಗಳನ್ನು ನಡೆಸಿ, ಜನಪ್ರಿಯತೆ ಗಳಿಸಿದನಲ್ಲದೆ, ಸಾಕಷ್ಟು ಸಂಪಾದನೆಯನ್ನೂ ಮಾಡಿದ.

ಡಾ|| ಶ್ವೈಯಿಟ್ಸರ್ ಈ ಸಮಯದಲ್ಲಿ ಮಾಡುತ್ತಿದ್ದ ಭಾಷಣಗಳಲ್ಲಿ ಹೆಚ್ಚಾಗಿ ಕ್ರೈಸ್ತಧರ್ಮ ಮತ್ತು ತತ್ವಗಳ ಬಗೆಗೆ ತಾನು ಮೊದಲಿನಿಂದಲೂ ರೂಢಿಸಿಕೊಂಡು ಬಂದಿದ್ದ ವೈಚಾರಿಕ ಭಾವನೆಗಳನ್ನೇ ಪ್ರತಿಪಾದನೆ ಮಾಡುತ್ತಿದ್ದ. ಜೊತೆಗೆ ಆಧುನಿಕ ನಾಗರಿಕ-ಸಂಸ್ಕೃತಿ ಮತ್ತು ರೀತಿ ನೀತಿಗಳು ಹೇಗೆ ನಶಿಸುತ್ತಿವೆಯೆಂಬುದರ ಬಗೆಗೆ ಜನರ ಗಮನ ಸೆಳೆಯುತ್ತಿದ್ದ. ಪೌರ್ವಾತ್ಯ ರಾಷ್ಟ್ರಗಳಾದ ಭಾರತ ಮತ್ತು ಚೈನಾ ದೇಶಗಳ ಹಿಂದು, ಜೈನ, ಬೌದ್ಧ ಧರ್ಮಗಳ ಪ್ರಚಾರ ಆಗ ಯುರೋಪಿನಲ್ಲಿ ನಡೆಯುತ್ತಿತ್ತು. ಈ ಧರ್ಮಗಳ ಬಗೆಗೆ ಶ್ವೈಯಿಟ್ಸರ್ ಅಭ್ಯಾಸ ಮಾಡಿದವನಾಗಿದ್ದು, ಅವುಗಳಲ್ಲಿ ಹಲವಾರು ತತ್ವಗಳಿಗೆ ಮಾರುಹೋಗಿದ್ದ. ಆದರೂ ಅವುಗಳ ಧ್ಯೇಯ ಧೋರಣೆಗಳನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳಲು ತಯಾರಿರಲಿಲ್ಲ. ಆ ಧರ್ಮಗಳ ನಕಾರಾತ್ಮಕ ಪ್ರಾಪಂಚಿಕ-ದೃಷ್ಟಿಕೋನ ಅವನಿಗೆ ಮೆಚ್ಚಿಗೆಯಾದಂತಿರಲಿಲ್ಲ. ಮುಂದೆ ಅವನು ರಚಿಸಿದ ಹಲವಾರು ಗ್ರಂಥಗಳಿಗೆ ಈ ಭಾಷಣಗಳಿಗಾಗಿ ತಯಾರಿಸಿದ ಮೂಲಟಿಪ್ಪಣಿಗಳೇ ಆಧಾರವಾದವು.

ಆ ವರ್ಷದ ಮಾರ್ಚ್ (೧೯೨೨) ಸಮಯಕ್ಕೆ ಡಾ|| ಶ್ವೈಯಿಟ್ಸರ್ ಗನ್ಸ್‌ಬಾಕ್‌ಗೆ ಹಿಂದಿರುಗಿದ. ಲ್ಯಾಂಬರೀನೆಗೆ ಮರಳುವ ವಿಷಯದಲ್ಲಿ ಈಗಾಗಲೇ ದೃಢ ನಿರ್ಧಾರ ವಾಗಿತ್ತು. ಪ್ಯಾರಿಸ್ ಮಿಷನರಿ ಸೊಸೈಟಿಯವರು ಈ ಸಾರಿ ಹಲವಾರು ಷರತ್ತುಗಳನ್ನು

ಮುಂದೂಡಿದ್ದರು. ಶ್ವೈಯಿಟ್ಸರ್ ಅಲ್ಲಿ ನೆಲಸುವ ಜಾಗ, ಮಿಷನರಿಗಳ ಕಟ್ಟಡಗಳಿಗೂ ಅದಕ್ಕೂ ಇರಬೇಕಾದ ಅಂತರ, ಮುಂದೆ ಅವನು ಆಸ್ಪತ್ರೆಯನ್ನು ತ್ಯಜಿಸಿದರೆ ಅಲ್ಲಿನ ಕಟ್ಟಡ ಮತ್ತು ಸ್ವತ್ತುಗಳು ಮಿಷನರಿ ಸೊಸೈಟಿಗೇ ಸೇರಬೇಕೆಂಬ ಹಲವಾರು ಷರತ್ತುಗಳನ್ನು ಹಾಕಿದರು. ಡಾ|| ಶ್ವೈಯಿಟ್ಸರ್ ಈ ಬಗೆಗೆ ಲಿಖಿತ ಒಪ್ಪಂದ ಮಾಡಿಕೊಡಬೇಕೆಂದು ಸಹಾ ಹಠ ಹಿಡಿದಿದ್ದರು. ಶ್ವೈಯಿಟ್ಸರ್ ಅವರ ನಿಬಂಧನೆಗಳಿಗೆ ಸಮ್ಮತಿಸಿದನಾದರೂ ಎರಡು ರಾಷ್ಟ್ರ ಅಥವಾ ವ್ಯಕ್ತಿಗಳ ನಡುವೆ ಜರುಗುವ ವ್ಯವಹಾರಿಕ ರೀತಿಯಲ್ಲಿ ಪತ್ರ ಬರೆದುಕೊಡಲು ತಯಾರಿರಲಿಲ್ಲ. ಕ್ರೈಸ್ತಮತದ ಅನುಯಾಯಿಯೊಬ್ಬ, ಕ್ರೈಸ್ತ ಮತ ಪ್ರಚಾರದ ಸಂಸ್ಥೆಗೆ ಆ ರೀತಿ ಲಿಖಿತ ಒಪ್ಪಂದ ಬರೆದು ಕೊಡುವುದರ ಬಗೆಗೆ ಅಸಮ್ಮತಿ ಇತ್ತು. ಮಿಷನರಿ ಸೊಸೈಟಿಯವರು ಅಂತಿಮವಾಗಿ ತಾವು ಮುಂದೊಡ್ಡುತ್ತಿದ್ದ ಅಸಹಜ ನಿಲುವನ್ನು ತ್ಯಜಿಸಿ, ಡಾ|| ಶ್ವೈಯಿಟ್ಸರ್‌ನ ನಂಬಿಕೆಯ ಮೇಲೆ ಸಮ್ಮತಿ ನೀಡಿದರು.

ಡಾ|| ಶ್ವೈಯಿಟ್ಸರ್ ಮತ್ತೆ ಲ್ಯಾಂಬರೀನೆಗೆ ತೆರಳುವ ನಿರ್ಧಾರವನ್ನು ಯುರೋಪಿನ ಜನ ಸ್ವಾಗತಿಸಿದರು. ಅವನ ಮಾನವೀಯ ಸೇವಾಕಾರ್ಯಕ್ಕೆ ಸಹಾಯ ಮಾಡುವ ಭರವಸೆ ಇಂಗ್ಲೆಂಡ್ ಮತ್ತು ಯುರೋಪಿನ ಹಲವಾರು ಕಡೆಗಳಿಂದ ಬಂದವು. ಲ್ಯಾಂಬರೀನೆಯ ವಿಷಯದಲ್ಲಿ ಭಾಷಣ ಕೇಳಿದವರಂತೂ ಅವನ ಸೇವಾ-ಕಾರ್ಯದಲ್ಲಿ ಯಾವುದಾದರೂ ವಿಧದಲ್ಲಿ ಭಾಗಿಯಾಗುವ ಅವಕಾಶ ಸಿಗುವುದೇ ಸುದೈವವೆಂದು ಭಾವಿಸಿದ್ದರು. ಪ್ರತಿದಿನ ಹಣ, ಔಷಧ ಸಾಮಗ್ರಿ, ಆಹಾರ ವಸ್ತುಗಳು ಸಹಾಯರೂಪದಲ್ಲಿ ಗನ್ಸ್‌ಬಾಕ್‌ಗೆ ಬರುತ್ತಿದ್ದವು. ದೂರದ ಅಮೆರಿಕಾದಲ್ಲಿ ಆಗ ತಾನೇ ನಿದ್ದೆ - ಜ್ವರದ ಚಿಕಿತ್ಸೆಗಾಗಿ ಹೊಸದಾಗಿ ಕಂಡುಹಿಡಿದ ಔಷಧದ ಪೊಟ್ಟಣಗಳು ರಾಶಿರಾಶಿಯಾಗಿ ಬಂದವು. ಡಾ|| ಆಲ್ಬರ್ಟ್ ಶ್ವೈಯಿಟ್ಸರ್‌ನ ಕೀರ್ತಿ ಪ್ರಪಂಚದೆಲ್ಲಡೆ ಹರಡಿ ಅವನ ಸೇವಾಕಾರ್ಯಕ್ಕೆ ಬೆಂಬಲ ನೀಡಲು ಮುಂದೆ ಬರುವ ಜನ ಹಲವಾರು ರಾಷ್ಟ್ರಗಳಲ್ಲಿದ್ದರು.

ಹೆಲೆನ್ ಮತ್ತು ಮಗು ರೆನ್ನಾ ಈ ಸಾರಿ ಶ್ವೈಯಿಟ್ಸರ್ ಜೊತೆ ಲ್ಯಾಂಬರೀನೆಗೆ ಹೋಗುವಷ್ಟು ಆರೋಗ್ಯಸ್ಥಿತಿಯಲ್ಲಿರಲಿಲ್ಲ. ಹೆಲೆನ್ ಆರೋಗ್ಯ ಸುಧಾರಿಸಲು ಜರ್ಮನಿಯ ಗಡಿಯೊಳಗೆ ಪರ್ವತ ತಪ್ಪಲಿನ ಕೋನಿಂಗ್ಸ್ ಫ್ಲೆಡ್ ಎಂಬಲ್ಲಿ ಮನೆಯನ್ನು ನಿರ್ಮಿಸಿ, ಅವರಿಬ್ಬರನ್ನು ಅಲ್ಲಿ ನೆಲೆಗೊಳಿಸಿದ. ಲ್ಯಾಂಬರೀನೆಯನ್ನು ಬಿಟ್ಟು ಬಂದ ಸುಮಾರು ಹನ್ನೊಂದು ವರ್ಷಗಳ ತರುವಾಯ ಡಾ|| ಆಲ್ಬರ್ಟ್ ಶ್ವೈಯಿಟ್ಸರ್ ಮತ್ತೆ ಅದೇ ಹಾದಿ ತುಳಿದ. ಸ್ವಪ್ರೇರಿತನಾದ ನೋಯೆಲ್ ಜಿಲಿಪ್ಸೆ ಎಂಬ ಆಂಗ್ಲ ಯುವಕ ಈ ಬಾರಿ ಅವನ ಜೊತೆಗೂಡಿದ. ಅವರಿಬ್ಬರೂ ೧೯೨೪ರ ಫೆಬ್ರವರಿ ಇಪ್ಪತ್ತೊಂದರಂದು ಆಫ್ರಿಕಾದತ್ತ ಪ್ರಯಾಣ ಬೆಳೆಸಿದರು.

# ೧೩. ಮತ್ತೆ ಲ್ಯಾಂಬರೀನೆ

ನೋಯೆಲ್ ಜಿಲಿಪ್ಸೆ ಮತ್ತು ಕಾಗದ ತುಂಬಿದ ಎರಡು ಮೂಟೆಗಳ ಜತೆ ಬೋರ್ಡೋ ಬಂದರು ಕಟ್ಟೆಗೆ ಡಾ॥ ಶ್ವೈಯಿಟ್ಸರ್ ಬಂದಾಗ ಆಶ್ಚರ್ಯ ಕಾದಿತ್ತು. ಮೂಟೆಗಳಲ್ಲಿ ಕದ್ದು ಸಾಗಿಸುವ ಹಣದ ನೋಟುಗಳಿರಬಹುದೆಂದು ಸುಂಕದ ಅಧಿಕಾರಿಗಳು ತಡೆಹಿಡಿದು ಜಪ್ತಿ ಮಾಡಿದರು. ಅವುಗಳನ್ನು ಬಿಚ್ಚಿ ಒಂದೆರಡು ಗಂಟೆಗಳ ಕಾಲ ವೀಕ್ಷಿಸಿದಾಗ ಶ್ವೈಯಿಟ್ಸರ್-ಪ್ರಿಯರು ಬರೆದ ಸಾವಿರಗಟ್ಟಲೆ ಪತ್ರಗಳನ್ನು ನೋಡಿ ಅಧಿಕಾರಿಗಳು ಬೆರಗಾದರಂತೆ! ಯುರೋಪಿನಲ್ಲಿದ್ದಾಗ ಉತ್ತರಿಸಲು ಸಮಯ ಸಾಲದೆ, ಹಡಗಿನಲ್ಲಿ ಅವುಗಳಿಗೆಲ್ಲಾ ಉತ್ತರಿಸುವುದಕ್ಕಾಗಿ ಕೊಂಡೊಯ್ಯುತ್ತಿದ್ದ ಕಾಗದಗಳವು.

ಈ ಬಾರಿ ಪ್ರಯಾಣಕ್ಕೆ ಶ್ವೈಯಿಟ್ಸರ್ ಆರಿಸಿಕೊಂಡ ಹಡಗು ಆಫ್ರಿಕಾದ ಪಶ್ಚಿಮ ತೀರದ ಅನೇಕ ಬಂದರುಗಳಲ್ಲಿ ತಂಗಿ ಮುಂದುವರಿಯುವುದಾಗಿತ್ತು. ಪ್ರವಾಸಪ್ರಿಯ ಡಾ॥ ಶ್ವೈಯಿಟ್ಸರ್‌ಗೆ ಅದು ಅನುಕೂಲವೇ ಆಯಿತು. ಒಂದೊಂದು ಕಡೆ ೨-೩ ದಿನ ಒಳನಾಡಿಗೆ ತೆರಳಿ ಅಲ್ಲಿನ ಜನರ ಜೀವನಕ್ರಮವನ್ನು ತಿಳಿದುಕೊಳ್ಳುವ ಅವಕಾಶವಿತ್ತು. ಹೋದೆಡೆಗಳಲ್ಲೆಲ್ಲಾ ಯುದ್ಧದ ಹಾವಳಿ ಎದ್ದುಕಾಣುತ್ತಿತ್ತು. ಯುದ್ಧದಲ್ಲಾದ ನಷ್ಟವನ್ನು ತುಂಬಿಕೊಳ್ಳಲು ಬಿಳಿಯರು ಮತ್ತೆ ಆಫ್ರಿಕಾದ ಅರಣ್ಯ ಸಂಪತ್ತನ್ನು ಕಡಿದು ಸಾಗಿಸುತ್ತಿದ್ದರು. ಯುದ್ಧ ಸಮಯದಲ್ಲಿ ಸರಿಯಾದ ಆಹಾರ ವಸ್ತುಗಳೂ ದೊರೆಯದೆ ನೀಗ್ರೋಗಳೂ ಇನ್ನೂ ಬಡಕಲಾಗಿದ್ದರು. ಬದುಕಿ ಉಳಿಯಲು ಅವರೀಗ ಮತ್ತೆ ಬಿಳಿಯರ ಗುಲಾಮರಾಗಿ ಮರದ ದಿಣ್ಣೆಗಳನ್ನು ಸಾಗಿಸುತ್ತಿದ್ದ ದೃಶ್ಯ ಶ್ವೈಯಿಟ್ಸರ್‌ನ ಮನ ಕರಗಿಸಿತು.

ಹೀಗೆ ನಿಧಾನಗತಿಯಿಂದ ಸಾಗಿದ ಹಡಗು ಏಪ್ರಿಲ್ ಮೊದಲ ವಾರದಲ್ಲಿ ಕೇಪ್ ಲೋಪೇಜ್‌ನ್ನು ತಲುಪಿತು. ಅಲ್ಲಿಂದ ಓಗಾವೆ ನದಿಯಲ್ಲಿ ಪ್ರಯಾಣ ಮುಂದುವರೆಸಿ ಈಸ್ಟರ್ ಹಬ್ಬದ ಆರಂಭದ ಸಮಯದಲ್ಲಿ –೧೯೨೪ರ ಏಪ್ರಿಲ್ ಹತ್ತೊಂಬತ್ತರಂದು– ಡಾ॥ ಶ್ವೈಯಿಟ್ಸರ್ ಮತ್ತು ಜಿಲಿಪ್ಸೆ ಲ್ಯಾಂಬರೀನೆಯಲ್ಲಿ ಬಂದಿಳಿದರು.

ಲ್ಯಾಂಬರೀನೆ ಮತ್ತು ಡಾ॥ ಶ್ವೈಯಿಟ್ಸರ್ ನಿರ್ಮಿಸಿದ ಆಸ್ಪತ್ರೆ ಯುದ್ಧಕ್ಕೆ ಪೂರ್ಣಾಹುತಿಯಾಗಿದ್ದವು. ಕಟ್ಟಡಗಳ ಚಾವಣಿಗಳೆಲ್ಲಾ ನಾಶವಾಗಿ ಅರ್ಧಂಬರ್ಧ ಗೋಡೆಗಳು, ದಟ್ಟವಾಗಿ ಬೆಳೆದ ಹುಲುವಿನ ಮಧ್ಯೆ ಕಾಣಿಸುತ್ತಿದ್ದವು.

ಆಸ್ಪತ್ರೆಯ ಕೆಲಸ ಶುರುವಾಗುವುದಕ್ಕೆ ಮೊದಲು ಹಳೇ ಕಟ್ಟಡಗಳ ಪುನರ್ ನಿರ್ಮಾಣ ಮೊದಲು ಆಗಬೇಕಾಗಿತ್ತು. ಯುದ್ಧಾನಂತರ ಮರ ಕಡಿದು ಸಾಗಿಸುವ

ಕೆಲಸ ಅತ್ಯಂತ ಭರದಿಂದ ನಡೆಯುತ್ತಿತ್ತು. ಹೆಚ್ಚು ಕೂಲಿ ಸಿಗುತ್ತಿದ್ದುದರಿಂದ ಕೂಲಿಗಳೆಲ್ಲಾ ಆ ಕಡೆ ಕೆಲಸಕ್ಕೇ ಹೆಚ್ಚಾಗಿ ಹೋಗುತ್ತಿದ್ದರು. ಲ್ಯಾಂಬರೀನೆಯ ಆಸ್ಪತ್ರೆಯ ನಿರ್ಮಾಣದ ಕೆಲಸಕ್ಕೆ ಜನ ದೊರೆಯುವುದೇ ದುಸ್ತರವಾಯಿತು. ವಿಧಿಯಿಲ್ಲದೆ ಡಾ॥ ಶ್ವೈಯಿಟ್ಸರ್ ಮತ್ತು ಜಲಿಪ್ಸೆ ಪ್ರತಿಯೊಂದು ಬುಡಕಟ್ಟಿನವರು ತಂಗಿರುತ್ತಿದ್ದ ತಾಂಡಾಗಳಿಗೆ ಹೋಗಿ ಆಸ್ಪತ್ರೆ ಕೆಲಸಕ್ಕೆ ಬರುವಂತೆ ಪುಸಲಾಯಿಸ ಬೇಕಾಯಿತು. ಕೆಲವರನ್ನು ಹೊಗಳಿ ಹುರಿದುಂಬಿಸಿದರೆ, ಮತ್ತೆ ಕೆಲವರನ್ನು ಹೆಚ್ಚು ಕೂಲಿ ಹಾಗೂ ಆಹಾರ ಕೊಡುವ ಆಮಿಷ ತೋರಿಸಿ ಒಪ್ಪಿಸಬೇಕಾಯಿತು. ಇನ್ನೂ ಕೆಲವರಿಗೆ, ಕಾಯಿಲೆಯಾಗಿ ಆಸ್ಪತ್ರೆಗೆ ಬಂದರೆ ಚಿಕಿತ್ಸೆ ಮಾಡುವುದಿಲ್ಲವೆಂದು ಬೆದರಿಕೆ ಹಾಕಬೇಕಾಯಿತು. ಅಂತೂ ಬೀಳುತ್ತಿದ್ದ ಗೋಡೆಗಳನ್ನು ಸರಿಪಡಿಸಿ, ಮೇಲ್ಹಾವಣಿಯನ್ನು ಹೊದಿಸಿ ಕೆಲವೇ ಕಟ್ಟಡಗಳನ್ನು ದುರಸ್ತಿ ಮಾಡಿದರು.

ಆಸ್ಪತ್ರೆಯ ಕೆಲಸ ಶುರುವಾದಂತೆಯೇ ಅಲ್ಲಿ ಮತ್ತೆ ರೋಗಿಗಳ ಸಂತೆ. ವೈದ್ಯಕೀಯ ವಿಷಯಗಳ ಅರಿವಿದ್ದ ಹೆಲೆನ್ ಆಗ ಅಲ್ಲಿರದಿದ್ದುದು ತುಂಬಾ ಕಷ್ಟಕರವೆನಿಸಿತು. ಹಿಂದೆ ಸಹಾಯಕನಾಗಿ ಮೆಚ್ಚಿಗೆ ಗಳಿಸಿದ್ದ ಜೋಸೆಫ್ ಹೆಚ್ಚಿಗೆ ಕೂಲಿ ಸಿಗುತ್ತದೆಂಬ ಕಾರಣದಿಂದ ಮರ ಸಾಗಣೆಯ ಕಸುಬಿಗೆ ಸೇರಿಕೊಂಡಿದ್ದ. ನೋಯೆಲ್ ಜಲಿಪ್ಸೆ ವೈದ್ಯಕೀಯ ವಿಚಾರಗಳನ್ನು ಸರಿಯಾಗಿ ಅರಿತುಕೊಂಡು ಸಹಾಯ ಮಾಡಲು ಕೆಲಕಾಲ ಬೇಕಾಯಿತು.

ಆಸ್ಪತ್ರೆಗೆ ಈ ಸಾರಿ ಬರುತ್ತಿದ್ದ ಆಫ್ರಿಕನ್ನರು ಯುದ್ಧ ಕಾಲದಲ್ಲಿ ಅನ್ನಾಹಾರಗಳ ಕೊರತೆಯಿಂದ ಸೊರಗಿಹೋಗಿದ್ದರು. ಅವರಿಗೆ ತಗಲಿದ್ದ ರೋಗಗಳೂ ಉಲ್ಬಣಾವಸ್ಥೆಯಲ್ಲಿದ್ದು, ಅವರೆಲ್ಲಾ ಹಿಂಡುಹಿಂಡಾಗಿ ಸಾಯುತ್ತಿದ್ದರು. ಅವರನ್ನು ನೋಡಿಕೊಳ್ಳಲು ಸಂಬಂಧಿಗಳೂ ಇಲ್ಲದ ನಿರ್ಗತಿಕರಾಗಿದ್ದರು. ಅವರ ಗುಡಿಸಲು ಗಳಲ್ಲೇ ಸಾಯುವುದನ್ನು ತಪ್ಪಿಸಲು ಅಕ್ಕಪಕ್ಕದವರು ಆಸ್ಪತ್ರೆಗೆ ದಾಖಲುಮಾಡಿ ಪರಾರಿಯಾಗುತ್ತಿದ್ದರು.

ನಿದ್ದೆ - ಜ್ವರದ ಹಾವಳಿಯಂತೂ ಈ ಸಾರಿ ವಿಪರೀತವಾಗಿತ್ತು. ಅವರಲ್ಲನೇಕರು ತಲೆಕೆಟ್ಟು ಗಲಾಟೆ, ಹೊಡೆದಾಟಗಳಲ್ಲಿ ತೊಡಗುತ್ತಿದ್ದರು. ಉಪಟಳವನ್ನು ಸಹಿಸ ಲಾರದ.ಬಂಧುಗಳು ಅಂಥವರನ್ನು ತುಂಬಿದ ನದಿಗೆ ನೂಕಿ ಕೊಚ್ಚಿ ಹೋಗುವಂತೆ ಮಾಡುತ್ತಿದ್ದರಂತೆ. ಕುಷ್ಠರೋಗವೂ ಅತಿಯಾಗಿ ಹರಡಿತ್ತು. ಇಂಥ ಪರಿಸ್ಥಿತಿಯಲ್ಲಿ ಸರಿಯಾದ ಚಿಕಿತ್ಸೆ ಮಾಡುವುದಲ್ಲದೆ, ರೋಗಿಗಳನ್ನು ಹದ್ದುಬಸ್ತಿನಲ್ಲಿ ಇಡುವುದೂ ಅತ್ಯಂತ ಕಷ್ಟದ ಕೆಲಸವಾಯಿತು.

ಜೂನ್-ಜುಲೈ ತಿಂಗಳ ಸಮಯಕ್ಕೆ ಶ್ವೈಯಿಟ್ಸರ್‌ನ ಕೆಲಸ ಸ್ವಲ್ಪ ಹಾಯೆನಿಸುವ ಸೂಚನೆಗಳಾದವು. ಸ್ವಿಟ್ಸರ್‌ಲೆಂಡಿನಿಂದ ಎಂ. ಅಬ್ರೆಜೋಲ್ ಎಂಬ ಮಿಷನರಿ

ಯೊಬ್ಬರು ಮೋಟಾರುಚಾಲಿತ ದೋಣಿಯೊಡನೆ ಬಂದು ಶ್ವೈಯಿಟ್ಸರ್‌ನೊಡನೆ ಸಹಕರಿಸಿದರು. ನದಿಯಲ್ಲಿ ರೋಗಿಗಳನ್ನು ಸಾಗಿಸುವ ಕೆಲಸದಲ್ಲಿ ಅವರಿಂದ ಬಹಳ ಉಪಕಾರವಾಯಿತು. ಯುರೋಪಿನಲ್ಲಿ ಶೇಖರಿಸಿಟ್ಟಿದ್ದ ಮದ್ದು ಮತ್ತು ಆಹಾರ ಸಾಮಗ್ರಿಗಳ ಪೆಟ್ಟಿಗೆಗಳೂ ಅಷ್ಟರಲ್ಲೇ ಲ್ಯಾಂಬರೀನೆಯನ್ನು ತಲುಪಿದವು. ನಿದ್ದೆ ಜ್ವರದ ರೋಗಿಯೊಬ್ಬಳ ಗಂಡ – ಮೊನೆನ್ ಜಾಲಿ – ಮರಗೆಲಸದಲ್ಲಿ ನುರಿತ ವನಾಗಿದ್ದ. ಆಸ್ಪತ್ರೆಯ ಕಟ್ಟಡದ ಕೆಲಸಕ್ಕಾಗಿ ಅವನನ್ನು ಅಲ್ಲೇ ಉಳಿಸಿಕೊಂಡರು. ಜೋಸೆಫ್ ಸಹಾ ಮತ್ತೆ ಕೆಲಸಕ್ಕೆ ಹಾಜರಾದ. ಎಲ್ಲಕ್ಕಿಂತ ಮಿಗಿಲಾಗಿ ದಾದಿವೃತ್ತಿ ಕೆಲಸದಲ್ಲಿ ತರಪೇತಿ ಪಡೆದಿದ್ದ ಮಥಿಲ್ಡ ಕೊಟ್ಟಮನ್ ಎಂಬಾಕೆ ಲ್ಯಾಂಬರೀನೆಯ ಆಸ್ಪತ್ರೆಯ ಮಾನವೀಯ ಸೇವೆಗೆ ಮಾರುಹೋಗಿ ಸ್ವಯಂ ಸೇವಕಳಾಗಿ ಕೆಲಸ ಮಾಡಲು ಬಂದು ಸೇರಿದಳು.

ಆದರೂ ಕೆಲ ಸಮಯ ಹಲವು ತೊಂದರೆಗಳು ಉದ್ಭವಿಸುತ್ತಲೇ ಇದ್ದವು. ಯಂತ್ರಚಾಲಿತ ದೋಣಿಯಿಂದ ಸಹಾಯ ಮಾಡುತ್ತಿದ್ದ ಮಿಷನರಿ ಅಬ್ರೆಜೋಲ್ ಒಂದು ದಿನ ಹಠಾತ್ತಾಗಿ ನೀರಲ್ಲಿ ಮುಳುಗಿ ಅಸುನೀಗಿದರು. ಅಕ್ಟೋಬರ್‌ನಲ್ಲಿ ಡಾ॥ ವಿಕ್ಟರ್ ನೆಸ್‌ಮಾನ್ ಎಂಬ ಪರಿಣಿತ ವೈದ್ಯರೊಬ್ಬರು ಯುರೋಪಿನಿಂದ ಡಾ॥ ಶ್ವೈಯಿಟ್ಸರ್‌ನ ಕೆಲಸದಲ್ಲಿ ಸಹಾಯಮಾಡಲು ಬಂದು ಸೇರಿದರು. ಸ್ಟ್ರಾಸ್‌ಬರ್ಗ್‌ನಲ್ಲಿ ವೈದ್ಯಕೀಯ ವಿದ್ಯಾರ್ಥಿಯಾಗಿದ್ದಾಗ ನೆಸ್‌ಮಾನ್ ಸಹಪಾಠಿ ಯಾಗಿದ್ದು, ಅವನ ಆದರ್ಶಗಳಿಗೆ ಮಾರುಹೋಗಿದ್ದವರು. ರೋಗಿಗಳ ಚಿಕಿತ್ಸಾ ಕಾರ್ಯವನ್ನು ಡಾ॥ ನೆಸ್‌ಮಾನ್‌ಗೆ ವಹಿಸಿ, ಆಸ್ಪತ್ರೆಯ ಕಟ್ಟಡ ನಿರ್ಮಾಣ, ಪತ್ರ ವ್ಯವಹಾರಗಳ ಕಡೆ ಹೆಚ್ಚು ಗಮನಹರಿಸಲು ಶ್ವೈಯಿಟ್ಸರ್‌ಗೆ ಅನುಕೂಲವಾಯಿತು. ಆಸ್ಪತ್ರೆಯಲ್ಲಿ ನಡೆಯುತ್ತಿದ್ದ ಮಾನವೀಯ ಸೇವೆಯ ಕೀರ್ತಿ ಹೊರಗಿನ ಪ್ರಪಂಚಕ್ಕೆ ಹರಡಿದಂತೆಲ್ಲಾ ಯುರೋಪಿನಿಂದ ಹಲವಾರು ಕಿರಿಯ ವೈದ್ಯರು ಸ್ವಯಂ ಪ್ರೇರಿತರಾಗಿ ಸೇವೆ ಸಲ್ಲಿಸಲು ಲ್ಯಾಂಬರೀನೆಗೆ ಬರುತ್ತಿದ್ದರು. ಹಿರಿಯ ಡಾ॥ ಆಲ್ಬರ್ಟ್ ಶ್ವೈಯಿಟ್ಸರ್ ಈಗ ಅಲ್ಲಿನ ರೋಗಿಗಳಿಗೆ 'ದೊಡ್ಡ ಡಾಕ್ಟರ್' (LE GRAND DOCTEUR) ಎಂಬ ಪ್ರೀತಿಪಾತ್ರ ಬಿರುದಾಂಕಿತನಾದ.

ಆ ವರ್ಷದ ಮಳೆಗಾಲ ಸಮೀಪಿಸುತ್ತಿದ್ದಂತೆ ಮತ್ತೆ ಕಷ್ಟಕರ ಪರಿಸ್ಥಿತಿಗಳು ಉದ್ಭವವಾದವು. ಆಸ್ಪತ್ರೆ ವಿಸ್ತರಣೆ ಕೆಲಸ ಮುಂದುವರೆಯುತ್ತಿದ್ದು ಹಲವಾರು ಜನರು ಕೆಲಸದಲ್ಲಿ ತೊಡಗಿರುತ್ತಿದ್ದರು. ಅಂತಹ ಕೆಲಸಗಳಲ್ಲಿ ಅನುಭವವಿಲ್ಲದ ಅವರಲ್ಲನೇಕರು ಆಗಾಗ್ಗೆ ಆಘಾತಗಳಾಗಿ ಆಸ್ಪತ್ರೆಗೆ ಸೇರುತ್ತಿದ್ದುದು ಹೆಚ್ಚಾಯಿತು. ವಯಸ್ಸಿನಲ್ಲಿ ಅರ್ಧ ಶತಕಕ್ಕೆ ಬರುತ್ತಿದ್ದ ಡಾ॥ ಶ್ವೈಯಿಟ್ಸರ್‌ನ ಜೀವನದಲ್ಲಿ ನೆಮ್ಮದಿಯೆನ್ನುವುದೇ ಸುಳಿದಿರಲಿಲ್ಲ. ಆ ಸಮಯದಲ್ಲಿ ಮತ್ತೊಂದು ಮೋಟಾರ್ ದೋಣಿ

ಬಳುವಳಿಯಾಗಿ ಬಂದಿತು. ಮಾರ್ಚ್ ತಿಂಗಳ ಹೊತ್ತಿಗೆ ಸ್ವಿಟ್ಸರ್‌ಲೇಂಡಿನಿಂದ ಡಾ|| ಮಾರ್ಕ್ ಲ್ಯೂಟರ್‌ಬರ್ಗ್ ಎಂಬ ಪರಿಣಿತ ವೈದ್ಯರು ಲ್ಯಾಂಬರೀನೆಗೆ ಬಂದು ಸೇರಿದರು. ಅಲ್ಲಿ ಈಗ ಹಲವು ವಿಭಾಗಗಳಲ್ಲಿ ನುರಿತ ವೈದ್ಯರ ತಂಡಗಳು ಇದ್ದವು. ಅವರಿಗೆಲ್ಲಾ ಪ್ರತ್ಯೇಕ ಜವಾಬ್ದಾರಿಗಳನ್ನು ವಹಿಸಲಾಗಿತ್ತು. ಡಾ|| ನೆಸ್‌ಮಾನ್ ಆಸ್ಪತ್ರೆಯಲ್ಲಿ ಸಾಮಾನ್ಯ ರೀತಿಯ ಕಾಯಿಲೆಗಳಿರುವ ರೋಗಿಗಳನ್ನು ಉಪಚರಿಸುವ ಜವಾಬ್ದಾರಿಯ ಜೊತೆ, ಮೋಟಾರ್ ದೋಣಿಯನ್ನು ಚಲಿಸುವುದರಲ್ಲೂ ನಿರತರಾಗಿರುತ್ತಿದ್ದರು. ಡಾ|| ಲ್ಯೂಟರ್‌ಬರ್ಗ್ ಶಸ್ತ್ರಚಿಕಿತ್ಸೆಯ ಜವಾಬ್ದಾರಿ ಹೊತ್ತಿದ್ದರು. ಆಸ್ಪತ್ರೆಯ ಕಟ್ಟಡಗಳ ವಿಸ್ತರಣೆ, ಪತ್ರವ್ಯವಹಾರ ಮತ್ತು ಆಡಳಿತ ನಿರ್ವಹಣೆ ಡಾ|| ಶ್ವೈಯಿಟ್ಸರ್‌ದಾಗಿತ್ತು. ಹೊಸದಾಗಿ ಬಂದ ಔಷಧಗಳ ಪ್ರಯೋಗ ಮತ್ತು ಸಂಶೋಧನೆಗಳನ್ನೂ ಖುದ್ದಾಗಿ ಅವನೇ ನಡೆಸುತ್ತಿದ್ದ.

ಬೇಸಗೆ ಆರಂಭವಾಗುತ್ತಿದ್ದಂತೆ ಗನ್ಸ್‌ಬಾಕ್‌ನಲ್ಲಿ ಡಾ|| ಶ್ವೈಯಿಟ್ಸರ್‌ನ ತಂದೆ ಪಾದ್ರಿ ಲೂಯಿಸ್ ತೀರಿಕೊಂಡ ವಾರ್ತೆ ಅವನನ್ನು ಕೆಲ ಕಾಲ ತಲ್ಲಣಗೊಳಿಸಿತು. ಲ್ಯಾಂಬರೀನೆಯ ಸುತ್ತಮುತ್ತಲ ಪ್ರದೇಶಗಳಲ್ಲಿ ಭಯಾನಕ ಆಮಶಂಕೆ ವ್ಯಾಧಿ ಶುರುವಾಗಿ ನೂರಾರು ಜನರನ್ನು ಬಲಿ ತೆಗೆದುಕೊಂಡಿತು. ಇದರಿಂದ ಆಸ್ಪತ್ರೆಯ ಕೆಲಸ ಇಮ್ಮಡಿಯಾಯಿತು. ಆಮಶಂಕೆಗೆ ಆಗ ಲಭ್ಯವಿದ್ದ ಮದ್ದುಗಳು ಅಷ್ಟೊಂದು ಪರಿಣಾಮಕಾರಿಯಾಗಿ ಕೆಲಸ ಮಾಡುತ್ತಿರಲಿಲ್ಲ. ತಡೆಗಟ್ಟಲು ಅತ್ಯವಶ್ಯಕವಾದ ಶುಚಿತ್ವದ ನಿಯಮಗಳ ಬೋಧನೆ ಆಫ್ರಿಕನ್ನರೆದುರು ಬರೇ ಅರಣ್ಯರೋದನ ವಾಗುತ್ತಿತ್ತು. ಆದರಿಂದ ನರಳಿ ಸಾಯುವುದಾದರೂ ಸರಿ, ರೋಗಿಯಿಂದ ಪ್ರತ್ಯೇಕ ವಾಗಿದ್ದು ಶುಚಿತ್ವದ ನಿಯಮಗಳನ್ನು ಅನುಸರಿಸುವುದಕ್ಕೆ ಅವರು ತಯಾರಿದ್ದವರಲ್ಲ. ಆಮಶಂಕೆಯ ಮಲದಿಂದ ಕಲುಷಿತವಾದ ನೀರನ್ನು ಬಳಸ ಬಾರದೆಂದು ಎಷ್ಟೇ ಎಚ್ಚರಿಕೆ ಕೊಟ್ಟರೂ ಅದು ಅವರ ತಲೆಗೆ ಹಿಡಿಸುತ್ತಿರಲಿಲ್ಲ. ಇಂಥ ಪರಿಸ್ಥಿತಿಯಿಂದ ಬೇಸತ್ತ ಡಾ|| ಶ್ವೈಯಿಟ್ಸರ್ ಒಂದು ಬಾರಿ ''ಇಂಥ ಮೂರ್ಖ ಕಾಡು ಮನುಷ್ಯರಿಗೆ ವೈದ್ಯನಾಗಿ ಬಂದ ನಾನೆಷ್ಟು ಹೆಡ್ಡನಿರಬೇಕು'' ಎಂದು ತನ್ನನ್ನು ತಾನೇ ಹಳಿದು ಕೊಂಡನಂತೆ. ''ಹೌದು, ಡಾಕ್ಟರೇ ಈ ಭೂಮಿಯಲ್ಲಿ ನೀವು ಹೆಡ್ಡರೆ, ಆದರೆ ಆ ಸ್ವರ್ಗದಲ್ಲಲ್ಲ'' ಎಂದು ಹತ್ತಿರದಲ್ಲೇ ಇದ್ದ ಜೋಸೆಫ್ ದನಿಗೂಡಿಸಿ ದನಂತೆ. ಈ ಸಂಭಾಷಣೆ ಶ್ವೈಯಿಟ್ಸರ್ 'ಪುರಾಣ'ದಲ್ಲಿ ಸೇರಿ ಪ್ರಸಿದ್ಧಿ ಪಡೆದಿದೆ. ಅವನ ಅತ್ಯಂತ ಕಟು ವಿಮರ್ಶಕರ ಅವಹೇಳನಕ್ಕೂ ಗುರಿಯಾಗಿದೆ. ಜೀವನದ ಎಲ್ಲಾ ಸೌಲಭ್ಯ ಗಳನ್ನು ತ್ಯಾಗಮಾಡಿ ಅನಾಗರಿಕ ಜನರ ಸೇವೆಗಾಗಿ ಜೀವಮಾನವನ್ನೇ ಮುಡಿಪಾಗಿಟ್ಟು ಶ್ರಮಿಸುವ ಎಂಥವರಿಗಾದರೂ ಅವರ ಸೇವೆಯ ಪ್ರತಿಫಲ ಪಡೆದವರಿಂದ ನಿರೀಕ್ಷಿಸದ ಮಟ್ಟದ ನಡೆವಳಿಕೆ ಕಂಡುಬರದಿದ್ದಾಗ ನಿರಾಶೆ

ಯಾಗುವುದು ಸ್ವಾಭಾವಿಕವೆಂದು ಶ್ವೆಯಿಟ್ಸರ್‌ನನ್ನು ಹೊಗಳಿದ ಅಭಿಮಾನಿಗಳೂ ಇಲ್ಲದಿರಲಿಲ್ಲ.

ಬೇಸಗೆ ಕಳೆಯುವಷ್ಟರಲ್ಲಿ ಭೀಕರ ಬರಗಾಲ ಲ್ಯಾಂಬರೀನೆಯ ಸುತ್ತಮುತ್ತಲ ಪ್ರದೇಶವನ್ನಾವರಿಸಿತು. ಶ್ವೆಯಿಟ್ಸರ್ ಮೊದಲೇ ಶೇಖರಿಸಿಕೊಂಡಿದ್ದ ಅಕ್ಕಿ ಆ ಸಮಯದಲ್ಲಿ ಪ್ರಯೋಜನಕ್ಕೆ ಬಂದರೂ, ಆಮಶಂಕೆಯಿಂದ ಬಳಲಿ ತಿರುಗಾಡುವ ಅಸ್ಥಿಪಂಜರಗಳಂತಾಗಿದ್ದ ರೋಗಿಗಳಿಗೆ ಹೆಚ್ಚಿನ ಪ್ರಯೋಜನವಾಗಲಿಲ್ಲ. ಆ ವರ್ಷ ಮಳೆಗಾಲದಲ್ಲಿ ವಿಪರೀತ ಮಳೆ ಬಿರುಗಾಳಿಯಿಂದ ಲ್ಯಾಂಬರೀನೆಯ ವಾಸಿಗಳು ತತ್ತರಿಸಿದರು.

ಡಾ॥ ಆಲ್ಬರ್ಟ್ ಶ್ವೆಯಿಟ್ಸರ್ ಎರಡನೆಯ ಸಾರಿ ಲ್ಯಾಂಬರೀನೆಗೆ ಬರುವಾಗ ಆ ಪ್ರದೇಶದಲ್ಲಿ ಹೆಚ್ಚು ಅನುಕೂಲತೆಗಳಿರುವ ವಿಸ್ತಾರವಾದ ಆಸ್ಪತ್ರೆಯೊಂದನ್ನು ನಿರ್ಮಿಸುವ ಯೋಚನೆ ಮಾಡಿಕೊಂಡಿದ್ದ. ಬಂದಾಕ್ಷಣ ಕೆಲಸವನ್ನು ತಕ್ಷಣ ಶುರು ಮಾಡಬೇಕಾಗಿದ್ದರಿಂದ ಪಾಳುಬಿದ್ದ ಹಳೇ ಕಟ್ಟಡಗಳನ್ನೇ ದುರಸ್ತಿ ಮಾಡಿಕೊಳ್ಳುವುದು ಅನಿವಾರ್ಯವಾಯಿತು. ಮತ್ತೆ ರೋಗಿಗಳ ಸಂಖ್ಯೆ ಹೆಚ್ಚಾಗಿ ಆಸ್ಪತ್ರೆಯಲ್ಲಿ ಅವರಿಗೆಲ್ಲಾ ವಸತಿಯನ್ನೊದಗಿಸುವುದು ಕಷ್ಟವಾಗಿ ಪರಿಣಮಿಸಿತು. ಆಸ್ಪತ್ರೆ ಈಗಿರುವ ಜಾಗ ಒಂದು ಕಡೆ ಸದಾ ತುಂಬಿ ಹರಿಯುವ ಓಗಾವೆ ನದಿ. ಇನ್ನೊಂದು ಕಡೆ ಕಡಿದಾದ ಕಾಡಿನ ಇಳಿಜಾರು, ಮತ್ತೊಂದು ಕಡೆ ಕೆಸರಿನಿಂದ ತುಂಬಿದ ಜೌಗುಪ್ರದೇಶ, ಮಗದೊಂದು ಕಡೆ ಮಿಷನ್‌ನವರು ಬೀಡುಬಿಟ್ಟಿದ್ದ ಪ್ರದೇಶ ಗಳಿಂದ ಆವರಿಸಿ ಕಿಷ್ಕಿಂಧೆಯಂತಾಗಿತ್ತು. ಕುಷ್ಠರೋಗ ಮತ್ತು ನಿದ್ದೆ - ಜ್ವರದ ಹುಚ್ಚಿನವರಿಗೆ ಪ್ರತ್ಯೇಕ ವಸತಿ ನಿರ್ಮಾಣಕ್ಕೆ ಅಲ್ಲಿ ಅವಕಾಶಗಳಿರಲಿಲ್ಲ, ರೋಗಿಗಳ ಜೊತೆ ಬರುತ್ತಿದ್ದ ಸಂಬಂಧಿಗಳು ತಂಗಲೂ ಸಹಾ ಪ್ರತ್ಯೇಕ ವಸತಿಗಳಾಗಬೇಕಿತ್ತು. ಈ ಸಮಸ್ಯೆಗಳ ಪರಿಹಾರಕ್ಕೆ ವಿಶಾಲವಾದ ಜಾಗದಲ್ಲಿ ಆಸ್ಪತ್ರೆಯನ್ನು ಪುನರ್‌ನಿರ್ಮಾಣ ಮಾಡುವುದೇ ಸರಿಯಾದ ಮಾರ್ಗ.

ಡಾ॥ ಶ್ವೆಯಿಟ್ಸರ್ ತನ್ನ ಕುಟೀರದಿಂದ ಸ್ವಲ್ಪ ದೂರದಲ್ಲಿ ವಿರಳವಾಗಿ ಮರ ಗಿಡಗಳು ಬೆಳೆದಿದ್ದ ವಿಶಾಲವಾದ ಪ್ರದೇಶವನ್ನು ಕೆಲವು ದಿನಗಳ ಹಿಂದೆ ಕಂಡು ಕೊಂಡಿದ್ದ. ನೂರಾರು ಎಕರೆ ವಿಸ್ತೀರ್ಣವಾಗಿದ್ದ ಆ ಜಾಗದ ಬಹುಪಾಲು ಸಮತಟ್ಟಾಗಿಯೂ ಇತ್ತು. ತಾನು ಯೋಚಿಸಿಕೊಂಡಿದ್ದ ಆಸ್ಪತ್ರೆಯ ವಿವಿಧ ವಿಭಾಗಗಳ ಸಮುಚ್ಚಯಗಳಿಗೆ ಸಾಕಾಗುವಷ್ಟು ಜಾಗ ಅಲ್ಲಿ ಇತ್ತು. ಆಸ್ಪತ್ರೆಯ ರೋಗಿಗಳ ಉಪಯೋಗಕ್ಕಾಗಿ ಹಣ್ಣು ಹಂಪಲು ತರಕಾರಿ ಮತ್ತಿತರ ಆಹಾರ ವಸ್ತುಗಳನ್ನು ಬೆಳೆದುಕೊಳ್ಳಲು ಸಹಾ ಜಾಗ ಸಾಕಾಗುವಂತಿತ್ತು. ಆದರೆ ಅಡನಿನಲೊಂಗೋ ಎಂಬ ಆ ಪ್ರದೇಶ ಸರ್ಕಾರದ ಒಡೆತನದಲ್ಲಿದ್ದು ಅದನ್ನು

ಪಡೆದುಕೊಳ್ಳುವುದು ಅಸಾಧ್ಯವೇ ಸರಿ ಎನಿಸಿತು.

ಪ್ರಯತ್ನ ಸಫಲವಾಗುವ ಭರವಸೆ ಇರದಿದ್ದರೂ ಡಾ॥ ಶ್ವೆಯಿಟ್ಸರ್ ಆ ಪ್ರದೇಶದ ಆಡಳಿತಾಧಿಕಾರಿಯನ್ನು ಭೇಟಿ ಮಾಡಿ ತನ್ನ ಯೋಜನೆಯನ್ನು ವಿವರಿಸಿದ. ಆಡಳಿತಾಧಿಕಾರಿ, ಶ್ವೆಯಿಟ್ಸರ್‌ನೊಡನೆ ತುಂಬಾ ಸೌಜನ್ಯದಿಂದ ವರ್ತಿಸಿದನಲ್ಲದೆ, ಆಸ್ಪತ್ರೆಯ ಉಪಯೋಗಕ್ಕೆ ಬೇಕಾಗಬಹುದಾದ ೧೭೦ ಎಕರೆ ಪ್ರದೇಶವನ್ನು ಶ್ವೆಯಿಟ್ಸರ್‌ನೇ ಅಳತೆ ಮಾಡಿಕೊಂಡು ಬಾಂದು ಕಲ್ಲುಗಳನ್ನು ಹಾಕಿಸಿ ಕೊಳ್ಳಬಹುದೆಂದು ಅಪ್ಪಣೆ ಕೊಡಿಸಿದ. ಡಾ॥ ಶ್ವೆಯಿಟ್ಸರ್ ಎಷ್ಟು ಕಾಲ ಬೇಕಾದರೂ ಅಲ್ಲಿ ಆಸ್ಪತ್ರೆ ನಡೆಸಬಹುದೆಂತಲೂ, ಅಲ್ಲದೆ ಅಲ್ಲಿ ನಿರ್ಮಾಣವಾಗುವ ಕಟ್ಟಡಗಳು, ಮತ್ತಿತರ ಸ್ವತ್ತುಗಳ ಒಡೆತನವೂ ಅವನದೇ ಆಗಿರುತ್ತದೆಂದು ತಿಳಿಸಿದ. ಅವನಿಗೆ ವಹಿಸಿದ ಭೂಮಿಯ ಕಾಲುಭಾಗದಲ್ಲಿ ಯಾವುದಾದರೂ ಆಹಾರ ವಸ್ತುಗಳನ್ನು ಬೆಳೆಯಬೇಕೆಂಬುದೊಂದೇ ಆಡಳಿತಾಧಿಕಾರಿ ವಿಧಿಸಿದ ಷರತ್ತು! ಹಾಲನ್ನು ಉಣ್ಣುವ ಬಯಕೆಯ ರೋಗಿಗಳಿಗೆ ವೈದ್ಯ ಅದನ್ನೇ ಉಣ್ಣುವಂತೆ ಹೇಳಿದಷ್ಟು ಸಂತೋಷದಿಂದ ಶ್ವೆಯಿಟ್ಸರ್ ಆಡಳಿತಾಧಿಕಾರಿಯಿಂದ ಬೀಳ್ಕೊಂಡ !

ಹೊಸದೊಂದು ಆಸ್ಪತ್ರೆಯನ್ನು ಅಡನಿನಲೊಂಗೋದಲ್ಲಿ ನಿರ್ಮಾಣ ಮಾಡುವ ಯೋಜನೆ ಈತನಕ ಡಾ॥ ಶ್ವೆಯಿಟ್ಸರ್‌ನ ಮನಸ್ಸಲ್ಲಿ ಮಾತ್ರ ಮೂಡಿತ್ತು. ಆಡಳಿತಾಧಿಕಾರಿಯ ಅಪ್ಪಣೆ ದೊರೆತಾಕ್ಷಣ ಆಸ್ಪತ್ರೆಯ ಸಿಬ್ಬಂದಿವರ್ಗದವರನ್ನೆಲ್ಲಾ ಒಂದೆಡೆ ಸೇರಿಸಿ ತನ್ನ ನಿರ್ಧಾರವನ್ನು ಹೊರಗೆಡಹಿದ. ಅವನ ಈ ಹಠಾತ್ ನಿರ್ಧಾರ ಅವರನ್ನೆಲ್ಲಾ ಚಕಿತಗೊಳಿಸಿತು. ಯೋಜನೆಯ ವಿವರವನ್ನು ತಿಳಿದ ಮೇಲೆ ತಮ್ಮ ಮೇಲೆ ಬೀಳಬಹುದಾದ ಜವಾಬ್ದಾರಿಯನ್ನು ಕುರಿತು ಅವರೆಲ್ಲಾ ಚಿಂತಿಸಿದರು. ನುರಿತ ಕೆಲಸಗಾರರು ಸಿಗದಿರುವ ದುರ್ಗಮ ಪ್ರದೇಶದಲ್ಲಿ ಅಂಥ ಯೋಜನೆಯನ್ನು ಕಾರ್ಯಗತ ಮಾಡುವುದು ಸುಲಭವಲ್ಲ. ಆದರೂ ನಿರ್ಧಾರವನ್ನು ಬದಲಿಸುವ ಜಾಯಮಾನ ಅವನದಲ್ಲ. ಈ ಸಾರಿ ಲ್ಯಾಂಬರೀನೆಗೆ ಬಂದು ಎರಡು ವರ್ಷಗಳಾಗುತ್ತ ಬಂದಿತ್ತು. ಯುರೋಪಿಗೆ ಹೋಗಿ ಹೆಂಡತಿ ಮಗುವನ್ನು ನೋಡಿ, ವಿಶ್ರಾಂತಿ ಪಡೆದುಬರಬೇಕೆಂಬ ತನ್ನ ಮನಸ್ಸಿನಲ್ಲಿ ಇನ್ನೊಂದು ಹಂಬಲವನ್ನು ಮೊಳಕೆಯಲ್ಲೇ ಚಿಗುಟಿ ಹಾಕಬೇಕಾಯಿತು.

ಡಾ॥ ಆಲ್ಬರ್ಟ್ ಶ್ವೆಯಿಟ್ಸರ್ ಹೊಸದೊಂದು ಆಸ್ಪತ್ರೆಯ ನಿರ್ಮಾಣದ ಗುರುತರ ಜವಾಬ್ದಾರಿಯನ್ನು ಕಾರ್ಯಗತಗೊಳಿಸುವ ನಿರ್ಧಾರ ಮಾಡುವ ಸಮಯಕ್ಕೆ ಜೀವನದ ಅರ್ಧಶತಮಾನ ದಾಟಿದ್ದ. ಆದರೂ ಎದೆಗುಂದದೇ ಕೆಲಸದ ಆರಂಭ ಮಾಡಿದ. ಅದಕ್ಕೆ ಬೇಕಾಗುವ ಕೆಲಸಗಾರರ ತಂಡವೊಂದನ್ನು ಕಲೆಹಾಕುವುದು ಮೊದಲ ಕರ್ತವ್ಯ. ಆ ಸಮಯದಲ್ಲಿ ಮರಸಾಗಣೆಯ ಕಾರ್ಯ

ಇಳಿಮುಖವಾಗಿದ್ದು ದೇಶೀಯ ಕೆಲಸಗಾರರು ಸುಲಭವಾಗಿ ದೊರೆಯುವ ಸಾಧ್ಯತೆಗಳಿದ್ದವು. ಅಕ್ಕಿ ಧಾರಣೆ ಕಡಿಮೆ ಇರುವಾಗಲೇ ಸಾಕಷ್ಟು ದಾಸ್ತಾನು ಸಹಾ ಮಾಡಿಕೊಂಡಿದ್ದ. ನೀಗ್ರೋಗಳಿಗೆ ಅಗ್ಗದಲ್ಲಿ ಆಹಾರ ವಸ್ತುಗಳು ಮತ್ತು ಸಂಬಳ ಕೊಡುವ ಆಮಿಷ ತೋರಿಸಿ ಆಸ್ಪತ್ರೆ ನಿರ್ಮಾಣದ ಕೆಲಸಕ್ಕೆ ಬರುವಂತೆ ಒಲಿಸಿ ಕೊಳ್ಳುವುದು ಈ ಸಾರಿ ಕಷ್ಟವಾಗಲಿಲ್ಲ. ಸೋಮಾರಿತನ ಮತ್ತು ಬೇಜವಾಬ್ದಾರಿತನಕ್ಕೆ ಹೆಸರುವಾಸಿಯಾದ ಅವರಿಂದ ಸರಿಯಾದ ರೀತಿಯಲ್ಲಿ ಕೆಲಸ ಮಾಡಿಸುವುದರಲ್ಲಿ ಮಾತ್ರ ತಲೆ ಚಿಟ್ಟು ಹಿಡಿದುಹೋಗುತ್ತಿತ್ತು. ಯಾರಾದರೊಬ್ಬರು –ಸ್ವತಃ ಶ್ವೈಯಿಟ್ಸರ್‌ನೇ– ಅವರ ಜತೆ ಕೆಲಸದಲ್ಲಿ ಮಗ್ನರಾಗಿದ್ದರೆ ಮಾತ್ರ ಅವರು ಕೆಲಸ ಮಾಡುತ್ತಿದ್ದರು. ಕೆಲಸದ ನಡುವೆ ಯಾವುದಾದರೂ ಸಣ್ಣ ಘಟನೆ ನಡೆದರೆ ಯಾರ ಕೆಲಸವೂ ಮುಂದುವರಿಯದಂತೆ ಹರಟೆಯಲ್ಲಿ ಕಾಲ ಹಾಕುತ್ತಿದ್ದರು.

ಅಡನಿನಲೊಂಗೋದಲ್ಲಿ ಮರ ಕಡಿದು ನೆಲ ಸಮ ಮಾಡುವ ಕೆಲಸ ೧೯೨೫ರ ಶರತ್ಕಾಲದಲ್ಲಿ ಆರಂಭವಾಯಿತು. ಕಲ್ಲುಬಂಡೆಗಳನ್ನು ತೆಗೆದುಹಾಕಿ ಜಾಗವನ್ನು ಒಂದು ಮಟ್ಟಕ್ಕೆ ತರುವುದಕ್ಕೆ ಒಂದು ವರ್ಷವೇ ಬೇಕಾಯಿತು. ಅಲ್ಲಿ ನೆಲಸಿದ್ದ ಹಾವು, ಚೇಳು ಮುಂತಾದ ವಿಷಜಂತುಗಳನ್ನು ನಾಶ ಮಾಡುವುದೇ ಮಹತ್ತರ ಕೆಲಸವಾಯಿತು. ಶ್ವೈಯಿಟ್ಸರ್ ಆಸ್ಪತ್ರೆಯ ಆಡಳಿತ ನಿರ್ವಹಣೆಯ ಜೊತೆಗೆ ಕಟ್ಟಡಗಳ ಜಾಗ, ವಿನ್ಯಾಸ, ಅಲ್ಲಿ ಬೆಳೆಯಲು ನಿಯೋಜಿಸಿದ್ದ ತರಕಾರಿ ಮತ್ತಿತರ ಆಹಾರ ವಸ್ತುಗಳ ಯೋಜನೆಯಲ್ಲಿ ಮುಳುಗಿ ಹೋದ. ಯುರೋಪಿನಲ್ಲಿದ್ದ ಹಿತೈಷಿಗಳಿಗೆ ಹೊಸ ಆಸ್ಪತ್ರೆಯನ್ನು ಕಟ್ಟುವ ವಿಷಯವನ್ನು ತಿಳಿಸಿದ್ದಲ್ಲದೆ, ಅದರ ಪ್ರಗತಿಯನ್ನು ಆಗಾಗ್ಗೆ ವಿವರಿಸುವ ಕಾರ್ಯವೂ ಅವನಿಂದಲೇ ಆಗಬೇಕಾಗಿತ್ತು. ಆಸ್ಪತ್ರೆಯ ನಿರ್ಮಾಣಕ್ಕೆ ದಾನಿಗಳಿಂದ ಹಣ ಒದಗಿಸಿಕೊಳ್ಳಲು ಆ ತೆರನ ಸಂಪರ್ಕ ಅನಿವಾರ್ಯವಾಗಿತ್ತು.

ಲ್ಯಾಂಬರೀನೆಯಂಥ ಉಷ್ಣವಲಯ ಹಾಗೂ ಸದಾ ಮಳೆ ನೀರು ಹರಿಯುವ ಪ್ರದೇಶದಲ್ಲಿ ಕಟ್ಟುವ ಕಟ್ಟಡಗಳ ಅಡಿಪಾಯ, ವಿನ್ಯಾಸಗಳು ಇತರ ಕಡೆಗಳಿಗಿಂತ ವಿಭಿನ್ನವಾಗಿರಬೇಕಾಗುತ್ತದೆ. ಮೇಲಿನಿಂದ ರಭಸದಿಂದ ಹರಿದುಬರುವ ನೀರು ಕಟ್ಟಡದ ಕೆಳಗೆ ಸರಾಗವಾಗಿ ಹರಿದುಹೋಗಲು ಮರದ ದಿಣ್ಣೆಗಳಿಂದ ಅಟ್ಟಣಿಗೆಯಂಥ ರಚನೆಯನ್ನು ನಿರ್ಮಿಸಿ ಅದರ ಮೇಲೆ ಕಟ್ಟಡಗಳನ್ನು ಕಟ್ಟುವುದು ಅಲ್ಲಿಯ ವಾಡಿಕೆ. ಲ್ಯಾಂಬರೀನೆಯ ಪ್ರದೇಶದಲ್ಲಿ ಒಳ್ಳೇ ಜಾತಿಯ ಗಟ್ಟಿ ಮರಗಳು ಸಿಗುತ್ತಿದ್ದುದು ಆಶಾದಾಯಕ ಸಂಗತಿ. ಮೇಲ್ಛಾವಣಿಗೆಗಳಿಗೆ ಬೇಕಾಗುವ ಜಿಂಕ್ ಶೀಟ್‌ಗಳನ್ನು ಯುರೋಪಿನಿಂದಲೇ ತರಿಸುವ ಏರ್ಪಾಡಾಯಿತು.

ಕಟ್ಟಡಗಳ ನಿರ್ಮಾಣಕ್ಕೆ ಯೋಜನಾಬದ್ಧವಾದ ಅಳತೆ ಆಕಾರಗಳಿಂದ ಮರಗೆಲಸವನ್ನು ಮಾಡಲು ನಿರಕ್ಷರಿಯಾದ ಮೊನೆನ್‌ಜಾಲಿಗೆ ಸಾಧ್ಯವಾಗುತ್ತಿರಲಿಲ್ಲ.

ಆದಕ್ಕಾಗಿ ನುರಿತ ಬಡಗಿಯೊಬ್ಬನನ್ನು ಸ್ವಿಟ್ಸರ್‌ಲೆಂಡಿನಿಂದಲೇ ಕರೆಸಿಕೊಂಡಿದ್ದ. ಹೀಗೆ ಭರದಿಂದ ಮುಂದುವರಿದ ಆಸ್ಪತ್ರೆಯ ಕೆಲಸ ಒಂದು ಹಂತಕ್ಕೆ ಬಂದು ೧೯೨೭ರ ಆದಿಭಾಗದಲ್ಲಿ ಕೊನೆಗೊಂಡಿತ್ತು.

ಅಡನಿನಲೊಂಗೋದಲ್ಲಿ ಆಸ್ಪತ್ರೆಯ ಕಟ್ಟಡ ನಿರ್ಮಾಣವಾಗುತ್ತಿದ್ದಾಗಲೂ ಹಳೇ ಆಸ್ಪತ್ರೆಯಲ್ಲಿ ಕೆಲಸ ಇನ್ನೂ ಹೆಚ್ಚಿನ ಸ್ಫೂರ್ತಿಯಿಂದ ನಡೆಯುತ್ತಲೇ ಇತ್ತು. ಡಾ|| ನೆಸ್‌ಮಾನ್ ವಿಶ್ರಾಂತಿಗಾಗಿ ಸ್ವದೇಶಕ್ಕೆ ಹಿಂದಿರುಗಿದ್ದರು. ಆಲ್‌ಸೇಶ್‌ನವರೇ ಆದ ಡಾ|| ಫ್ರೆಡರಿಕ್ ಟ್ರೆನ್ಸ್ ಅವರ ಜಾಗಕ್ಕೆ ಬಂದರು. ಹೊಸ ಆಸ್ಪತ್ರೆಯ ಸುವ್ಯವಸ್ಥಿತ ಯೋಜನೆಯನ್ನು ತಯಾರಿಸುವಲ್ಲಿ ಡಾ|| ಟ್ರೆನ್ಸ್ ಪ್ರಮುಖ ಪಾತ್ರ ವಹಿಸಿದರು. ಯಾವುದೇ ಯೋಜನೆ ಮನಸ್ಸಿಗೆ ಹೊಳೆಯಿತೆಂದರೆ ಅದನ್ನು ಬದಲಾಯಿಸದ ಹಠಮಾರಿತನಕ್ಕೆ ಡಾ|| ಶ್ವೈಯಿಟ್ಸರ್ ಹೆಸರುವಾಸಿ. ಆಸ್ಪತ್ರೆಯಲ್ಲಿ ಕೆಲಸ ನಡೆಯುವಾಗ ಒಂದೊಂದು ವಿಭಾಗಕ್ಕೂ ಸರಿಯಾದ ಹೊಂದಾಣಿಕೆ ಇರುವಂತೆ ಏರ್ಪಾಡುಗಳನ್ನು ಮಾಡುವಲ್ಲಿ ಟ್ರೆನ್ಸ್ ಎತ್ತಿದ ಕೈ. ಡಾ|| ಶ್ವೈಯಿಟ್ಸರ್ ಅವರ ಮಾತುಗಳನ್ನು ಕೇಳಿ ಬದಲಾವಣೆಗಳಿಗೆ ಒಪ್ಪುತ್ತಿದ್ದುದು ಆಶ್ಚರ್ಯದ ಸಂಗತಿಯೆನ್ನಲಾಗಿದೆ. ಡಾ|| ಟ್ರೆನ್ಸ್ ಲ್ಯಾಂಬರೀನೆಯಲ್ಲಿರುವಾಗ ಪ್ರಚಲಿತವಿದ್ದ ಭೀಕರಸ್ವರೂಪದ ಆಮಶಂಕೆಗೆ ಓಗಾವೆ ನದಿಯಲ್ಲಿರುತ್ತಿದ್ದ ಕಾಲರಾ ರೋಗದಂಥ ಜೀವಾಣುಗಳೇ ಕಾರಣವೆಂಬುದನ್ನು ತೋರಿಸಿಕೊಟ್ಟಿದ್ದರು. ಅದಕ್ಕೆ ಪರಿಣಾಮ ಕಾರಿಯಾದ ಚಿಕಿತ್ಸಾ ವಿಧಾನವನ್ನು ರೂಪಿಸಿದ್ದಲ್ಲದೆ, ಅದರ ನಿರೋಧಕ ವ್ಯಾಕ್ಸೀನನ್ನೂ ತಯಾರಿಸುವಲ್ಲಿ ಯಶಸ್ವಿಯಾದರು. ಈ ಬಗೆಗೆ ಅವರು ತಯಾರಿಸಿದ ಲೇಖನ ವೈದ್ಯಲೋಕದ ಗಮನ ಸೆಳೆಯಿತು. ಶಸ್ತ್ರಚಿಕಿತ್ಸಾ ಪರಿಣಿತನೆಂದು ಲ್ಯಾಂಬರೀನೆಗೆ ಬಂದಿದ್ದ ಡಾ|| ಟ್ರೆನ್ಸ್ ಮುಂದೆ ರೋಗಾಣುಗಳ ಸಂಶೋಧನೆಯಲ್ಲೂ ಹೆಸರು ಗಳಿಸಿ ಪ್ರಖ್ಯಾತರಾದರು. ಈ ಸಂಶೋಧನೆಯ ಪರಿಣಾಮದಿಂದ ನದಿಯ ನೀರು ಕುಡಿಯುವುದನ್ನು ತಡೆಯಲು ಬಾವಿಗಳನ್ನು ತೋಡಿಸಿದರು. ಈ ನೀರಿನ ಬಳಕೆಯಿಂದ ಆಮಶಂಕೆಯನ್ನು ಹತೋಟಿಯಲ್ಲಿಡಲು ಸಾಧ್ಯವಾಯಿತು. ಇದೇ ರೀತಿ ನಿದ್ದೆ ಜ್ವರಕ್ಕಾಗಿ ಹೊಸ ಮದ್ದಿನ ಪ್ರಯೋಗವೂ ಇಲ್ಲೇ ನಡೆದು ಸ್ವಲ್ಪ ಮಟ್ಟಿಗೆ ಯಶಸ್ಸು ದೊರೆತಿತ್ತು. ಕಾಲುಗಳಲ್ಲಿ ಸದಾ ಕೊಳೆತು ನಾರುತ್ತಿದ್ದ ಹುಣ್ಣುಗಳ ಚಿಕಿತ್ಸೆಯ ಬಗೆಗೆ ಪ್ರಯೋಗಗಳು ನಡೆಯುತ್ತಿದ್ದವು.

ಹೊಸ ಆಸ್ಪತ್ರೆಯ ಕಟ್ಟಡ ಪೂರ್ಣಗೊಂಡು ರೋಗಿಗಳನ್ನು ಅಲ್ಲಿಗೆ ಸಾಗಿಸಿದ ನಂತರವೇ ಡಾ|| ಶ್ವೈಯಿಟ್ಸರ್ ಯುರೋಪಿನತ್ತ ಪ್ರಯಾಣ ಮಾಡಲು ಸಾಧ್ಯವಾಯಿತು.

# ೧೪. ಕೀರ್ತಿಶಿಖರ

ಬಹಳ ದಿನಗಳಿಂದ ಅಗಲಿದ್ದ ಪತ್ನಿ ಮತ್ತು ಮಗಳನ್ನು ಅವರು ನೆಲೆಸಿದ್ದ ಕೋನಿಗ್ಸ್ ಫ್ಲೇಡ್‌ನಲ್ಲಿ ಡಾ॥ ಶ್ವೈಯಿಟ್ಸರ್ ಬಂದು ಸೇರಿದ್ದಾಯಿತು. ಯುರೋಪಿಗೆ ಹೊರಡುವ ಮೊದಲೇ ಆಸ್ಪತ್ರೆ ಖರ್ಚಿಗೆ ಹಣ ಕೂಡಿಸಲು ಹಲವಾರು ಕಾರ್ಯಕ್ರಮಗಳನ್ನು ರೂಪಿಸಿಕೊಂಡಿದ್ದ ಶ್ವೈಯಿಟ್ಸರ್ ಕೋನಿಗ್ಸ್‌ಫ್ಲೇಡ್‌ನಲ್ಲಿ ಉಳಿದದ್ದು ಕೇವಲ ಮೂರು ದಿನಗಳು ಮಾತ್ರ! ತಂದೆಯೊಡನೆ ಬಹಳ ಸಮಯ ಕಳೆಯಬೇಕೆಂದಿದ್ದ ರೆನ್ನಾಳ ನಿರಾಶೆಗೆ ಎಣೆ ಇಲ್ಲವಾಯಿತು. ಹೆಲೆನ್‌ಳಿಗೂ ಈ ರೀತಿಯ ಅಗಲಿಕೆ ಬೇಸರ ಉಂಟುಮಾಡುತ್ತಿತ್ತು. ಆದರೆ ಅವಳ ಪತಿ ಈಗ ಹೆಸರಾಂತ ಸಾರ್ವಜನಿಕ ವ್ಯಕ್ತಿಯಾಗಿದ್ದು ಅವನ ನಡೆವಳಿಕೆಗಳು ಅವಳಿಗೂ ಹೆಮ್ಮೆಯುಂಟು ಮಾಡುತ್ತಿದ್ದುದರಿಂದ ಅಗಲಿಕೆಯನ್ನು ಸಹಿಸಿಕೊಳ್ಳಬೇಕಾಯಿತು. ಮುಂದೆಯೂ ಶ್ವೈಯಿಟ್ಸರ್ ಅನಿವಾರ್ಯ ಕಾರಣಗಳಿಂದ ಲ್ಯಾಂಬರೀನೆ ಮತ್ತು ಯುರೋಪಿಗೆ ಆಗಾಗ್ಗೆ ತಿರುಗಾಡುತ್ತಲೇ ಇದ್ದು, ಅವರೆಲ್ಲರೂ ಅದಕ್ಕೆ ಹೊಂದಿಕೊಳ್ಳುತ್ತಿದ್ದರು. ಲ್ಯಾಂಬರೀನೆಯಲ್ಲಿ ಗಂಡನ ಸಂಗಡ ವೈದ್ಯಕೀಯ ಸೇವೆಯಲ್ಲಿ ಭಾಗಿಯಾಗಬೇಕೆಂಬ ಹಂಬಲವಿದ್ದರೂ, ಆಗಾಗ್ಗೆ ಹದಗೆಡುತ್ತಿದ್ದ ಹೆಲೆನ್‌ಳ ಆರೋಗ್ಯದ ಸ್ಥಿತಿ ಮತ್ತು ಮಗಳ ವಿದ್ಯಾಭ್ಯಾಸದ ದಿಸೆಯಿಂದ ಅಲ್ಲಿಗೆ ಹೋಗಲಾಗದಿದ್ದುದು ಆಗದಿದ್ದುದಕ್ಕೆ ವಿಷಾದಪಡುತ್ತಿದ್ದಳು.

ಡಾ॥ ಆಲ್ಬರ್ಟ್ ಶ್ವೈಯಿಟ್ಸರ್ ಆಫ್ರಿಕಾದ ದುರ್ಗಮ ಕಾಡಿನ ನಡುವೆ ಕೈಗೊಂಡಿದ್ದ ಮಾನವಿಕ ಹಾಗೂ ನಿಸ್ವಾರ್ಥ ಸೇವೆಯ ಕತೆಗಳು ಈಗ ಯುರೋಪಿನಾದ್ಯಂತ ಮನೆಮಾತಾಗಿದ್ದವು. ಅಮೆರಿಕಾ, ಇಂಗ್ಲೆಂಡುಗಳಲ್ಲೂ ಅವನ ಕೀರ್ತಿ ಹರಡಿತ್ತು. ಅವರ ಕಾರ್ಯ ವೈಖರಿಯ ಬಗೆಗೆ ಹೆಸರಾಂತ ಪತ್ರಿಕೆಗಳಲ್ಲಿ ಆಗಾಗ್ಗೆ ಲೇಖನಗಳು ಪ್ರಕಟವಾಗುತ್ತಿದ್ದವು. ಅವನು ನಡೆಸುತ್ತಿದ್ದ ಕಾರ್ಯಗಳಿಗೆ ಧನ ಸಹಾಯ, ಇಲ್ಲವೆ ಔಷಧ, ಆಹಾರ-ಸಾಮಗ್ರಿಗಳ ರೂಪದಲ್ಲೂ ಸಹಾಯ ಮಾಡಲು ಈಗ ಸ್ವಪ್ರೇರಿತರಾಗಿ ಮುಂದೆ ಬರುವವರು ಹಲವಾರು ಜನರಿದ್ದರು. ಹಾಗೆಯೇ ಗೌರವ, ಸನ್ಮಾನಗಳೂ ಒಂದರ ಮೇಲೊಂದರಂತೆ ಬರಲಾರಂಭಿಸಿದವು.

ಆಫ್ರಿಕಾದ ಕಪ್ಪುಜನಾಂಗದವರಿಗೆ ಶ್ವೈಯಿಟ್ಸರ್ ಸಲ್ಲಿಸುತ್ತಿದ್ದ ನಾಗರಿಕ ಹಾಗೂ ಮಾನವೀಯ ಮೌಲ್ಯಗಳ ಸೇವೆಯನ್ನು ಮೆಚ್ಚಿ, ೧೯೨೮ರಲ್ಲೇ ಜಿನೀವಾದಿಂದ ಯುನಿವರ್ಸಲ್-ಆರ್ಡರ್-ಆಫ್-ಹ್ಯೂಮನ್‌ಮೆರಿಟ್ ಎಂಬ ಗೌರವ-ಸನ್ನದು ಲಭಿಸಿತ್ತು. ೧೯೨೭ರಲ್ಲಿ ಆಗ ತಾನೇ ಸ್ಥಾಪನೆಯಾದ ವಾರ್ಷಿಕ ಗಯಟೆ

(GOETHE) ಬಹುಮಾನದ ಪುರುವಟ್ಟಿನವರ ಮೊದಲ ಆಯ್ಕೆಯೇ ಡಾ॥ ಶ್ವೈಯಿಟ್ಸರ್. ಗಯಟೆಯ ಹುಟ್ಟೂರಾದ ಫ್ರಾಂಕ್‌ಫರ್ಟ್ ನಗರದಲ್ಲಿ ಪ್ರತಿವರ್ಷದ ಆಗಸ್ಟ್ ೨೮ರಂದು ಗೌರವಾನ್ವಿತರಿಗೆ ಈ ಬಹುಮಾನ ನೀಡಿ ಸನ್ಮಾನಿಸುವ ಪರಿಪಾಠ ಪ್ರಾರಂಭವಾಗಬೇಕಾಗಿತ್ತು. ಆದರೆ ಶ್ವೈಯಿಟ್ಸರ್ ಆ ವರ್ಷ ಅಲ್ಲಿಗೆ ಹೋಗಿ ಬಹುಮಾನ ಸ್ವೀಕರಿಸಲಾಗಲಿಲ್ಲ. ಮುಂದಿನ ವರ್ಷ ಸ್ವೀಕರಿಸಿದ.

ಡಾ॥ ಶ್ವೈಯಿಟ್ಸರ್ ಈಗ ಜಗತ್ತಿನ ಎಲ್ಲರ ಗಮನ ಸೆಳೆದ ವ್ಯಕ್ತಿ; ಅವನು ಹೋದೆಡೆಗಳಲ್ಲೆಲ್ಲಾ ಜನ ಸುತ್ತವರಿಯುವುದು ಸಾಮಾನ್ಯವಾಯಿತು. ಅವನು ಗಳಿಸಿದ ವಿದ್ವತ್ತು, ಕೈಕೊಂಡ ಸಾಹಸಕಾರ್ಯ, ಮಾಡಿದ ತ್ಯಾಗ ಮತ್ತು ಸೇವಾ ಕಾರ್ಯಗಳ ಬಗೆಗೆ ಪತ್ರಿಕೆಗಳು ಆಸ್ಥೆ ವಹಿಸಿ ಬರೆಯುತ್ತಿದ್ದವು. ಈ ತೆರನ ಪ್ರಚಾರವನ್ನು ಅವನು ನಿರೀಕ್ಷಿಸಿರಲಿಲ್ಲ ಮತ್ತು ಇಷ್ಟವಾದುದೂ ಆಗಿರಲಿಲ್ಲ. ಆದರೂ ಇಂಥ ಪ್ರಚಾರ ಅವನ ಉದ್ದೇಶಗಳ ಸಾಧನೆಗೆ ಸಹಕಾರಿಯಾಗುತ್ತಿದ್ದುವೆನ್ನುವುದನ್ನು ಅಲ್ಲಗಳೆಯುವಂತೆ ಇರಲಿಲ್ಲ. ಅವನ ಸೇವಾ-ಕಾರ್ಯಗಳಿಂದ ಸಂಪ್ರೀತರಾದ ಉದಾರ ಮನಸ್ಸಿನ ದಾನಿಗಳು ನಾನಾ ವಿಧಗಳಲ್ಲಿ ಸಹಾಯ ಮಾಡುತ್ತಿದ್ದುದನ್ನು ಮರೆಯುವಂತಿರಲಿಲ್ಲ.

ಇವೆಲ್ಲದರ ಜತೆಗೆ ಡಾ॥ ಶ್ವೈಯಿಟ್ಸರ್ ಆಗತಾನೆ ಪ್ರತಿಪಾದಿಸುತ್ತಿದ್ದ ಜೀವೋಪಾಸನ ಸಿದ್ಧಾಂತವನ್ನು ಇನ್ನೂ ವಿಶದವಾಗಿ ವಿವರಿಸುವ ಹೊಣೆ ಅವನ ಮೇಲಿತ್ತು. ಹೊಸ ತತ್ವವೊಂದರ ಬೋಧನೆ ಕಷ್ಟವಾಗಲಾರದು. ಆದರೆ ಪ್ರತಿಪಾದಿಸಿದವರು ಆ ತತ್ವಗಳಂತೆ ನಡೆದು, ತಮ್ಮ ಜೀವನದಲ್ಲಿ ಅಳವಡಿಸಿ ಇತರರಿಗೆ ಮಾದರಿಯಾದಾಗ ಮಾತ್ರ ಅದಕ್ಕೆ ಬೆಲೆ ಸಿಗುತ್ತದೆ. ಅದರಲ್ಲೂ ಆಲ್ಬರ್ಟ್ ಶ್ವೈಯಿಟ್ಸರ್ ಮೊದಲಿನಿಂದಲೂ ಕ್ರೈಸ್ತ-ಮತ-ಧರ್ಮ ಮತ್ತು ತತ್ವಗಳ ಕುರುಡು- ಆಚರಣೆಗಳನ್ನು ವಿರೋಧಿಸಿದವನು; ಹಲವಾರು ದಾರ್ಶನಿಕರ ಅಭಿಪ್ರಾಯಗಳನ್ನು ಒಪ್ಪದವ. ಇತರ ಧರ್ಮ-ತತ್ವಗಳ ಆಳವಾದ ಅಭ್ಯಾಸ ಮಾಡಿದವ. ಇವುಗಳೆಲ್ಲವುಗಳ ಆಧಾರದಿಂದಲೇ ಉದ್ಭವಿಸಿತೆನ್ನಬಹುದಾದ ಜೀವೋಪಾಸನಾ ತತ್ವಗಳಿಗನುಗುಣವಾಗಿ ನಡೆದುಕೊಂಡು ಜಗತ್ತಿಗೇ ದಾರಿ ತೋರಿಸುವ ಜವಾಬ್ದಾರಿ ಅವನದೇ ಆಗಿತ್ತು.

ಶ್ವೈಯಿಟ್ಸರ್‌ನಂಥ ಸೂಕ್ಷ್ಮಗ್ರಾಹಿ, ಚುರುಕುಬುದ್ಧಿಯ ಮೇಧಾವಿ ಹಾಗೂ ದೃಢ ಮನಸ್ಸಿನ ವ್ಯಕ್ತಿಗೆ ಜೀವೋಪಾಸನಾ - ತತ್ವದ ನಿಯಮಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದು ಕಷ್ಟವಾಗಲಿಲ್ಲ. ಅವನೆಂದೂ ನುಡಿದಂತೆ ನಡೆಯದ ನಿದರ್ಶನಗಳಿರಲಿಲ್ಲ. ಬಾಲಕನಾಗಿದ್ದಾಗ ಸಹಪಾಠಿ ಮಕ್ಕಳು, ಶಿಕ್ಷಕರು, ಮತ್ತಿತರರೊಡನೆ ನಡೆದುಕೊಂಡಿದ್ದ ಹಲವು ನಿದರ್ಶನಗಳಿಂದ ಅವನಲ್ಲಿ ಪ್ರೀತಿ, ಕರುಣೆ, ಇತರರ ಕಷ್ಟಗಳಿಗೆ ಮರುಗುವ ಮನಸ್ಸು, ಗೌರವ ಭಾವನೆಗಳು ಸುಪ್ತವಾಗಿದ್ದವೆಂಬುದನ್ನು ಊಹಿಸಬಹುದು. ''ನನಗೆ ಕೇವಲ ಸಹಜ ಅಥವಾ ಸ್ವಾಭಾವಿಕ

ವೆನಿಸಿದ್ದನ್ನು ಮಾಡಿದೇನಷ್ಟೆ; ಪ್ರೀತಿ ಕರುಣೆಗಳು ಎಲ್ಲರಲ್ಲೂ ಸ್ವಾಭಾವಿಕವಾಗಿ ಇರಬೇಕಾದ ಗುಣಗಳು ತಾನೇ'' ಎಂದು ಹೇಳಿಕೊಂಡಿರುವುದು ಅವನ ಸಹಜತೆಯನ್ನು ಎತ್ತಿ ತೋರಿಸುತ್ತದೆ. ಆದರೂ ಮಾನವಸಹಜವಾದ ಸಿಡುಕುತನ, ಕೆರಳುವಿಕೆ, ಆಯಾಸ, ಮುಂತಾದವುಗಳಿಂದ ಅವನು ಹೊರತಾಗಿದ್ದನೆಂದು ಹೇಳುವಂತಿಲ್ಲ. ಇಂಥ ದೌರ್ಬಲ್ಯಗಳು ಅವನಲ್ಲಿ ಮೇಲುಗೈ ಸಾಧಿಸಲಾರದಾದವು. ಅವು ಪ್ರಕಟವಾಗುವ ಸಂದರ್ಭಗಳಲ್ಲಿ ಅವುಗಳನ್ನು ಅದುಮಿ ತನ್ನ ಸ್ವಭಾವದ ಸಹಜಸ್ಥಿತಿಗೆ ಮತ್ತೆ ಬರುವ ಪ್ರಯತ್ನ ಮಾಡುವುದನ್ನು ಅವನ ನಿಕಟ ಸಂಪರ್ಕವಿರುವವರೆಲ್ಲಾ ಗಮನಿಸಬಹುದಾಗಿತ್ತು.

ಇಂಥ ವಿರೋಧಾಬಾಸಗಳನ್ನೊಳಗೊಂಡ ಡಾ॥ ಆಲ್ಬರ್ಟ್ ಶ್ವೆಯಿಟ್ಸರ್ ನಂಥವನ ವ್ಯಕ್ತಿ ಚಿತ್ರಣ ನೀಡುವುದು ಅಷ್ಟೇನೂ ಸುಲಭವಲ್ಲ. ಅವನು ಜೀವಿಸಿ ರುವಾಗ ಭೇಟಿಯಾದವರು ಮತ್ತು ಸಹೋದ್ಯೋಗಿಗಳ ಅಭಿಪ್ರಾಯಗಳೇ ಅಲ್ಲದೆ, ಅವನು ಬರೆದ ಗ್ರಂಥರಾಶಿ, ಪತ್ರವ್ಯವಹಾರ ಮತ್ತು ಅವನ ಬಗೆಗೆ ಇತರರು ಬರೆದ ಗ್ರಂಥ-ಲೇಖನಗಳು ಅಭ್ಯಾಸದಿಂದ ಮಾತ್ರ ನೈಜ ಚಿತ್ರಣ ಮೂಡಲು ಸಾಧ್ಯ.

ಶ್ವೆಯಿಟ್ಸರ್ ತನ್ನ ಉಡುಗೆ-ತೊಡುಗೆಗಳ ಬಗೆಗೆ ಎಂದೂ ಹೆಚ್ಚು ಪ್ರಾಶಸ್ತ್ಯ ಕೊಟ್ಟವನಲ್ಲ. ಬಾಲ್ಯದಲ್ಲೇ ಈ ದಿಸೆಯಲ್ಲಿ ಆಗಾಗ್ಗೆ ಅವನೆತ್ತುತ್ತಿದ್ದ ''ಅವತಾರ'' ಗಳನ್ನು ಪ್ರಸ್ತಾಪಿಸಲಾಗಿದೆ. ಆಫ್ರಿಕಾಕ್ಕೆ ತೆರಳುವಾಗ ಅವನಲ್ಲಿದ್ದ ದೊಗಲೆ-ಚಲ್ಲಣ, ಬಿಳೀ ಅಂಗಿ, ಒಂದೇ ಒಂದು ಬಿಲ್ಲಾಕಾರದ ಕಂಠವಸ್ತ್ರ (BOW TIE)ಗಳಂತೆ. ಕಂಠವಸ್ತ್ರ ತಂದೆಯಿಂದ ಮಗನಿಗೆ ಬಂದದ್ದು! ಅದು ಸದಾ ಜೇಬಿನಲ್ಲಿರುತ್ತಿದ್ದು ಯಾರಾದರೂ ಪ್ರಮುಖರನ್ನು ಭೇಟಿಯಾಗುವಾಗ ಮಾತ್ರ ಕಂಠವನ್ನಲಂಕರಿ ಸುತ್ತಿತ್ತಂತೆ! ಕೆಲವರ ಹತ್ತಿರ ನೂರಾರು ಕಂಠವಸ್ತ್ರಗಳಿರುವಾಗ ಅವನೇಕೆ ಒಂದೇ ಒಂದನ್ನು ಯಾವಾಗಲೂ ಧರಿಸುತ್ತಾನೆಂದು ಮಹಿಳೆಯೊಬ್ಬರು ಕೇಳಿದಾಗ, ಶ್ವೆಯಿಟ್ಸರ್ ಒಂದೇ ಕಂಠಕ್ಕೆ ಅಷ್ಟೊಂದು ಕಂಠವಸ್ತ್ರಗಳೇಕೆ ಎಂದು ಉದ್ಗರಿಸಿದನಂತೆ. ೧೯೦೫ರ ಸಮಯದಲ್ಲಿ ಬಾರ್ಸಿಲೋನಾದ ದೊರೆಯ ಸಮ್ಮುಖದಲ್ಲಿ ಸಂಗೀತ ನುಡಿಸುವ ವಿಶೇಷ ಗೌರವ ದೊರೆತಿತ್ತು. ಅರಮನೆಯ ದರ್ಬಾರಿನ ಗೌರವವನ್ನು ಅನುಸರಿಸಲು ನಿಲುವಂಗಿ ಸಹಿತ ಕಪ್ಪು ಬಣ್ಣದ ಸೂಟನ್ನು ಹೊಲಿಸಬೇಕಾಯಿತಂತೆ. ಗನ್ಸ್‌ಬಾಕ್‌ನ ಅವನ ಹಳೆಯ ದರ್ಜಿಯೇ ಅದನ್ನು ತಯಾರಿಸಿದ್ದ; ಮುಂದೆ ಜೀವಮಾನವೆಲ್ಲಾ ವಿಶೇಷ ಸಂದರ್ಭಗಳಲ್ಲಿ ಅದನ್ನೇ ಧರಿಸುತ್ತಿದ್ದುದು. ಆದಿಯಿಂದಲೂ ಧರಿಸುತ್ತಿದ್ದ ಹ್ಯಾಟು ಜೀವಮಾನವೆಲ್ಲಾ ಸಂಗಾತಿಯಾಗಿತ್ತು. ಅದರ ದುಸ್ಥಿತಿಯನ್ನು ಗಮನಿಸಿದ ಸ್ನೇಹಿತರೊಬ್ಬರು ಅದೇ ಮಾದರಿಯ ಇನ್ನೊಂದು ಹ್ಯಾಟನ್ನು ತಂದು, ಹಳೆಯದನ್ನು ನೇತುಹಾಕುವ ಜಾಗದಲ್ಲೇ ಇರಿಸಿದ್ದರು.

ಅವಸರದಲ್ಲಿ ಹೊರಹೋಗುವಾಗ ನೋಡದೇ ಹೊಸದನ್ನು ಧರಿಸಿದಾಗ ವ್ಯತ್ಯಾಸ ತಿಳಿಯಿತು. ತಕ್ಷಣ ಆ ರೀತಿ ಮಾಡಿದವರನ್ನು ತರಾಟೆಗೆ ತೆಗೆದುಕೊಂಡಿದ್ದಲ್ಲದೆ, ಹಳೇ ಹ್ಯಾಟನ್ನೇ ತರಿಸಿ ಹಾಕಿಕೊಂಡು ಮುಂದುವರಿದನಂತೆ! ವರ್ಷಗಳುರುಳಿದಂತೆಲ್ಲಾ ಹಳೇ ಚಲ್ಲಣದ ಉದ್ದ ಕಡಿಮೆಯಾಗಿ, ತುದಿ ಹರಿದು ದಾರಗಳು ನೇತಾಡುತ್ತಿದ್ದರೂ ಅದನ್ನು ಬಹಳಕಾಲ ಬದಲಾಯಿಸಲಿಲ್ಲ. ಹರಿದ ಷರಟಿನಲ್ಲಿ ಹಲವಾರು ತೇಪೆಗಳಿದ್ದು ಅದರಲ್ಲಿ ಮೊದಲಿನ ಬಟ್ಟೆ ಯಾವುದೆಂಬುದನ್ನು ಗುರುತಿಸಲು ಸಾಧ್ಯವಾಗುತ್ತಿರಲಿಲ್ಲ ವೆನ್ನಲಾಗಿದೆ. ಅವನ ಸರಳತನ ಅತಿ ಹೆಚ್ಚಾಯಿತೆಂದು ಹಿಂದೆ ಆಡಿಕೊಳ್ಳುವವರೂ ಕಡಿಮೆ ಇರಲಿಲ್ಲ. ಆಸ್ಪತ್ರೆ ಮತ್ತು ರೋಗಿಗಳಿಗಾಗಿ ಸಂಗ್ರಹವಾದ ಹಣದಲ್ಲಿ ದುಂದು ವೆಚ್ಚ ಮಾಡಬಾರದೆಂಬ ಅನಿಸಿಕೆಯೇ ಇಂಥ ಸರಳ ಜೀವನಕ್ರಮ. ರೈತಾಪಿ ಮನೆತನದ ಪೂರ್ವಿಕರ ಹಿನ್ನೆಲೆ ಈ ರೀತಿಯ ಸರಳ ಜೀವನ ಪ್ರವೃತ್ತಿ ಶ್ವೆಯಿಟ್ಸರ್ ರೂಢಿಸಿಕೊಳ್ಳುವುದಕ್ಕೆ ಸಹಕಾರಿಯಾಯಿತೆನ್ನಲಾಗಿದೆ.

ತನಗೆ ಲಭ್ಯವಿರುವ ಯಾವುದೇ ವಸ್ತುಗಳನ್ನು ಬಳಸುವುದರಲ್ಲಿ ಮಿತವ್ಯಯ ಎದ್ದು ಕಾಣಿಸುತ್ತಿತ್ತು. ಹಳೇ ಲಕೋಟೆಗಳ ಹಿಂದೆ ಟಿಪ್ಪಣಿ ಬರೆದುಕೊಳ್ಳುವುದು, ಸಾಮಾನುಗಳ ಪಟ್ಟಿ ಬರೆದಿಟ್ಟುಕೊಳ್ಳುವುದು, ದಾರಿಯಲ್ಲಿ ಸಿಕ್ಕಿದ ದಾರದ ತುಂಡು ಗಳನ್ನು ಎತ್ತಿಟ್ಟುಕೊಂಡು ಮತ್ತೆ ಬಳಸುವುದು, ಸಾಮಾನುಗಳನ್ನು ಸುತ್ತಿದ ಕಾಗದ ಗಳನ್ನು ಸರಿಪಡಿಸಿ ಮತ್ತೆ ಉಪಯೋಗಿಸುವುದು, ಬಗ್ಗಿದ ಮೊಳೆಗಳನ್ನು ನೇರಮಾಡಿ ಮತ್ತೆ ಬಳಸುವುದು-ಮಿತವ್ಯಯ ಮಾಡಬೇಕೆಂದರೆ ಒಂದೇ ಎರಡೇ- ನಮ್ಮ ಗಾಂಧಿಯ ನೆನಪು ತರುವ ನಡೆವಳಿಕೆ ಡಾ।। ಶ್ವೆಯಿಟ್ಸರ್‌ನಲ್ಲೂ ನೆಲೆಯೂರಿತ್ತು. ಜನ್ಮ ದಿನಾಚರಣೆಯಂಥ ವಿಶೇಷ-ಸಂದರ್ಭಗಳಲ್ಲಿ ಕೆಲಸಾರಿ ಮಾತ್ರ ಬೆಣ್ಣೆ ಮದ್ಯಪಾನೀಯಗಳನ್ನು ಮಿತವಾಗಿ ಬಳಸುವಷ್ಟು ಸಡಿಲತೆ ಸಾಧ್ಯ. ಲ್ಯಾಂಬರೀನೆಯ ಆಸ್ಪತ್ರೆಯ ಉಳಿವಿಗೆ ಈ ತೆರನ ಉಳಿತಾಯ ಅನಿವಾರ್ಯ ಸರಿಯೇ; ಅದೇ ರೀತಿ ಯುರೋಪಿನ ಯಾಂತ್ರಿಕ ಜಗತ್ತಿನ ದುಂದುವೆಚ್ಚದ ರೀತಿ-ನೀತಿಗಳನ್ನು ಅವಹೇಳನ ಮಾಡುವ ರೀತಿಯೂ ಇದಾಗಿದ್ದಿರಬಹುದಲ್ಲವೆ ?

ಡಾ।। ಶ್ವೆಯಿಟ್ಸರ್‌ನ ಕೀರ್ತಿ ಮತ್ತು ಪ್ರಭಾವ ಹೆಚ್ಚಿದಂತೆಲ್ಲಾ ಅವನನ್ನು ಹಾಡಿ-ಹೊಗಳಿ ಅಟ್ಟಕ್ಕೇರಿಸುವವರಿಗೇನೂ ಕಡಿಮೆ ಇರಲಿಲ್ಲ. ಆದರೆ ತೀವ್ರ ಸರಳ ವ್ಯಕ್ತಿತ್ವ ಅವರನ್ನು ನಿರಾಶೆಗೊಳಿಸುತ್ತಿದ್ದವು. ಅವನೆಷ್ಟೇ ಎತ್ತರಕ್ಕೆ ಬೆಳೆದಿದ್ದರೂ ಆಲ್‌ಸೇಶ್‌ನ ಹಿನ್ನೆಲೆ ಸದಾ ಎಚ್ಚರಿಸುತ್ತಿತ್ತು. ದೈಹಿಕವಾಗಿ ಅವನೆಲ್ಲೇ ಇದ್ದರೂ ಮನಸ್ಸು ಆಲ್‌ಸೇಶ್‌ನ ಪರ್ವತ ಪಂಕ್ತಿಗಳಲ್ಲಿ ವಿಹರಿಸುತ್ತಿರುತ್ತದೆಂದು ಅವನೇ ಹೇಳಿ ಕೊಂಡಿದ್ದಾನೆ. ವೋಸ್ ಜೇಸ್ ಪರ್ವತದ ಪೈನ್-ಮರದಂತೆ ತಾನು ಎಂದು ಹೇಳಿಕೊಳ್ಳುವುದರಲ್ಲಿ ಹೆಮ್ಮೆ ಅವನಿಗೆ. ಪೈನ್ ಮರ ಎಲ್ಲೇ ಬೆಳೆದಿದ್ದರೂ ಅದರ ಲಕ್ಷಣಗಳು ಬದಲಾಗವಷ್ಟೆ!

ಡಾ॥ ಶ್ವೈಯಿಟ್ಸರ್‌ನ ನಡೆವಳಿಕೆಗಳಲ್ಲಿ ಎದ್ದು ಕಾಣುತ್ತಿದ್ದ ಸರಳತೆ ವಿನಯ ಹಾಗೂ ತೋರುಗಾಣಿಕೆಯದಲ್ಲವೆಂಬುದಕ್ಕೆ ಹಲವು ನಿದರ್ಶನಗಳಿದ್ದವು. ಯುರೋಪ್, ಇಂಗ್ಲೆಂಡ್‌ಗಳಲ್ಲಿ ಸಂಚರಿಸುವಾಗ ಕೆಲಸಾರಿ ದಿನವೆಲ್ಲಾ ಬಿಡುವಿಲ್ಲದ ಕಾರ್ಯಕ್ರಮಗಳಿರುತ್ತಿದ್ದವು. ದಿನದ ಕಾರ್ಯಕ್ರಮಗಳೆಲ್ಲಾ ಮುಗಿದಾಗ ರಾತ್ರಿ ತಂಗುವ ಏರ್ಪಾಡೇ ಆಗಿರದ ಸಂದರ್ಭಗಳೆಷ್ಟೋ. ಲಂಡನ್ನಿನ ಒಂದು ದಿನದ ಕಾರ್ಯಕ್ರಮ ಮುಗಿದು ರಾತ್ರಿ ಭೋಜನವಾದ ಮೇಲೆ ತಂಗುವುದೆಲ್ಲೆಂಬುವ ಸಮಸ್ಯೆ ದುತ್ತೆಂದು ಎದುರಾಯಿತು. ಜತೆಯಲ್ಲಿದ್ದ ಸಹಾಯಕರೊಬ್ಬರ ಮನೆಯಲ್ಲೇ ಯಾವ ಸಂಕೋಚವೂ ಇಲ್ಲದೆ ಹಾಯಾಗಿ ಮಲಗಿದ್ದ.

ಶ್ರೀಮತಿ ಓಬರ್‌ಮನ್ ಎಂಬ ಶ್ರೀಮಂತ ವಿಧವೆ ಶ್ವೇಯಿಟ್ಸರ್‌ನ ಸೇವಾ-ಕಾರ್ಯಗಳಿಗೆ ೧೯೨೭ರಿಂದಲೂ ಆಗಾಗ್ಗೆ ಹಣ ಸಂಗ್ರಹಿಸಿ ಕಳುಹಿಸುತ್ತಿದ್ದಳು. ಶ್ವೈಯಿಟ್ಸರ್ ಆಕೆಗೆ ಆಗಾಗ್ಗೆ ಮೆಚ್ಚಿಗೆ-ಪತ್ರ ಬರೆದು, ಮುಂದಿನ ಸಾರಿ ಆಮಸ್ಟರ್‌ಡ್ಯಾಮ್ ನಗರಕ್ಕೆ ಬಂದಾಗ ಆಕೆಯನ್ನು ಖುದ್ದು ಭೇಟಿಯಾಗುವ ಭರವಸೆ ಇತ್ತಿದ್ದ. ೧೯೨೮ರಲ್ಲಿ ಭೇಟಿಯಿತ್ತಿದ್ದಾಗ ಅಲ್ಲಿನ ಚರ್ಚ್‌ನಲ್ಲಿ ಭಾಷಣದ ಕಾರ್ಯಕ್ರಮವಿತ್ತು. ಶ್ರೀಮತಿ ಓಬರ್‌ಮನ್ ಕಿಕ್ಕಿರಿದು ಸೇರಿದ್ದ ಜನಜಂಗುಳಿಯ ಮಧ್ಯೆ ಅತ್ಯಂತ ಪ್ರಯಾಸದಿಂದ ಹಾಜರು ಇದ್ದಳು. ಶ್ವೈಯಿಟ್ಸರ್ ಆಕೆಯನ್ನು ಭೇಟಿಮಾಡುವ ವಿಷಯವನ್ನು ಮೊದಲೇ ತಿಳಿಸಿರಲಿಲ್ಲ; ಬಹಳ ಸುಸ್ತಾಗಿದ್ದಂತೆ ಕಂಡರೂ ಶ್ವೈಯಿಟ್ಸರ್‌ನ ಭಾಷಣ ಬಹಳ ಪರಿಣಾಮಕಾರಿಯಾಗಿತ್ತು. ಆಫ್ರಿಕಾಕ್ಕೆ ತಾನು ಹೋದ ಬಗೆಗೆ ವಿವರಣೆ ಕೊಡುತ್ತಾ ಅದು ತನ್ನ ಯಜಮಾನ - ಏಸುವಿನ ಆಜ್ಞೆಯಾಗಿತ್ತೆಂದು, ಸ್ವಲ್ಪ ತಡೆದು, ಆಫ್ರಿಕಾದ ಲಾಜರಸ್‌ನ ಸೇವೆಗಾಗಿ ತಾನು ಅವನ ಆಜ್ಞೆಯನ್ನು ಅನುಸರಿಸಿದೆನೆಂದ. ಆಫ್ರಿಕಾದ ಲಾಜರಸ್ ಯಾರು ? ಅಲ್ಲಿಯ ಕರಿಯರೇ ಲಾಜರಸ್-ಬಿಳಿಯರು ಗುಲಾಮರಾಗಿಸಿಕೊಂಡಿದ್ದ ಕರಿಯರು! ಎಂದು ಉದ್ಗರಿಸಿದ ಅವನ ಮಾತುಗಳನ್ನು ಕೇಳಿದ ಜನರ ಮೇಲಾದ ಪರಿಣಾಮವನ್ನು ಊಹಿಸಲಸಾಧ್ಯ. ಶ್ರೀಮತಿ ಓಬರ್‌ಮನ್, ಶ್ವೈಯಿಟ್ಸರ್ ತನ್ನನ್ನು ಗಮನಿಸದಿದ್ದುದಕ್ಕೆ ನಿರಾಶಳಾಗಿ ಮನೆಗೆ ಹಿಂದಿರುಗಿದಳು.

ಶ್ರೀಮತಿ ಓಬರ್‌ಮನ್ ಮನೆಗೆ ತಲುಪುತ್ತಿದ್ದಂತೆ ಟೆಲಿಫೋನ್ ಗಂಟೆ ಬಾರಿಸಿತು. ಆ ಕಡೆಯಿಂದ ಡಾ॥ ಶ್ವೈಯಿಟ್ಸರ್ ಮಾತಾಡುತ್ತಿದ್ದಾನೆ. ಕುಶಲ ಪ್ರಶ್ನೆಗಳಾದ ನಂತರ ಮರುದಿನ ಭೋಜನ ಅವಳ ಮನೆಯಲ್ಲೇ ಮಾಡುವ ನಿರ್ಧಾರವನ್ನು ಹೇಳಿ ಆಕೆಯನ್ನು ಅಚ್ಚರಿಗೊಳಿಸಿದ. ಮುಂದೆ ಶ್ರೀಮತಿ ಓಬರ್‌ಮನ್ ಅವನ ಖಾಯಂ ಅತಿಥೇಯಳಾದಳು. ಮುಂದೊಂದು ಸಾರಿ ಅಮಸ್ಟರ್-ಡ್ಯಾಮ್‌ಗೆ ಹೋದಾಗ ತಂಗಲು ಶ್ವೈಯಿಟ್ಸರ್ ನೇರವಾಗಿ ಆಕೆಯ ಮನೆಗೆ ಬಂದಿಳಿದ. ಮನೆತುಂಬಾ

ನೆಂಟರಿದ್ದು ಅವನಿಗಲ್ಲಿ ಸ್ಥಳಾವಕಾಶವಿರಲಿಲ್ಲ. ಅತಿಥೇಯಳಿಗೆ ತುಂಬಾ ಪೇಚಿಗಿಟ್ಟು ಕೊಂಡಂತಾಯಿತು. ಆಕೆಯ ಮನೆಯ ಹತ್ತಿರದಲ್ಲೇ ಇದ್ದ ನಾವಿಕರ ತಂಗುದಾಣ ಒಂದರಲ್ಲಿ ಆ ರಾತ್ರಿ ತಂಗಲು ವ್ಯವಸ್ಥೆ ಮಾಡಿಸಿದಳು. ಅದಕ್ಕೂ ಬೇಸರವಿಲ್ಲದೆ ಅಲ್ಲೇ ಉಳಿದುಕೊಂಡಿದ್ದ. ಇನ್ನೊಂದು ಸಾರಿ ರಾತ್ರಿಯೆಲ್ಲಾ ಸಂಗೀತ-ಕಛೇರಿ ನಡೆಸಿ, ದಣಿದಿದ್ದ. ಮರುದಿನ ಮಧ್ಯಾಹ್ನ ಆಕೆಯ ಮನೆಯಲ್ಲೇ ಊಟ ಮಾಡಿ ಮಲಗಿ ನಿದ್ರಿಸುತ್ತಿದ್ದ. ಅಷ್ಟರಲ್ಲೇ ಶಾಲೆಯಿಂದ ಹಿಂದಿರುಗಿದ ಆಕೆಯ ಮಕ್ಕಳು ಗಲಾಟೆ ಮಾಡುತ್ತಾ ಮನೆಯೊಳಗೆ ಬಂದರು. ಶ್ವೈಯಿಟ್ಸರ್‌ನ ವಿಶ್ರಾಂತಿಗೆ ಭಂಗ ಉಂಟಾಗುತ್ತದೆಂದು, ಆಟ ಆಡಿಕೊಂಡಿರಲು ಹೊರಗೆ ಕಳುಹಿಸಿದಳು. ಸ್ವಲ್ಪ ಸಮಯದಲ್ಲೇ ಎಚ್ಚರವಾದ ಶ್ವೈಯಿಟ್ಸರ್‌ಗೆ ಮಕ್ಕಳ ದನಿ ಇಲ್ಲದ್ದಕ್ಕೆ ಅಚ್ಚರಿಯಾಯಿತು. ಮನೆಯೊಡತಿಯನ್ನು ವಿಚಾರಿಸಿದಾಗ ಗುಟ್ಟು ಹೊರಬಂತು. ಮಕ್ಕಳನ್ನು ನಿರ್ಬಂಧನಕ್ಕೊಳಪಡಿಸಿದ್ದು ಅವನನ್ನು ರೇಗಿಸಿತು. ಮುಂದಿನ ಸಾರಿ ಮಕ್ಕಳ ಬಾಯಿ ಮುಚ್ಚಿಸುವ ಏರ್ಪಾಡು ಮಾಡಿದರೆ, ಅವರೆಲ್ಲರಿಗೂ ಒಂದೊಂದು ತುತ್ತೂರಿಯನ್ನು ತಂದು ಕೊಟ್ಟು ಮನೆಯಲ್ಲಿ ಸದಾ ಗಲಾಟೆಯೆಬ್ಬಿಸುವುದಾಗಿ ಎಚ್ಚರಿಸಿದ !

ತನಗೆ ಯಾರಿಂದಲಾದರೂ ಸಹಾಯ ಬೇಕಾದಾಗ ಯಾವ ಸಂಕೋಚವೂ ಇಲ್ಲದೆ ಕೇಳುವಷ್ಟು ಸರಳತೆ ಅವನದು. ಅವನು ಸಂಚಾರದಲ್ಲಿರುವಾಗಲೆಲ್ಲಾ ಯಾರಾದರೂ ಸಂಗಾತಿಗಳಿದ್ದರೆ ಒಳಿತೆನಿಸುತ್ತಿತ್ತು. ತನಗಿಷ್ಟಬಂದವರನ್ನು ಯಾವ ಸಂಕೋಚವೂ ಇಲ್ಲದೆ ಜತೆಗೆ ಬರುವಂತೆ ಕೇಳಲು ಹಿಂಜರಿಯುತ್ತಿರಲಿಲ್ಲ. ರೈಲುಗಳಲ್ಲಿ ಸಂಚರಿಸುವಾಗ ಮೂರು ಅಥವಾ ನಾಲ್ಕನೆ ತರಗತಿಗಳೇ ಅವನಿಗೆ ಮೆಚ್ಚು. ಅಲ್ಲೇ ಪತ್ರ ವ್ಯವಹಾರಗಳಿಗೆ ಉತ್ತರ, ಆಯಾಸವಾದಂತಾದರೆ ಮಲಗಿ ನಿದ್ರಿಸುವ ಅಭ್ಯಾಸ ಮೈಗೂಡಿಹೋಗಿತ್ತು.

ಡಾ॥ ಶ್ವೈಯಿಟ್ಸರ್‌ನ ಜೀವನ ಮುಂದೆ ಗನ್ಸ್‌ಬಾಕ್, ಕೋನಿಗ್ಸ್‌ಫೆಲ್ಡ್ ಮತ್ತು ಲ್ಯಾಂಬರೀನೆಗಳ ನಡುವೆ ಹಾರಾಡುವ ಹಕ್ಕಿಯಂತಾಯಿತು. ವಿದ್ಯಾಭ್ಯಾಸದ ಒತ್ತಡಗಳಿಂದ ಮಗಳು ತಂದೆಯ ಜತೆ ಹೆಚ್ಚು ಸಮಯ ಇರಲಾಗುತ್ತಿರಲಿಲ್ಲ. ಅವನು ಯುರೋಪಿನಲ್ಲಿದ್ದಾಗಲೆಲ್ಲಾ ಹೆಲೆನ್ ಅವನ ಜೊತೆ ತಿರುಗಾಡಲು ಸಾಧ್ಯವಾಗುತ್ತಿತ್ತು.

ಇತ್ತೀಚಿನ ವರ್ಷಗಳಲ್ಲಿ ಮತಧರ್ಮಗಳ ಬೋಧನೆ ಅಥವಾ ಪ್ರಚಾರದಲ್ಲಿ ನೇರವಾಗಿ ತೊಡಗಿರದಿದ್ದರೂ ಅವುಗಳ ಅಭ್ಯಾಸ ಮತ್ತು ಚಿಂತನೆಗಳಿಂದ ದೂರವಾಗಿರಲಿಲ್ಲ. ಕ್ರೈಸ್ತ ಮತವೇ ಅಲ್ಲದೆ ಇತರ ಹಲವಾರು ಧರ್ಮ ಗ್ರಂಥಗಳ ಅಭ್ಯಾಸ ಅವ್ಯಾಹತವಾಗಿ ನಡೆಯುತ್ತಲೇ ಇತ್ತು. ಯುರೋಪಿನಲ್ಲಿ ತಂಗಿದ್ದ ಕಾಲದಲ್ಲೇ THE MYSTICISM OF PAUL, THE APOSTAL ಗ್ರಂಥವನ್ನು ಬರೆದು ಮುಗಿಸಿದ. ತಾನು ಎಷ್ಟೇ ಕೆಲಸ ಕಾರ್ಯಗಳಲ್ಲಿ ಮಗ್ನನಾಗಿರುತ್ತಿದ್ದರೂ ಗನ್ಸ್‌ಬಾಕ್

ಮತ್ತು ಕೋನಿಗ್ಸ್‌ಫೆಲ್ಡ್‌ಗಳಲ್ಲಿ ತಂಗಿದ್ದಾಗ ನೋಡಲು ಬರುತ್ತಿದ್ದ ಬಂಧುಗಳು ಮತ್ತು ಹಿತೈಷಿಗಳನ್ನು ಉಪಚರಿಸದೆ ಕಳಿಸಿಕೊಡುತ್ತಿರಲಿಲ್ಲ.

ತಂದೆ ಗತಿಸಿದ ನಂತರ ಕುಟುಂಬದವರ ವಾಸಕ್ಕೆ ಖಾಯಂ ನೆಲೆಯೊಂದನ್ನು ಮಾಡುವುದು ಅವನ ಕರ್ತವ್ಯವಾಗಿತ್ತು. ೧೯೨೮ರಲ್ಲಿ ದೊರೆತ ಗಯಟೆ ಬಹುಮಾನದ ಹಣದಲ್ಲಿ ಗನ್ಸ್ ಬಾಕ್‌ನಲ್ಲಿ ಮನೆಯೊಂದನ್ನು ನಿರ್ಮಿಸಿದ. ಅದರ ಜಾಗ ವಿನ್ಯಾಸಗಳೆಲ್ಲಾ ಅವನದೇ ಆಗಿದ್ದು, ಅವನು ಇಳಿದುಕೊಳ್ಳಲು ನಿಗದಿಯಾದ ಕೊಠಡಿ ಬೀದಿಗೆ ನೇರ ಸಂಪರ್ಕವಿರುವಂತೆ ಇತ್ತು. ತನ್ನನ್ನು ನೋಡಲು ಬಂದವರಿಗೆ ಸುಲಭವಾಗಿ ದೊರೆಯಬೇಕೆಂಬ ಉದ್ದೇಶ ಅವನದು.

೧೯೨೯ರ ಅಂತ್ಯದ ಸಮಯಕ್ಕೆ ಯುರೋಪಿನಲ್ಲಿ ಡಾ|| ಶ್ವೈಯಿಟ್ಸರ್‌ನ ಕೆಲಸ-ಕಾರ್ಯಗಳು ಮುಗಿಯುತ್ತಾ ಬಂದಿದ್ದವು. ಲ್ಯಾಂಬರೀನೆಗಾಗಿ ಸತತವಾಗಿ ಗನ್ಸ್‌ಬಾಕ್‌ನಲ್ಲಿ ಶೇಖರವಾಗುತ್ತಿದ್ದ, ಔಷಧ, ಉಪಕರಣ ಮತ್ತು ಆಹಾರ-ಸಾಮಗ್ರಿಗಳನ್ನು ಪ್ಯಾಕ್ ಮಾಡುವುದೇ ಈ ಸಾರಿಯ ಮಹತ್ತರದ ಕೆಲಸವಾಗಿತ್ತು. ಈಗಾಗಲೇ ಅವನ ಹಿಂಬಾಲಕರಾಗಿದ್ದ ಅನೇಕ ಸ್ವಯಂ ಸೇವಕರು ಈ ಕೆಲಸದಲ್ಲಿ ಭಾಗವಹಿಸಿ ಸಹಕರಿಸಿದರು.

ಹೆಲೆನ್‌ಳ ಆರೋಗ್ಯ ಪೂರ್ತಿಯಾಗಿ ಸುಧಾರಿಸಿರಲಿಲ್ಲ. ಆಫ್ರಿಕಾಕ್ಕೆ ಹೋದರೆ ಕಾಯಿಲೆ ಉಲ್ಬಣಿಸುವ ಸಾಧ್ಯತೆಗಳೂ ಇದ್ದವು. ಅವಳನ್ನು ಕರೆದುಕೊಂಡು ಹೋಗಲು ಶ್ವೈಯಿಟ್ಸರ್‌ಗೆ ಇಷ್ಟವಿರದಿದ್ದರೂ, ಹೊಸ ಆಸ್ಪತ್ರೆಯ ಕೆಲಸ- ಕಾರ್ಯಗಳಲ್ಲಿ ಭಾಗವಹಿಸುವ ಮಹದಾಶೆಯಿಂದ ಈ ಸಾರಿ ಲ್ಯಾಂಬರೀನೆಗೆ ಅವಳೂ ಹೊರಟಳು. ಹಡಗಿನಲ್ಲಿ ಅವಳ ಶುಶ್ರೂಷೆಗೆ ಪ್ರತ್ಯೇಕ ಏರ್ಪಾಡು ಮಾಡಲಾಗಿತ್ತು. ಲ್ಯಾಂಬರೀನೆ ಆಸ್ಪತ್ರೆಗೆ ತೆರಳುತ್ತಿದ್ದ ದಾದಿ ಮೇರಿ ಸೆಕ್ರೆಟಾಸ್ ಅವಳ ಔಷಧೋಪಚಾರಗಳನ್ನು ಮಾಡುತ್ತಿದ್ದಳು. ಆದರೂ ಅವಳಿಗಂಟಿದ್ದ ಕ್ಷಯರೋಗ ಸಮುದ್ರಯಾನದ ಸಮಯ ದಲ್ಲಿ ಮತ್ತಷ್ಟು ಉಲ್ಬಣಿಸಿತು. ಪ್ರತಿ ದಿನ ಜ್ವರ ಏರುತ್ತಲೇ ಇತ್ತು. ಯುರೋಪಿಗೆ ಹಿಂದಿರುಗುವ ಯಾವುದಾದರೂ ಹಡಗಿನಲ್ಲಿ ಅವಳನ್ನು ವಾಪಸು ಕಳಿಸುವ ಏರ್ಪಾಡು ಮಾಡುವುದಾಗಿ ಶ್ವೈಯಿಟ್ಸರ್ ತಿಳಿಸಿದ. ಆದರೆ ಲ್ಯಾಂಬರೀನೆಗೆ ಹೋಗುವ ಮನಸ್ಸನ್ನು ಹೆಲೆನ್ ಬದಲಿಸಲಿಲ್ಲ. ಅಂತೂ ಕ್ರಿಸ್‌ಮಸ್ ಸಮಯಕ್ಕೆ ಕೇಪ್‌ಲೋಪೇಜನ್ನು ತಲ್ಪಿಸಿದರು. ದಾದಿ ಮಥಿಲ್ಡ್ ಕೊಟ್ಟಮನ್ ಮೋಟಾರ್-ದೋಣಿಯನ್ನು ತಂದು ಅವರಿಗಾಗಿ ಅಲ್ಲಿ ಕಾದಿದ್ದಳು. ಯುರೋಪಿನಿಂದ ತಂದ ಔಷಧ-ಪೆಟ್ಟಿಗೆಗಳ ಜೊತೆ ಲ್ಯಾಂಬರೀನೆಗೆ ತಕ್ಷಣ ಪ್ರಯಾಣ ಮುಂದುವರಿಸಿದರು.

# ೧೫. ಆಸ್ಪತ್ರೆಯ ಕಾರ್ಯವಿಧಾನ

ಡಾ|| ಶ್ವೆಯಿಟ್ಸರ್ ಈ ಸಾರಿ ಲ್ಯಾಂಬರೀನೆಗೆ ಬಂದಾಗ ಆಸ್ಪತ್ರೆಯ ಕಾರ್ಯ ಕಲಾಪಗಳು ಸುವ್ಯವಸ್ಥಿತವಾಗಿ ಮುಂದುವರಿಯುತ್ತಿದ್ದವು. ಅದರ ಆಡಳಿತ ಅವನಿದ್ದಾಗಿಗಿಂತಲೂ ದಕ್ಷತೆಯಿಂದ ನಡೆದಿತ್ತು. ಎರಡುವರೆ ವರ್ಷಗಳ ಹಿಂದೆ ಅರ್ಧಂಬರ್ಧವಾಗಿದ್ದ ಹಲವು ಕಟ್ಟಡ ಮತ್ತು ಗುಡಿಸಲುಗಳು ಈಗ ಸಂಪೂರ್ಣವಾಗಿದ್ದುವು. ಆಸ್ಪತ್ರೆಯ ಸಿಬ್ಬಂದಿಗಳಿಗೆಲ್ಲಾ ಈಗ ಪ್ರತ್ಯೇಕ ವಸತಿಗಳ ಏರ್ಪಾಡಾಗಿತ್ತು. ಸುಮಾರು ೨೫೦ ರಿಂದ ೩೦೦ ಒಳರೋಗಿಗಳ ಚಿಕಿತ್ಸೆಗೆ ಅಲ್ಲೀಗ ಸೌಲಭ್ಯ ಕಲ್ಪಿಸಲಾಗಿತ್ತು. ಅವರಿಗೆಲ್ಲಾ ಪ್ರತ್ಯೇಕ ಮಂಚಗಳಿದ್ದವು. ಕಟ್ಟಡಗಳ ಒಳಗೆ ಸೊಳ್ಳೆ ನೊಣಗಳು ಪ್ರವೇಶಿಸದಂತೆ ಸೊಳ್ಳೆ-ಪರದೆಗಳಿಂದ ರಕ್ಷಣೆ ಒದಗಿಸಲಾಗಿತ್ತು. ಆಸ್ಪತ್ರೆ ಮತ್ತು ಅದರ ಬಟ್ಟೆ-ಬರೆಗಳನ್ನು ಶುಚಿ ಮಾಡುವವರು, ಅಡಿಗೆಯವರು, ಪಾಮ್ ಎಣ್ಣೆ ತಯಾರಿಸುವವರು - ಎಲ್ಲಾ ಸೇರಿ ೩೫ ಜನ ಸೇವಕರಿದ್ದರು. ಜೋಸೆಫ್ ಮತ್ತೆ ಬಂದು ಕೆಲಸಕ್ಕೆ ಸೇರಿದ್ದ. ಹದಿಮೂರು ವರ್ಷಗಳ ಹಿಂದೆ ಲ್ಯಾಂಬರೀನೆಯನ್ನು ನೋಡಿದ್ದ ಹೆಲೆನ್ ಈಗ ಅಲ್ಲಿ ಆಗಿರುವ ಬದಲಾವಣೆಯನ್ನು ನೋಡಿ ಅಚ್ಚರಿಪಟ್ಟಳು. ತಾನು ಸ್ವತಃ ಲ್ಯಾಂಬರೀನೆಯಲ್ಲಿರದಿದ್ದರೂ ಆಸ್ಪತ್ರೆಯ ಬೆಳವಣಿಗೆ ಮತ್ತು ಸುವ್ಯವಸ್ಥಿತ ರೀತಿ ಡಾ|| ಶ್ವೆಯಿಟ್ಸರ್‌ಗೂ ಸಂತೋಷ ಉಂಟುಮಾಡಿತು.

ಲ್ಯಾಂಬರೀನೆಯ ಆಸ್ಪತ್ರೆಯಲ್ಲಿ ವಿವಿಧ ವಿಭಾಗಗಳಲ್ಲಿ ನುರಿತ ತಜ್ಞರಿದ್ದು ಚಿಕಿತ್ಸಾ-ವಿಧಾನಗಳು ಅತ್ಯುತ್ತಮ ಮಟ್ಟದಲ್ಲಿದ್ದವು. ಸೇವಾ ಮನೋಭಾವದ ದಾದಿಯರಿಂದ ರೋಗಿಗಳ ಶುಶ್ರೂಷೆಯೂ ತೃಪ್ತಿಕರವಾಗಿತ್ತು. ಅವನಿದ್ದಾಗ ಪ್ರಾರಂಭಿಸಿದ ಹಣ್ಣು-ತರಕಾರಿಗಳ ತೋಟಗಳು ಈಗ ಫಲ ಕೊಡಲಾರಂಭಿಸಿದ್ದವು. ಆಸ್ಪತ್ರೆಯ ಉಪಯೋಗಕ್ಕೆ ಸಾಕಷ್ಟು ಹಣ್ಣು ತರಕಾರಿಗಳು ಅಲ್ಲೇ ದೊರೆಯುತ್ತಿದ್ದವು. ಹಣಕಾಸು ಮತ್ತು ಔಷಧ ಸಾಮಗ್ರಿಗಳನ್ನುಳಿದು ಇನ್ನೆಲ್ಲಾ ವಿಷಯಗಳಲ್ಲಿ ಆಸ್ಪತ್ರೆ ಪರಿಪೂರ್ಣ ವಾಗಿತ್ತೆನ್ನಬಹುದು. ಈ ಸಮಸ್ಯೆಯ ಪರಿಹಾರ ಡಾ|| ಶ್ವೆಯಿಟ್ಸರ್‌ನ ಪ್ರಯತ್ನಗಳಿಂದ ಮಾತ್ರ ಸಾಧ್ಯ. ಮತ್ತು ಅವನ್ನು ಸಾಕಷ್ಟು ಪ್ರಮಾಣದಲ್ಲಿ ಒದಗಿಸುವುದರಲ್ಲಿ ಯಶಸ್ವಿಯಾಗಿದ್ದನೆಂದೇ ಹೇಳಬೇಕು. ಆಫ್ರಿಕನ್ನರ ನೆಚ್ಚಿನ 'ಓಗಂಗಾ', ''ದೊಡ್ಡ ಡಾಕ್ಟರು'' ಎರಡು ವರ್ಷಗಳಿಗಿಂತ ಹೆಚ್ಚು ಕಾಲ ಅವರೆಲ್ಲರಿಂದ ದೂರವಿದ್ದದ್ದು ಬೇಸರ ಉಂಟುಮಾಡಿತ್ತು. ಈ ಸಾರಿ ಹಿಂದಿರುಗಿದಾಗಲೂ ರೋಗಿಗಳ ಚಿಕಿತ್ಸಾ ಕಾರ್ಯಕ್ರಮಗಳನ್ನು ಇತರ ವೈದ್ಯರಿಗೇ ಬಿಟ್ಟುಕೊಟ್ಟು ಕಟ್ಟಡ ನಿರ್ಮಾಣ,

ಆಡಳಿತ-ಸಮಸ್ಯೆಗಳ ಕಡೆ ಶ್ವೈಯಿಟ್ಸರ್ ಹೆಚ್ಚು ಗಮನಕೊಡುತ್ತಿದ್ದ. ಆದರೂ ಮುಗ್ಧ ಆಫ್ರಿಕನ್ನರಿಗೆ ಅವನೇ ಪರೀಕ್ಷೆ ಮಾಡಿ ಚಿಕಿತ್ಸೆ ಮಾಡಬೇಕೆಂದು ದುಂಬಾಲು ಬೀಳುತ್ತಿದ್ದರು. ಅವನು ಹೋದೆಡೆಗಳಲ್ಲೆಲ್ಲಾ ಹಿಂಬಾಲಿಸುತ್ತಿದ್ದರು.

ಆಮಶಂಕೆ-ರೋಗಿಗಳು ಮತ್ತು ಮನೋವಿಕಲತೆಯ ರೋಗಿಗಳಿಗೆ ಪ್ರತ್ಯೇಕ ವಸತಿಗಳ ನಿರ್ಮಾಣಕ್ಕೆ ಶ್ವೈಯಿಟ್ಸರ್ ಈ ಸಾರಿ ತುರ್ತು ಗಮನಹರಿಸಬೇಕಾಯಿತು. ಜತೆಗೆ ಹಳೇ ಕಟ್ಟಡಗಳ ದುರಸ್ತಿನ ಕಾರ್ಯವೂ ನಡೆಯಬೇಕಿತ್ತು. ಪ್ರತಿ ದಿನ ಬೆಳಗಿನಿಂದ ಸಾಯಂಕಾಲದವರೆಗೆ ಕೈಯಲ್ಲಿ ಪೆನ್ಸಿಲ್ಲು, ಪುಸ್ತಕ ಹಿಡಿದು, ನೆಲವನ್ನು ಅಳೆದು ಗುರುತು ಮಾಡುವುದು, ನಕಾಶೆಗಳನ್ನು ತಯಾರುಮಾಡುವ ಕಾರ್ಯದಲ್ಲಿ ಶ್ವೈಯಿಟ್ಸರ್ ನಿರತನಾಗಿರುತ್ತಿದ್ದ. ಮುಂದೆ ರೋಗಿಗಳ ಜತೆ ಬರುವವರ ಅನುಕೂಲಕ್ಕೂ ವಸತಿಗಳ ನಿರ್ಮಾಣ ಮಾಡಿದನು. ಕೊಳಕಾದ ನದಿ ನೀರನ್ನು ಬಳಸುವುದರ ಬದಲಿಗೆ ಮಳೆ ನೀರನ್ನು ಸಂಗ್ರಹಿಸಿಡಲು ದೊಡ್ಡ ದೊಡ್ಡ ತೊಟ್ಟಿಗಳೂ ತಯಾರಾದವು.

ಲ್ಯಾಂಬರೀನಿಗೆ ಬಂದರೂ ಹೆಲೆನ್‌ಳ ಆರೋಗ್ಯ ಸುಧಾರಿಸಲೇ ಇಲ್ಲ. ದೈಹಿಕ ಬಳಲಿಕೆಯಿಂದ ಬೇಸತ್ತಿದ್ದಳು. ಕುಟೀರದ ಅಟ್ಟದ ಮೇಲೆ ಕುಳಿತು ದೂರದಿಂದ ಆಸ್ಪತ್ರೆಯ ಕೆಲಸಗಳನ್ನು ವೀಕ್ಷಿಸುವುದರಿಂದಲೇ ತೃಪ್ತಿಪಡುತ್ತಿದ್ದಳು. ಕಾಯಿಲೆ ದಿನೇ ದಿನೇ ಉಲ್ಬಣವಾಗುತ್ತಿದ್ದುದನ್ನು ಗಮನಿಸಿದ ಶ್ವೈಯಿಟ್ಸರ್, ಆ ವರ್ಷದ ಈಸ್ಟರ್ ಸಮಯಕ್ಕೆ ಆಕೆಯನ್ನು ಯುರೋಪಿಗೆ ಕಳುಹಿಸುವ ಏರ್ಪಾಡು ಮಾಡಬೇಕಾಯಿತು.

ಡಾ॥ ಆಲ್ಬರ್ಟ್ ಶ್ವೈಯಿಟ್ಸರ್, ಮೊಟ್ಟಮೊದಲು ಆಫ್ರಿಕಾದ ಕರೆಗೆ ಓಗೊಟ್ಟಾಗ, ಅಲ್ಲಿನ ಕಾಡಿನ ನಡುವೆ ಇರಬಹುದಾದ ಅನಾಗರಿಕ ಬಡ ನೀಗ್ರೋಗಳ ರೋಗರುಜಿನಗಳನ್ನು ಸಾಂತ್ವನಗೊಳಿಸಲು ಪೊದೆಗಳ ಮಧ್ಯೆ ಆಸ್ಪತ್ರೆಯನ್ನು(BUSH-HOSPITAL) ತೆರೆಯುವ ತೀರಾ ಸರಳ ಯೋಜನೆಯನ್ನು ಹಮ್ಮಿಕೊಂಡಿದ್ದ. ಅದು ಇಷ್ಟು ದೊಡ್ಡದಾಗಿ ಬೆಳೆಯಬಹುದೆಂಬುದು ಅವನ ಬುದ್ಧಿಗೆ ಆಗ ಹೊಳೆದಿರಲಿಲ್ಲ. ಕೋಳಿ-ಗೂಡಿನಂಥ ಗುಡಿಸಿಲಿನಲ್ಲಿ ಆರಂಭವಾದ ಕಾರ್ಯ ಈಗ ಹೆಮ್ಮರವಾಗಿ ಬೆಳೆದಿತ್ತು. ಲ್ಯಾಂಬರೀನೆಯ ಸುತ್ತಲಿನ ನೂರಾರು ಮೈಲಿಗಳ ದೂರದಿಂದ ಪ್ರತಿದಿನ ರೋಗಿಗಳ ತಂಡೋಪ-ತಂಡಗಳು ಅಲ್ಲಿಗೆ ಬರುತ್ತಿದ್ದವು. ಇಲ್ಲಿ ಜರುಗುತ್ತಿದ್ದ ಕಾರುಣ್ಯಮಯ ಮಾನವೀಯ ಸೇವೆಯ ವಿಷಯ ತಿಳಿದು ತ್ಯಾಗ ಮನೋಭಾವದ ವೈದ್ಯರು, ದಾದಿಯರು ಮತ್ತಿತರ ಸಮಾಜ-ಸೇವಕರು ಕೆಲಕಾಲ ಸ್ವಯಂಸೇವೆ ನಡೆಸಿ ಕೃತಾರ್ಥರಾಗಲು ಅಲ್ಲಿಗೆ ಬರುತ್ತಿದ್ದರು. ಜರುಗುತ್ತಿದ್ದ ಚಿಕಿತ್ಸಾ ವಿಧಾನಗಳ ಗುಣಮಟ್ಟವೂ ಉತ್ತಮ ತರಹದ್ದೆಂದು ಹೆಸರಾಗಿತ್ತು.

ಲ್ಯಾಂಬರೀನೆಯಲ್ಲಿ ಜರುಗುತ್ತಿದ್ದ ವೈದ್ಯಕೀಯ ಸೇವಾ-ಕಾರ್ಯಕ್ರಮದ ಹರವು ಮತ್ತು ಮಹತ್ವಗಳನ್ನು ಅರ್ಥೈಸಿಕೊಳ್ಳಲು ಅಲ್ಲಿಯ ಒಂದು ದಿನದ ಕಾರ್ಯಕಲಾಪ

ಗಳತ್ತ ಗಮನಹರಿಸಬೇಕಾಗುತ್ತದೆ. ಆಫ್ರಿಕಾದ ವಿಚಿತ್ರ ಹವಾಮಾನ, ಅಲ್ಲಿನ ಆದಿವಾಸಿಗಳ ಜೀವನಕ್ರಮ, ಅವರ ಅಭ್ಯಾಸ, ಹವ್ಯಾಸಗಳನ್ನನುಸರಿಸಿ ಆಸ್ಪತ್ರೆ ಮತ್ತು ಸಿಬ್ಬಂದಿಗಳ ಕಾರ್ಯವಿಧಾನವನ್ನು ರೂಪಿಸಿ ಕೃತಿಗಿಳಿಸಲಾಗಿತ್ತು. ಡಾ॥ ಶ್ವೆಯಿಟ್ಸರ್ ಕಟ್ಟುನಿಟ್ಟಾಗಿ ರೂಪಿಸಿದ ಈ ಕಾರ್ಯಕ್ರಮಗಳ ಬಗೆಗೆ ಮೊದಮೊದಲು ಕೆಲವರಿಂದ ವಿರೋಧ ವ್ಯಕ್ತವಾಗಿದ್ದುಂಟು. ದಿನಗಳುರುಳಿದಂತೆಲ್ಲಾ ಅವೆಲ್ಲಾ ಅಲ್ಲಿನ ಪರಿಸ್ಥಿತಿಗಳಿಗೆ ಸರಿಯಾದವೆಂದು ಎಲ್ಲರೂ ಒಪ್ಪಲೇಬೇಕಾಗುತ್ತಿತ್ತು.

ಬೆಳಿಗ್ಗೆ ಆರು ಮುಕ್ಕಾಲು ಗಂಟೆಗೆ ಸರಿಯಾಗಿ ಮೊದಲ ಘಂಟಾನಾದವಾಗುತ್ತದೆ. ಆ ದಿನದ ಕಾರ್ಯನಿರತ ವೈದ್ಯರು (DUTY-DOCTOR) ವಾರ್ಡುಗಳಲ್ಲಿ ತಿರುಗಾಡಿ, ರೋಗಿಗಳನ್ನು ಪರೀಕ್ಷಿಸಿ ಚಿಕಿತ್ಸಾ-ವಿವರಣೆ ನೀಡುತ್ತಾರೆ. ಅದೇ ಸಮಯದಲ್ಲಿ ಕೆಲಸಕ್ಕೆ ಹಾಜರಾಗುವ ದಾದಿ, ಆಸ್ಪತ್ರೆಯ ತೋಟಗಳಲ್ಲಿ ಕೆಲಸ ಮಾಡುವವರ ಹಾಜರಿಯನ್ನು ತೆಗೆದುಕೊಳ್ಳುತ್ತಾಳೆ. ಅವರಿಗೆ ಬೇಕಾಗುವ ಹಾರೆ, ಗುದ್ದಲಿ, ಪಿಕಾಸಿ, ಕೊಡಲಿ, ಗರಗಸಗಳನ್ನು ನೀಡುತ್ತಾಳೆ. ರೋಗಿಗಳ ಜೊತೆ ಇರಲು ಬಂದ ಶಕ್ತರಾದ ಇತರ ಜನರನ್ನೂ ಈ ಕೆಲಸಗಳಿಗೆ ನೇಮಿಸಿಕೊಳ್ಳಲಾಗುತ್ತದೆ. ಅವರಿಗೆಲ್ಲಾ ಆ ದಿನದ ಕೆಲಸಗಳ ವಿವರಣೆ ನೀಡುತ್ತಾಳೆ. ಅವಶ್ಯಕವೆನಿಸಿದರೆ ಕೆಲಸ ನಡೆಯುವ ಜಾಗಗಳಿಗೂ ಹೋಗಿ ಆಗಬೇಕಾದ ಕೆಲಸದ ಬಗೆಗೆ ಮಾಹಿತಿ ನೀಡುತ್ತಾಳೆ. ಇದೇ ಸಮಯದಲ್ಲಿ ಪರೀಕ್ಷಾ-ಕೊಠಡಿಯಲ್ಲಿ ನೆರೆದ ರೋಗಿಗಳ ಸಂಬಂಧಿಕರಿಗೆ ಆ ದಿನ ಆಸ್ಪತ್ರೆಯಲ್ಲಿ ಅತ್ಯಂತ ವಿಷಮ-ಪರಿಸ್ಥಿತಿಯಲ್ಲಿರುವ ರೋಗಿಗಳ ಬಗೆಗೆ ಮಾಹಿತಿ ಒದಗಿಸುತ್ತಾಳೆ.

ಮತ್ತೆ ಏಳುವರೆ ಗಂಟೆಗೆ ಎರಡನೇ ಘಂಟಾನಾದ. ಇದು ಬೆಳಗಿನ ಉಪಹಾರದ ಕರೆ. ಉಪಹಾರ ಮುಗಿಸಿ ಎಂಟು ಗಂಟೆಗೆ ಸರಿಯಾಗಿ ಆಸ್ಪತ್ರೆಯ ಕೆಲಸ ಆರಂಭ ವಾಗುತ್ತದೆ. ಹೀಗೆ ನಿಗದಿಸಿದ ಸಮಯಕ್ಕಿಂತ ಮೊದಲ ಮತ್ತು ದಿನದ ಕೆಲಸ ಅಧಿಕೃತವಾಗಿ ಮುಗಿದ ನಂತರವೂ ಕೆಲಸದಲ್ಲಿ ಮುಗ್ನರಾಗುವ ಅತೀ ಉತ್ಸಾಹಿಗಳೂ ಅಲ್ಲಿರದಿರಲಿಲ್ಲ. ಆದರೆ ಶ್ವೆಯಿಟ್ಸರ್ ಆ ರೀತಿ ತಮ್ಮ ಶಕ್ತಿಯನ್ನು ವ್ಯಯಮಾಡಿ ಕೊಳ್ಳಲು ಬಿಡುತ್ತಿರಲಿಲ್ಲ. ಎಂತಹ ದೃಢಕಾಯ ಆರೋಗ್ಯವಂತರಾದರೂ ಉಷ್ಣವಲಯದ ಹವಾಮಾನದಲ್ಲಿ ಯುರೋಪಿನಲ್ಲಿ ಮಾಡಿದಷ್ಟು ಕೆಲಸ ಮಾಡಲು ಸಾಧ್ಯವಿಲ್ಲವೆಂಬುದನ್ನು ಸ್ವಂತ ಅನುಭವದಿಂದಲೇ ಪಡೆದುಕೊಂಡಿದ್ದ. ಯುರೋಪಿನಲ್ಲಿ ಮಾಡಬಹುದಾದ ಕೆಲಸದ ಮುಕ್ಕಾಲು ಭಾಗದಷ್ಟು ಕೆಲಸ ಮಾತ್ರ ಇಲ್ಲಿ ಸಾಧ್ಯವೆಂಬುದು ಅವನ ಅಭಿಪ್ರಾಯ. ಆದರೂ ಹೊತ್ತಿಲ್ಲದ ಹೊತ್ತಿನಲ್ಲಿ ರೋಗಿಗಳು ಆಸ್ಪತ್ರೆಗೆ ಬರುವುದು ಸ್ವಾಭಾವಿಕವಾದುದರಿಂದ ಕೆಲ ಸಾರಿ ಸಿಬ್ಬಂದಿ ವರ್ಗದವರು ತಮ್ಮ ಶಕ್ತಿಮೀರಿ ಕೆಲಸ ಮಾಡಲೇಬೇಕಾಗುತ್ತಿತ್ತು.

ಆಸ್ಪತ್ರೆಯ ಬಟ್ಟೆ-ಬರೆಗಳನ್ನು ತೊಳೆದು ಶುಚಿಮಾಡಲು ಆರು ಜನ ಹೆಣ್ಣಾಳುಗಳು ನೇಮಕವಾಗಿದ್ದರು. ಬಟ್ಟೆಗಳನ್ನು ಶುಚಿಗೊಳಿಸುವ ಜಾಗ ಆಸ್ಪತ್ರೆಯ ಪರೀಕ್ಷಾ-ಕೊಠಡಿಗೆ ಕಾಣಿಸುವಂತೆ ಕಟ್ಟಿಸಲಾಗಿತ್ತು. ಕೆಲಸದ ಜನಗಳು ಸೋಮಾರಿಗಳಾಗಿ ಕಾಲ ಕಳೆಯದಂತೆ ಆ ಕೊಠಡಿಯಲ್ಲಿ ಕಾರ್ಯನಿರತಳಾದ ದಾದಿ ನಿಗಾವಹಿಸು ತ್ತಿದ್ದಳು. ಬಟ್ಟೆಗಳನ್ನು ಶುಚಿ ಮಾಡುವ ಕೆಲಸವೂ ಕರಾರುವಾಕ್ಕಾಗಿ ಬೆಳಗಿನ ಎಂಟು ಗಂಟೆಗೇ ಶುರುವಾಗುತ್ತಿತ್ತು.

ಆಸ್ಪತ್ರೆಗೆ ಬೇಕಾಗುವ ಕಟ್ಟಿಗೆಯನ್ನು ಕಾಡಿನಿಂದ ತರಲು ಆರು ಜನ ಗಂಡಾಳುಗಳನ್ನು ನೇಮಿಸಿಕೊಳ್ಳಲಾಗಿತ್ತು. ಒಣಗಿದ ಮರಗಳನ್ನು ಕಡಿದು ಪ್ರತಿದಿನ ಆಸ್ಪತ್ರೆಗೆ ಸಾಗಿಸುವುದು ಅವರ ಕೆಲಸ. ಆಸ್ಪತ್ರೆಯ ಉಪಕರಣಗಳನ್ನು ಬಿಸಿನೀರಿನಲ್ಲಿ ಜೀವಿ - ಶುದ್ಧೀಕರಿಸುವುದು (STERILIZE) ಪಾಮ್ ಎಣ್ಣೆ ತಯಾರಿಸುವುದು ಮತ್ತು ಅಡಿಗೆ ಮಾಡುವುದಕ್ಕೆಲ್ಲಾ ಕಟ್ಟಿಗೆ ಬೇಕಾಗುತ್ತಿತ್ತು. ಅದಕ್ಕಾಗಿ ಕೆಲ ಸಾರಿ ಕಟ್ಟಿಗೆಯನ್ನು ಕೂಡಿಟ್ಟುಕೊಳ್ಳುತ್ತಿದ್ದರು. ಆಶ್ಚರ್ಯದ ಸಂಗತಿಯೆಂದರೆ ಹೀಗೆ ಕೂಡಿಟ್ಟ ಕಟ್ಟಿಗೆಯನ್ನು ಕದ್ದು ಸಾಗಿಸುವ ಆದಿವಾಸಿಗಳೂ ಅಲ್ಲಿದ್ದರು !

ವಾರದಲ್ಲಿ ಮೂರು ದಿನ ಬೆಳಿಗ್ಗೆ ಎಂಟು ಗಂಟೆಗೆ ಇಂಜಕ್ಷನ್ ನೀಡುತ್ತಿದ್ದರು. ಅಂಥಾ ಎಲ್ಲಾ ರೋಗಿಗಳನ್ನು ಪರೀಕ್ಷಾ-ಕೊಠಡಿಯ ಮುಂಭಾಗದ ಮರದ ನೆರಳಿನಡಿ ಕಲೆಹಾಕುತ್ತಿದ್ದರು. ಆಸ್ಪತ್ರೆಯ ನುರಿತ ಸೇವಕ ಡೊಮಿನಿಕ್ ಕೈಯಲ್ಲಿ ಒಂದು ಘಂಟೆಯನ್ನು ಹಿಡಿದು ಎಲ್ಲಾ ವಾರ್ಡುಗಳಲ್ಲಿ ಬಾರಿಸಿ ಇಂಜಕ್ಷನ್ ತೆಗೆದುಕೊಳ್ಳ ಬೇಕಾದವರಿಗೆ ಸೂಚನೆ ಕೊಡುತ್ತಿದ್ದ. ನಿದ್ದೆ-ಜ್ವರ, ಫೈಲೇರಿಯಾ, ಕುಷ್ಠರೋಗ, ಕ್ಷಯ ರೋಗ, ಮೇಹ ಸಂಬಂಧದ ರೋಗಿಗಳೆಲ್ಲರೂ ಅಲ್ಲಿಗೆ ಬಂದು ಸೇರುವಲ್ಲಿ ಒಂಭತ್ತು ಗಂಟೆಯಾಗುತ್ತಿತ್ತು. ಆದರೂ ಅಲಕ್ಷ್ಯದಿಂದ ಇಲ್ಲವೇ ಇಂಜಕ್ಷನ್‌ನ ನೋವಿನ ಹೆದರಿಕೆಯಿಂದ ಕೆಲವು ರೋಗಿಗಳು ಅಲ್ಲಿಗೆ ಬರದೇ ತಪ್ಪಿಸಿಕೊಳ್ಳುತ್ತಿದ್ದುದೂ ಉಂಟು. ಇಂಜಕ್ಷನ್‌ಗಳನ್ನು ನೀಡಲು ಎನ್‌ಯಾಮ ಎಂಬ ಆಫ್ರಿಕನ್ನನಿಗೆ ತರಬೇತಿ ಕೊಡಲಾಗಿತ್ತು. ಮಾಂಸಖಂಡಗಳಿಗೇ ಅಲ್ಲದೇ ರಕ್ತನಾಳಗಳ ಮೂಲಕ ಇಂಜಕ್ಷನ್ ಗಳನ್ನು ನೀಡುವ ಕಲೆಯಲ್ಲೂ ಅವನದು ಪಳಗಿದ ಕೈ. ಯಾರಿಗೆ ಯಾವ ಇಂಜಕ್ಷನ್‌ನನ್ನು ಎಷ್ಟು ಮತ್ತು ಹೇಗೆ ತಯಾರಿಸಿ ಕೊಡಬೇಕೆಂಬುದನ್ನು ವೈದ್ಯರೊಬ್ಬರು ನಿಗದಿ ಮಾಡಿ ಹೇಳುತ್ತಿದ್ದರು.

ಆ ಸಮಯದಲ್ಲಿ ಲಭ್ಯವಿರುವ ವೈದ್ಯರುಗಳಲ್ಲಿ ಒಬ್ಬರು, ಬಿಳಿಯ ರೋಗಿಗಳು, ಮಾನಸಿಕ ಕಾಯಿಲೆಯವರು, ಮೂತ್ರಾಂಗ-ಕಾಯಿಲೆಯವರು ಮತ್ತು ಔಷಧಾಲಯದ ಕೆಲಸಗಳನ್ನು ನೋಡಿಕೊಳ್ಳುವುದಲ್ಲದೆ, ಶಸ್ತ್ರಚಿಕಿತ್ಸೆಗಳಿದ್ದಾಗ ಸಹಾಯಕರಾಗಿ ಕೆಲಸ ಮಾಡಬೇಕಾಗಿತ್ತು. ಎರಡನೆಯ ವೈದ್ಯರು ಕುಷ್ಠರೋಗಿಗಳು,

ಕ್ಷಯ ರೋಗಿಗಳು, ನಿದ್ದೆ-ಜ್ವರದವರು, ಕಾಲು ಹುಣ್ಣುಗಳಿದ್ದವರ ಚಿಕಿತ್ಸೆಗಳೇ ಅಲ್ಲದೆ ಇಂಜಕ್ಷನ್ ಕೊಡುವುದರ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದರು. ಹೆರಿಗೆ ಮಾಡಿಸುವುದೂ ಅವರ ಕರ್ತವ್ಯವಾಗಿತ್ತು. ಮೂರನೆಯವರು ಶಸ್ತ್ರಚಿಕಿತ್ಸೆಗಳನ್ನು ಮಾಡುವುದು, ಬ್ಯಾಂಡೇಜುಗಳನ್ನು ಬದಲಾಯಿಸುವುದು. ಅಪಘಾತಕ್ಕೊಳಗಾದವರ ಚಿಕಿತ್ಸೆ ಮತ್ತು ಆಮಶಂಕೆ ರೋಗಿಗಳ ಚಿಕಿತ್ಸೆ ಇತ್ಯಾದಿಗಳನ್ನು ಮಾಡುತ್ತಿದ್ದರು.

ಅಲ್ಲಿರುತ್ತಿದ್ದ ಸುಮಾರು ಎಂಟು ಜನ ದಾದಿಯರಲ್ಲಿ ಮೂವರಿಗೆ ಮನೆಗೆಲಸ, ಅಡಿಗೆಮಾಡುವುದು, ಸಾಕುಪ್ರಾಣಿಗಳ ಮೇಲ್ವಿಚಾರಣೆಗಳೇ ಅಲ್ಲದೆ ಹಣ್ಣು-ತರಕಾರಿಗಳ ತೋಟದ ಕೆಲಸಗಳನ್ನು ವಹಿಸಲಾಗಿತ್ತು. ಇವರಲ್ಲಿ ಒಬ್ಬರು ಅನಾಥ-ಶಿಶುಗಳ ಲಾಲನೆಪಾಲನೆ ಮಾಡುತ್ತಿದ್ದರು. ಹಗಲಿನಲ್ಲಿ ಈ ಮಕ್ಕಳನ್ನು ವಿಶಾಲವಾದ ಹಜಾರದಲ್ಲಿ ಸೊಳ್ಳೆ-ಪರದೆಗಳಿಂದ ರಕ್ಷಣೆ ಇರುವ ತೊಟ್ಟಿಲುಗಳಲ್ಲಿ ಮಲಗಿಸಿ ರುತ್ತಿದ್ದರು. ರಾತ್ರಿ ಸಮಯದಲ್ಲಿ ಸಂಬಂಧಿಕರ ಜೊತೆ ವಾರ್ಡುಗಳಲ್ಲಿ ಬಿಡುತ್ತಿದ್ದರು. ತೋಟಗಳಲ್ಲಿ ಕೆಲಸ ಮಾಡಿಸುವುದು, ಕಟ್ಟಿಗೆ ಕಡಿಸುವ ಕೆಲಸಗಳ ಮೇಲ್ವಿಚಾರಣೆ ನಾಲ್ಕನೇ ದಾದಿಯ ಜವಾಬ್ದಾರಿ.

ಆಸ್ಪತ್ರೆಯಲ್ಲಿರುತ್ತಿದ್ದ ನಾಲ್ಕು ಜನ ದಾದಿಯರಲ್ಲಿ ಒಬ್ಬಳಿಗೆ ಶಸ್ತ್ರಚಿಕಿತ್ಸೆಗಳಿಗೆ ಬಟ್ಟೆ-ಬರೆ, ಉಪಕರಣಗಳನ್ನು ಜೀವಿ ಶುದ್ಧೀಕರಿಸುವುದು, ಶಸ್ತ್ರಚಿಕಿತ್ಸೆ ಸಮಯದಲ್ಲಿ ಸಹಾಯಮಾಡುವುದು, ಮತ್ತು ಬಟ್ಟೆ ಒಗೆಯುವ ಹೆಣ್ಣಾಳುಗಳ ಮೇಲ್ವಿಚಾರಣೆ ಮಾಡುವ ಕೆಲಸ. ಎರಡನೆಯವಳಿಗೆ ಶಸ್ತ್ರಚಿಕಿತ್ಸಾನಿರತ ದಾದಿಗೆ ಸಹಾಯಕಳಾಗಿ ರುವುದು, ಶಸ್ತ್ರಚಿಕಿತ್ಸೆಗೊಳಗಾದವರ ಬ್ಯಾಂಡೇಜುಗಳನ್ನು ಬದಲಾಯಿಸುವುದು ಮತ್ತು ಬಿಳಿಯ ರೋಗಿಗಳ ಶುಶ್ರೂಷೆ ಸಹಾ ವಹಿಸಲಾಗಿತ್ತು. ಮೂರನೆಯವಳು ಪರೀಕ್ಷಾ-ಕೊಠಡಿ, ವೈದ್ಯರ ಆಜ್ಞೆಗನುಸಾರ ಔಷಧಾಲಯದಲ್ಲಿದ್ದು ಮದ್ದು ನೀಡುವುದು, ಹೆರಿಗೆ ಮಾಡಿಸುವುದು, ಹೊಸದಾಗಿ ಜನಿಸಿದ ಕೂಸುಗಳ ಮೇಲ್ವಿಚಾರಣೆ ಮತ್ತು ಅತ್ಯಂತ ವಿಷಮ ಪರಿಸ್ಥಿತಿಯಲ್ಲಿರುವ ರೋಗಿಗಳ ಶುಶ್ರೂಷೆಯನ್ನು ವಹಿಸಲಾಗಿತ್ತು. ನಾಲ್ಕನೆಯವಳು ಕಾಲು-ಹುಣ್ಣಿನವರ ಬ್ಯಾಂಡೇಜ್, ಪಾಮ್ ಎಣ್ಣೆ ತಯಾರಿಸುವ ಹೆಣ್ಣಾಳುಗಳ ಮೇಲ್ವಿಚಾರಣೆ, ಬಾಳೆಹಣ್ಣು ಮತ್ತು ಗೆಡ್ಡೆ-ಗೆಣಸುಗಳನ್ನು ಖರೀದಿಸುವುದು, ಇದರೊಂದಿಗೆ ಪಡಿತರ ವಿತರಣೆ ಮತ್ತು ಆಸ್ಪತ್ರೆ ಪರಿಸರದ ಶುಚಿತ್ವದ ಜವಾಬ್ದಾರಿಯನ್ನು ವಹಿಸಲಾಗಿತ್ತು.

ಆಸ್ಪತ್ರೆಗೆ ಬರುತ್ತಿದ್ದ ರೋಗಿಗಳ ಜೊತೆಗೆ ಹಲವಾರು ಸಂಬಂಧಿಕರು ಮತ್ತು ಸಾಕು-ಪ್ರಾಣಿಗಳೂ ಇರುತ್ತಿದ್ದವು. ರೋಗಿಗಳ ಜತೆಗೆ ಇವರಿಗೂ ಆಹಾರ-ವಸ್ತುಗಳನ್ನು ಒದಗಿಸುವುದು ಆಸ್ಪತ್ರೆಯವರ ಜವಾಬ್ದಾರಿಯೆಂಬುದೇ ಅವರ ಅನಿಸಿಕೆ. ಕೆಲ ಸಾರಿ ಸುತ್ತಮುತ್ತಲ ಪ್ರದೇಶಗಳಲ್ಲಿ ಕೆಲಸವಿಲ್ಲದೆ ಸೋಮಾರಿಗಳೂ ಸಹ

ಈ ಜನಜಂಗುಳಿಯಲ್ಲಿ ಸೇರಿಹೋಗಿರುತ್ತಿದ್ದರು. ಇವರನ್ನೆಲ್ಲಾ ಗುರುತಿಸಿ ವಿಂಗಡಿಸುವ ಕಾರ್ಯ ರೋಗಿಯನ್ನು ಆಸ್ಪತ್ರೆಗೆ ದಾಖಲು ಮಾಡುವ ಸಮಯದಲ್ಲೇ ಆಗಬೇಕಾಗಿತ್ತು. ಆ ಸಮಯದಲ್ಲಿ ರೋಗಿಗೆ ಕೊಡುತ್ತಿದ್ದಂತೆ ಗುರುತಿನ ಚೀಟಿಗಳನ್ನು ಅವರ ಸಂಬಂಧಿಕರಿಗೂ ವಿತರಿಸಲಾಗುತ್ತಿತ್ತು. ಅವರಿಗೆ ಕೊಡಬಹುದಾದ ಆಹಾರ-ಪದಾರ್ಥಗಳ ವಿವರವನ್ನು ಚೀಟಿಗಳಲ್ಲಿ ಬರೆಯುತ್ತಿದ್ದರಲ್ಲದೆ ಪ್ರತಿ ಸಾರಿ ವಿತರಣೆ ಮಾಡಿದಾಗಲೂ ಅದರಲ್ಲಿ ಗುರುತುಹಾಕುತ್ತಿದ್ದರು. ಹಾಸಿಗೆ ಹಿಡಿದು ಮಲಗಿದವರಿಗೆ, ಆಸ್ಪತ್ರೆ ಒಳಗಡೇ ತಯಾರಿಸಿದ ಆಹಾರವನ್ನು ವಿತರಿಸುತ್ತಿದ್ದರು. ಓಡಾಡಿಕೊಂಡಿರುವವರು ಮತ್ತು ಅವರ ಸಂಬಂಧಿಗಳಿಗೆ ನಿಗದಿತ ಪ್ರಮಾಣದಲ್ಲಿ ಬಾಳೇಹಣ್ಣು, ಮುಡಿಗೆಣಸು ಇತ್ಯಾದಿಗಳನ್ನು ಹಂಚುತ್ತಿದ್ದರು. ಪ್ರತಿದಿನ ಹನ್ನೊಂದುವರೆ ಗಂಟೆಗೆ ಪಡಿತರ ಹಂಚುವ ಸೂಚನೆ ಕೊಡಲು ತುತ್ತೂರಿಯೊಂದನ್ನು ಊದುವರು. ಪ್ರತಿಯೊಬ್ಬರೂ ಅವರವರ ಪಡಿತರ-ಚೀಟಿಯನ್ನು ತೋರಿಸಿದಾಗ ಅದರಲ್ಲಿ ನಮೂದಾದ ಆಹಾರ-ವಸ್ತುಗಳನ್ನು ದಾದಿಯೊಬ್ಬಳು ವಿತರಿಸಿ ಚೀಟಿಯಲ್ಲಿ ಗುರುತು ಮಾಡುತ್ತಿದ್ದಳು. ಹಾಗೇನಾದರೂ ಬರೆಯದಿದ್ದಲ್ಲಿ ಸ್ವಲ್ಪ ಸಮಯದಲ್ಲೇ ಮತ್ತೊಬ್ಬ ಅದೇ ಚೀಟಿಯನ್ನು ತಂದು ಮತ್ತೆ ಆಹಾರ-ವಸ್ತುಗಳನ್ನು ಪಡೆಯುವುದು ಅಲ್ಲಿಯ ಸಾಮಾನ್ಯ ಸಂಗತಿ. ಇದೇ ರೀತಿ ಹಾಸಿಗೆ ಹಿಡಿದು ಮಲಗಿದ ರೋಗಿಗೆ ಅವನ ಸಂಬಂಧಿಕನ ಜೊತೆಯಲ್ಲೇ ಆಹಾರವನ್ನು ಕಳುಹಿಸಿದಾಗಲೂ ದಾರಿಯಲ್ಲೇ ಅದನ್ನು ಕಬಳಿಸುವುವವರೂ ಇದ್ದರು !

ಒಳರೋಗಿಗಳ ಸೇವೆಗಾಗಿ ಎಂಟು ಜನ ನೀಗ್ರೋಗಳನ್ನು ನೇಮಿಸಿಕೊಂಡಿದ್ದರು. ಜತೆಗೆ ಬಂದಿದ್ದ ಕೆಲವರಿಗೂ ರೋಗಿಗಳ ಸಾಮಾನ್ಯ ಆವಶ್ಯಕತೆಗಳಿಗೆ ನೆರವಾಗುವ ವಿಧಾನಗಳನ್ನು ಹೇಳಿಕೊಟ್ಟು ಅವರೂ ಆಸ್ಪತ್ರೆಯ ಕೆಲಸದಲ್ಲಿ ಭಾಗಿಗಳಾಗುವಂತೆ ಮಾಡುತ್ತಿದ್ದರು. ಅಂಥವರಲ್ಲಿ ಆರೋಗ್ಯವಂತರನ್ನು ತೋಟಗಳ ಕೆಲಸಕ್ಕೂ ಹಚ್ಚಿ, ಸ್ವಲ್ಪ ಪಗಾರವನ್ನೂ ಕೊಡುತ್ತಿದ್ದರು.

ಆಸ್ಪತ್ರೆಯ ಕೆಲಸ ಹೆಚ್ಚಾಗಿ, ಶಸ್ತ್ರಚಿಕಿತ್ಸೆ ಮುಂತಾದ ವಿಶೇಷ ಚಿಕಿತ್ಸಾ ಕ್ರಮಗಳು ಹೆಚ್ಚಾದಂತೆ, ವಾರದಲ್ಲಿ ಮೂರುದಿನ ಮಾತ್ರ ಹೊರ ರೋಗಿಗಳನ್ನು ಪರೀಕ್ಷಿಸಲಾಗುತ್ತದೆಂದು ಪ್ರಚಾರ ಮಾಡಬೇಕಾಯಿತು. ಆದರೂ ಪ್ರತಿ ದಿನ ಹಗಲು-ರಾತ್ರಿಯೆನ್ನದೇ ರೋಗಿಗಳ ತಂಡಗಳು ಬರುತ್ತಿದ್ದವು. ಅಂಥ ದಿನಗಳಲ್ಲಿ ಶಸ್ತ್ರಚಿಕಿತ್ಸೆಗಳಲ್ಲಿ ವೈದ್ಯರೆಲ್ಲ ನಿರತರಾಗಿದ್ದರೂ ಅವರನ್ನು ಕಡೆಗಣಿಸುವಂತಿರಲಿಲ್ಲ. ಡಾ॥ ಶ್ವೈಯಿಟ್ಸರನಂತೂ ನದಿಯ ಕಡೆ ಒಂದು ಕಿವಿಯನ್ನಿಟ್ಟುಕೊಂಡೇ ಮಲಗಿರುತ್ತಿದ್ದನೆಂಬ ಪ್ರತೀತಿ ಇತ್ತು. ನದಿಯಲ್ಲಿ ದೋಣಿ ಬಂದು ನಿಂತ ಶಬ್ದವಾದನೆ ಮೊದಲು ಎಚ್ಚರಗೊಳ್ಳುತ್ತಿದ್ದವನೂ ಶ್ವೈಯಿಟ್ಸರ್‌ನೆ !

ಮಧ್ಯಾಹ್ನ ಹನ್ನೆರಡುವರೆ ಗಂಟೆ ಹೊತ್ತಿಗೆ ಎಲ್ಲರೂ ಆಸ್ಪತ್ರೆಯ ಬೆಳಗಿನ ಕೆಲಸ ಮುಗಿಸಬೇಕೆಂಬ ನಿಯಮ; ಅಷ್ಟು ಹೊತ್ತಿಗೆ ಊಟದ ಸೂಚನೆಯ ಘಂಟಾನಾದ ವಾಗುತ್ತಿತ್ತು. ಮಧ್ಯಾಹ್ನ ಎರಡು ಗಂಟೆಯವರೆಗೆ ಭೋಜನ ಮತ್ತು ವಿಶ್ರಾಂತಿಯ ಸಮಯ. ಅಲ್ಲಿಯ ಹವೆಯ ಬೇಗೆಯನ್ನು ಸಹಿಸಲು ಸ್ವಲ್ಪ ಸಮಯವಾದರೂ ಮಲಗಿ ವಿಶ್ರಾಂತಿ ಪಡೆಯುವುದು ಅನಿವಾರ್ಯವೇ.

ಎರಡು ಗಂಟೆ ಸಮಯಕ್ಕೆ ಮತ್ತೆ ರೋಗಿಗಳ ತಪಾಸಣೆ ಆರಂಭ. ಕೆಲವರು ಹೊರ ರೋಗಿಗಳತ್ತ ಗಮನ ಹರಿಸಿದರೆ, ಉಳಿದವರು ಒಳರೋಗಿಗಳ ಸುದೀರ್ಘ ಪರೀಕ್ಷೆ, ರೋಗನಿರ್ಣಯ, ವಿಚಾರ ವಿನಿಮಯ ಮತ್ತು ಅನುಸರಿಸಬೇಕಾದ ಚಿಕಿತ್ಸಾ ವಿಧಾನಗಳ ಬಗೆಗೆ ನಿರ್ಧಾರದ ಕಾರ್ಯಗಳಲ್ಲಿ ಮಗ್ನರಾಗಿರುತ್ತಿದ್ದರು. ಅಲ್ಲಿ ಹಲವು ವಿಷಯಗಳಲ್ಲಿ ಪರಿಣಿತ ವೈದ್ಯರಿರುತ್ತಿದ್ದು, ಅವರೆಲ್ಲರೂ ಕಲೆತು ಚರ್ಚಿಸುವುದು ಚಿಕಿತ್ಸೆಯು ಯಶಸ್ವಿಯಾಗುವುದಕ್ಕೆ ಅನುಕೂಲ. ಕೊನೆಗೆ ಎಲ್ಲರೂ ಒಡಗೂಡಿ ಸಾಯಂಕಾಲದ ವಾರ್ಡುಗಳ ವೀಕ್ಷಣೆ (WARD ROUNDS) ಕೂಡ ಮಾಡುವ ಪರಿಪಾಠವಿತ್ತು.

ಕಾಯಿಲೆಗಳಿಂದ ವಿಮುಕ್ತರಾದವರನ್ನು ಅವರವರ ಊರುಗಳಿಗೆ ಹಿಂದಿರುಗಿ ಸುವುದು ಪ್ರಯಾಸದ ಕೆಲಸವೆ. ಓಗಾವೆ-ನದಿಯಲ್ಲಿ ಸಾಮಾನು ಸರಂಜಾಮು, ಮರದ ದಿಣ್ಣೆಗಳನ್ನು ಸಾಗಿಸುವ ದೋಣಿಗಳೇ ಅಲ್ಲಿನ ಏಕೈಕ ಸಾರಿಗೆ-ವ್ಯವಸ್ಥೆ. ಅವುಗಳ ಚಲಿಸುವ ಬಗೆಗೆ ನಿಗದಿತ ಸಮಯ ಅಥವಾ ದಿನಗಳಿರುವುದಿಲ್ಲ. ದೋಣಿಗಳು ಬರುವುದನ್ನು ಕಾಯುತ್ತಿರಬೇಕಾಗುತ್ತದೆ. ಬಂದಾಗ ಅದು ಚಲಿಸುವ ದಿಕ್ಕು ಮತ್ತು ತಲುಪುವ ಊರುಗಳನ್ನು ಪತ್ತೆ ಮಾಡಿಕೊಳ್ಳಬೇಕು. ಆ ಕಡೆ ಹೋಗಲು ತಯಾರಿರುವವರನ್ನು ಪತ್ತೇಹಚ್ಚಿ ಅದರಲ್ಲಿ ಸಾಗುಹಾಕುವ ಪ್ರಯತ್ನ ಕೂಡಲೇ ನಡೆಯಬೇಕು. ದೋಣಿಯ ಮಾಲೀಕರೂ ಪ್ರತಿ ಸಾರಿ ರೋಗಿಗಳನ್ನು ಕೊಂಡೊಯ್ಯಲು ಸಮ್ಮತಿಸಲಾರರು. ಗುಣಹೊಂದಿದವರೂ ಸಹಾ ತಕ್ಷಣ ಆಸ್ಪತ್ರೆಯನ್ನು ತ್ಯಜಿಸಲು ತಯಾರಿರುವುದಿಲ್ಲ. ದೋಣಿ ಬಂದಿರುವ ವಿಷಯ ಮತ್ತು ಚಲಿಸುವ ಮಾರ್ಗವನ್ನು ತಿಳಿದುಕೊಂಡು ಡೊಮಿನಿಕ್ ಪ್ರತಿ ವಾರ್ಡಿಗೂ ಹೋಗಿ ಘಂಟೆ ಬಾರಿಸಿ, ಸುದ್ದಿ ಮುಟ್ಟಿಸುತ್ತಾನೆ. ಆ ಕಡೆ ಹೋಗುವ ಜನರು ಕೂಡಲೇ ಹೊರಡಬೇಕೆಂದು ತಾಕೀತು ಮಾಡುತ್ತಾನೆ. ಒಲ್ಲದ ಮನಸ್ಸಿನಿಂದ ಹೊರಟವರು ಅವರಿವರೊಡನೆ ಮಾತಾಡಿ ಬೀಳ್ಕೊಂಡು ನದಿಯ ಹತ್ತಿರ ಬರುವಷ್ಟರಲ್ಲೇ ಎಷ್ಟೋ ಸಾರಿ ದೋಣಿ ಹೊರಟುಹೋಗಿರುತ್ತಿತ್ತು!

ತಿಂಗಳ ಕೊನೆಯ ದಿನ ಮಧ್ಯಾಹ್ನ ಆಸ್ಪತ್ರೆಯಲ್ಲಿರುವ ರೋಗಿಗಳ ಹಾಜರಿ ತನಿಖೆ ನಡೆಯುತ್ತದೆ. ಪರೀಕ್ಷಾ-ಕೊಠಡಿಯ ಹತ್ತಿರ ನಡೆಯಲು ಶಕ್ತರಾದ ಎಲ್ಲಾ

ರೋಗಿಗಳನ್ನು ಕಲೆಹಾಕುತ್ತಾರೆ. ಹಾಸಿಗೆ ಹಿಡಿದ ರೋಗಿಗಳ ದಾಖಲೆ-ಪತ್ರಗಳನ್ನು ದಾದಿಯರು ಮೊದಲು ಹಾಜರಿಪಡಿಸುತ್ತಾರೆ. ಇನ್ನುಳಿದವರನ್ನು ವೈಯಕ್ತಿಕವಾಗಿ ಪರಿಶೀಲಿಸಿ, ಅವರ ದಾಖಲೆ-ಪತ್ರಗಳ ಜತೆ ಹೊಂದಾಣಿಕೆ ಮಾಡುತ್ತಾರೆ. ಬಹಳ ದಿನಗಳಿಂದ ಆಸ್ಪತ್ರೆಯಲ್ಲಿ ನೆಲೆಯೂರಿದ್ದ ರೋಗಿಗಳ ಮುಂದಿನ ಚಿಕಿತ್ಸಾ-ವಿಧಾನಗಳ ಬಗ್ಗೆ ವೈದ್ಯರೆಲ್ಲರೂ ಚರ್ಚಿಸುತ್ತಾರೆ. ಜತೆಗೆ ತೋಟಗಳಲ್ಲಿ ಕೆಲಸ ಮಾಡಲು ಬಂದವರ ಎಣಿಕೆ ಸಹಾ ನಡೆಯುತ್ತದೆ. ಈ ತೆರನ ತನಿಖೆಯಿಂದ ಅನಧಿಕೃತವಾಗಿ ಆಸ್ಪತ್ರೆಯೊಳಗೆ ನುಸುಳಿಕೊಂಡವರ ಹಾಗೂ ಹೇಳದೆ ಕೇಳದೆ ಪರಾರಿಯಾದವರ ಮಾಹಿತಿಯೂ ದೊರೆಯುತ್ತದೆ. ರೋಗಿಗಳ ಜತೆ ಇದ್ದು ಆಸ್ಪತ್ರೆಗೆ ಒಳ್ಳೆಯ ಕೆಲಸ ಮಾಡಿದವರಿಗೆ ಸ್ವಲ್ಪ ಕೈಕಾಸಿನ ಜತೆಗೆ ಉಡುಗೊರೆಗಳನ್ನೂ ಕೊಡುವ ನಿರ್ಧಾರವೂ ಈ ಸಮಯದಲ್ಲೇ ಆಗುತ್ತದೆ.

ಆಹಾರದ ಅವಶ್ಯಕತೆಗಳಿಗಾಗಿ ಹಣ್ಣು ತರಕಾರಿಗಳ ಗಿಡ ಮರಗಳನ್ನು ಬೆಳೆಸಿದ್ದಂತೆ ಆಸ್ಪತ್ರೆಯವರ ಉಪಯೋಗಕ್ಕಾಗಿ ಅಲ್ಲಿ ಕುರಿ, ಕೋಳಿ, ಹಂದಿ ಮೊದಲಾದ ಪ್ರಾಣಿಗಳನ್ನೂ ಸಾಕಿದ್ದರು. ಮೇವಿನಿಂದ ಅವು ಸಾಯಂಕಾಲ ಹಿಂದಿರುಗುವ ಶಬ್ದವೇ ಆಸ್ಪತ್ರೆಯ ಕೆಲಸ ಮುಗಿಯುವ ಸೂಚನೆ ಎಂದರ್ಥ. ಸಾಯಂಕಾಲ ಆರುಗಂಟೆಗೆ ಎಲ್ಲರೂ ಕೆಲಸ ನಿಲ್ಲಿಸಬೇಕೆಂದು ಎಚ್ಚರಿಸಲು ಘಂಟಾನಾದ ಕೇಳಿಸುತ್ತದೆ. ಆಸ್ಪತ್ರೆಯವರೇ ಅಲ್ಲದೆ, ತೋಟಗಳಲ್ಲಿ ಕೆಲಸ ಮಾಡುತ್ತಿದ್ದವರು, ಕಟ್ಟಿಗೆ ತರಲು ಹೋದವರೆಲ್ಲರೂ ಬೆಳಿಗ್ಗೆ ಅವರಿಗೆ ನೀಡಿದ್ದ ಸಲಕರಣೆಗಳನ್ನು ದಾದಿಗೆ ಹಿಂದಿರುಗಿಸುತ್ತಾರೆ. ಸಮಭಾಜಕ ವೃತ್ತ ಈ ಪ್ರದೇಶದಲ್ಲಿ ಬೆಳಕು ಮಾಯವಾದ ತಕ್ಷಣವೇ, ಇದ್ದಕ್ಕಿದ್ದಂತೆ ಕತ್ತಲು ಆವರಿಸುತ್ತದೆ. ಲಾಟೀನುಗಳನ್ನು ಮೊದಲೇ ಸರಿಪಡಿಸಿಕೊಂಡಿದ್ದು ಕೂಡಲೇ ಹಚ್ಚಬೇಕಾಗುತ್ತದೆ. ಕತ್ತಲಾವರಿಸುತ್ತಿದ್ದಂತೆ ಸೊಳ್ಳೆಗಳ ದಂಡೂ ಮುತ್ತಿಗೆ ಹಾಕುತ್ತವೆ. ಅದರಿಂದ ಸೊಳ್ಳೆ-ಪರದೆಗಳನ್ನು ಹಾಕಿ ಕಟ್ಟಿದ ಆಸ್ಪತ್ರೆ ಇಲ್ಲವೇ ಅವರವರ ಮನೆಗಳೊಳಗೆ ಎಲ್ಲರೂ ಧಾವಿಸುತ್ತಾರೆ.

ಸಂಜೆ ಆರೂವರೆ ಗಂಟೆಗೆ ಕೇಳಿಬರುವ ಘಂಟಾನಾದ ಇನ್ನೂ ಕೆಲಸವನ್ನು ಕೈಬಿಡದವರನ್ನು ಎಚ್ಚರಿಸುವುದಕ್ಕಾಗಿ. ರಾತ್ರಿ ಭೋಜನದ ಸೂಚನೆಯ ಘಂಟಾನಾದ ಸಂಜೆ ಏಳು ಗಂಟೆಗಾಗುತ್ತದೆ. ಎಲ್ಲರೂ ಒಂದೇ ಕಡೆ ಕುಳಿತು ಸಾಮೂಹಿಕ ಭೋಜನ- ವ್ಯವಸ್ಥೆ ಅಲ್ಲಿಯದು. ಭೋಜನ ಮುಗಿದ ನಂತರ ಸಾಮೂಹಿಕ ಪ್ರಾರ್ಥನೆ. ರಾತ್ರಿಯ ಕೊನೆಯ ಘಂಟಾನಾದ ಎಂಟುವರೆ ಗಂಟೆಗೆ. ಇನ್ನು ಆ ವಸತಿ-ಪ್ರದೇಶದಲ್ಲಿ ಎಲ್ಲಾ ಸದ್ದು ಗದ್ದಲಗಳೂ ನಿಲ್ಲಬೇಕೆಂಬ ಸೂಚನೆಗಾಗಿ ಅದು, ಗ್ರಾಮಾಫೋನ್ ಧ್ವನಿಮುದ್ರಣಗಳನ್ನು ಹಾಕಿ ಆಲಿಸುತ್ತಿದ್ದ ಬಿಳಿಯರೂ ಅವನ್ನು ನಿಲ್ಲಿಸುತ್ತಾರೆ. ನಂತರ ದಾದಿಯರು ಕಸೂತಿ ಕೆಲಸಗಳಲ್ಲಿ ಮಗ್ನರಾದರೆ, ವೈದ್ಯರು

ವೈದ್ಯಕೀಯ ಗ್ರಂಥ, ಪತ್ರಿಕೆಗಳ ಅಭ್ಯಾಸದಲ್ಲಿ ನಿರತರಾಗುತ್ತಾರೆ.

ರಾತ್ರಿ ಹತ್ತು ಗಂಟೆ ಸಮಯಕ್ಕೆ ಅಲ್ಲಿ ಮಾನವ-ಜನ್ಯ ಶಬ್ದಗಳೆಲ್ಲ ಸ್ಥಗಿತವಾಗುತ್ತವೆ. ಬಹುಶಃ ಡಾ॥ ಶ್ವೈಯಿಟ್ಸರ್‌ನ ಕುಟೀರವನ್ನು ಹೊರತುಪಡಿಸಿದರೆ ಇನ್ನಾವ ಗುಡಿಸಲು ಗಳಲ್ಲೂ ಬೆಳಕು ಕಾಣಲಾರದು. ಒಂದೊಂದು ಸಾರಿ ನದಿಯಲ್ಲಿಯ ಡೊಂಕರ-ಕಪ್ಪೆಗಳು ವಟ ವಟ, ಇಲ್ಲವೇ ನೀರಾನೆಗಳ ಬೊಬ್ಬೆ ರಾತ್ರಿಯೆಲ್ಲಾ ಕೇಳಿಬರುತ್ತದೆ. ದೂರದ ನೀಗ್ರೋಗಳ ತಾಂಡೆಗಳಲ್ಲಿ ಚಂಡೆ-ಮದ್ದಳೆ ಬಾರಿಸುವ ಶಬ್ದ ಜನರ ನಿದ್ದೆಗೆಡಿಸುತ್ತಿದ್ದುದೂ ಉಂಟು. ರಾತ್ರಿಯ ತಣ್ಣನೆಯ ಗಾಳಿ ಬೀಸಿದಾಗ ಹಗಲಿನ ಸೆಕೆಯ ಬೇಗುದಿ ಕಡಿಮೆಯಾಗಿ ಹಗಲೆಲ್ಲಾ ದಣಿದವರನ್ನು ನಿದ್ದೆ ಆವರಿಸುತ್ತದೆ.

ಲ್ಯಾಂಬರೀನೆಯಲ್ಲಿನ ವಸತಿಗಳಲ್ಲಿ ಹತ್ತು ಗಂಟೆ ಸಮಯಕ್ಕೆ ಸದ್ದಡಗಿ, ಕತ್ತಲಾವರಿಸಿದರೂ ದೊಡ್ಡ ಡಾಕ್ಟರ ಕುಟೀರದಿಂದ ಪಿಯಾನೋ ನಾದ ಕೇಳಿಸುತ್ತಲೇ ಇರುತ್ತದೆ. ಮಧ್ಯರಾತ್ರಿ ಕಳೆದರೂ ಬೆಳಕು ಆರುವುದೇ ಇಲ್ಲ. ಹಗಲೆಲ್ಲ ದಣಿದ ವಯಸ್ಸಾದ ಶ್ವೈಯಿಟ್ಸರ್‌ನ ಧರ್ಮಗ್ರಂಥಗಳ ಅಭ್ಯಾಸ, ಬರವಣಿಗೆಗಳೂ ಅವ್ಯಾಹತವಾಗಿ ನಡೆಯುತ್ತಲೇ ಇರುತ್ತದೆ.

ಇದು, ಲ್ಯಾಂಬರೀನೆಯ ಅರಣ್ಯದ ನಡುವೆ ನೆಲೆಯಾಗಿರುವ ಆಸ್ಪತ್ರೆಯ ದಿನಚರಿ. ಅದರ ಅಧ್ವರ್ಯು ಡಾ॥ ಶ್ವೈಯಿಟ್ಸರ್‌ನ ದಿನಚರಿ ಅದರಲ್ಲೇ ಹಾಸು ಹೊಕ್ಕಾಗಿದೆ. ಬೆಳಗಿನ ಜಾವವೇ ಎಲ್ಲರಿಗಿಂತ ಮೊದಲೇ ಎದ್ದು ಮತ್ತೆ ಸ್ವಲ್ಪ ಸಮಯ ಪಿಯಾನೊ ನುಡಿಸುವನು. ಬೆಳಕು ಹರಿದಾಕ್ಷಣ ಕುಟೀರದ ಹೊರಾಂಗಣದಲ್ಲಿ ನೇತು ಹಾಕಿರುವ ಚಿಕ್ಕ ಕನ್ನಡಿಯ ಎದಿರು ಮುಖಕ್ಷೌರ, ಸ್ನಾನ ಇತ್ಯಾದಿ ಶುಚಿಕಾರ್ಯ ಗಳಾಗುತ್ತವೆ. ಮುಂದೆ ಆಸ್ಪತ್ರೆಯ ಇತರ ಕೆಲಸಗಾರರ ಜೊತೆ ಅವನೂ ಒಬ್ಬನಾಗುತ್ತಾನೆ.

ಆಫ್ರಿಕಾದ ಘೋರಾರಣ್ಯದ ನಡುವೆ ಡಾ॥ ಆಲ್ಬರ್ಟ್ ಶ್ವೈಯಿಟ್ಸರ್ ಬರೇ ಮೆಡಿಕಲ್-ಮಿಷನರಿಯಾಗಿ ಕಾಲ ಕಳೆಯಲಿಲ್ಲ. ವಿಶ್ವದ ಎಲ್ಲಾ ಮತ ಧರ್ಮದ ಗ್ರಂಥಗಳನ್ನು ರಾಶಿಹಾಕಿಕೊಂಡು ಅವುಗಳ ಸಾರವನ್ನು ಮನನ ಮಾಡುತ್ತಿದ್ದ. ಮೊದಲೇ ಕ್ರೈಸ್ತ-ಮತ-ಧರ್ಮ ಮತ್ತು ತತ್ವಗಳು ಕರತಲಾಮಲಕವಾಗಿದ್ದು, ಅವುಗಳಿಗೂ ತನ್ನದೇ ಆದ ವೈಚಾರಿಕ ವ್ಯಾಖ್ಯಾನಗಳನ್ನು ನೀಡಿ ಧಾರ್ಮಿಕವಲಯ ಗಳಲ್ಲಿ ಪ್ರಶ್ನಾರ್ಹ ವ್ಯಕ್ತಿತ್ವವನ್ನು ಬೆಳೆಸಿಕೊಂಡಿದ್ದ. ಪ್ರಪಂಚದಲ್ಲಿ ಆಚರಣೆಯಲ್ಲಿದ್ದ ಹಿಂದು, ಬೌದ್ಧ, ಜೈನ, ಜರತುಷ್ಟ್ರ, ಚೀನಾ ದೇಶದ ಹಲವು ಪಂಗಡಗಳ ಗ್ರಂಥಗಳ ಆಳವಾದ ಅಭ್ಯಾಸ ಮಾಡುತ್ತಿದ್ದ. ಭಾರತದ ಧರ್ಮಬೋಧನೆಗಳತ್ತ ಎಳೆಯ ವಯಸ್ಸಿನಲ್ಲೇ ತಾನು ಆಕರ್ಷಿತನಾಗಿದ್ದೇನೆಂದು ಹೇಳಿಕೊಂಡಿದ್ದಾನೆ. ನಮ್ಮ ಮತ

ಗ್ರಂಥಗಳಾದ ವೇದ, ಉಪನಿಷತ್ತುಗಳು, ಭಗವದ್ಗೀತೆ, ರಾಮಾಯಣ, ಮಹಾಭಾರತ, ತಿರುಕ್ಕುರುಳ್ ಇತ್ಯಾದಿಗಳನ್ನು ಅಭ್ಯಾಸ ಮಾಡಿದ್ದ. ನಮ್ಮ ದಾರ್ಶನಿಕರಾದ ಶಂಕರಾಚಾರ್ಯ, ರಾಜಾರಾಮಮೋಹನರಾಯ್, ದಯಾನಂದ ಸರಸ್ವತಿ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ರವೀಂದ್ರನಾಥ ಟಾಗೋರ್, ಮಹಾತ್ಮಾಗಾಂಧಿ, ರಾಧಾಕೃಷ್ಣನ್ ಮುಂತಾದವರ ವಿಚಾರಗಳ ದೀರ್ಘ ಅಭ್ಯಾಸಮಾಡಿದ್ದ. ಇವೆಲ್ಲರ ಪರಿಣಾಮದಿಂದಲೇ ''ಭಾರತೀಯ (ಧರ್ಮ) ಚಿಂತನೆ ಹಾಗೂ ಅದರ ವಿಕಸನ'' ("THE INDIAN THOUGHT AND ITS DEVELOPMENT" -1935) ಎಂಬ ಗ್ರಂಥ ಲ್ಯಾಂಬರೀನೆಯ ಕಾಡಿನಲ್ಲಿ ಡಾ|| ಶ್ವೈಯಿಟ್ಸರ್‌ನಿಂದ ರಚನೆಯಾಯಿತು. ಬೌದ್ಧ ಮತ್ತು ಜೈನ ಧರ್ಮ ಗ್ರಂಥಗಳಲ್ಲಿ ಪ್ರತಿಪಾದಿಸಿದ ಪ್ರಾಣಿದಯೆ, ಅಹಿಂಸಾ ತತ್ವಗಳು ಅವನ ಆಲೋಚನೆಗೆ ತೀರಾ ಹತ್ತಿರವಾಗಿದ್ದವು. ಅವನು ಪ್ರತಿಪಾದಿಸುತ್ತಿದ್ದ ಜೀವೋಪಾಸನ ತತ್ವಗಳಿಗೆ ಇವು ಸ್ಫೂರ್ತಿ ನೀಡಿರಬಹುದೆಂಬುದರಲ್ಲಿ ಸಂದೇಹವಿಲ್ಲ. ಆದರೆ ನಾವು ಸಾಮಾನ್ಯವಾಗಿ ವೈಯಕ್ತಿಕ ಮುಕ್ತಿ, ಮೋಕ್ಷ ಮತ್ತು ನಿರ್ವಾಣ ಹೊಂದಲು ಹಂಬಲಿಸುವ ಭಾವನೆಗಳು ಅವನಿಗೆ ನಕಾರಾತ್ಮಕ ದೃಷ್ಟಿಕೋನಗಳೆಂದು ಕಾಣಿಸಿವೆ. ಇತರ ಧರ್ಮಗಳ ಪ್ರಾಪಂಚಿಕ ದೃಷ್ಟಿಕೋನಗಳೊಡನೆ ತುಲನೆಮಾಡಿದಾಗ ನಮ್ಮ ದೃಷ್ಟಿಕೋನ ಅವನ ಮೆಚ್ಚಿಗೆ ಗಳಿಸಿದಂತಿಲ್ಲ.

ಡಾ|| ಶ್ವೈಯಿಟ್ಸರ್‌ನ ದೈಹಿಕ ಮತ್ತು ಬೌದ್ಧಿಕ ಚಟುವಟಿಕೆಗಳು ಚಕಿತಗೊಳಿಸುವಂಥವು. ಅವನು ಪ್ರತಿದಿನ ತೊಡಗಿಸಿಕೊಳ್ಳುತ್ತಿದ್ದ ದೈಹಿಕ ಕಾಯಕವೇ ಬೌದ್ಧಿಕ ಚಟುವಟಿಕೆಗಳಿಗೆ ಸ್ಫೂರ್ತಿ ನೀಡುತ್ತಿತ್ತೆಂಬುದೆ ಅವನ ಅನಿಸಿಕೆ. ದೈಹಿಕ ಸಾಧನೆಗಳಿಲ್ಲದ ಬೌದ್ಧಿಕ ಚಟುವಟಿಕೆಗಳು ನಿರರ್ಥಕವೆಂಬುದು ಅವನ ನಂಬಿಕೆ. ದಿನವೆಲ್ಲಾ ಶ್ರಮಪಟ್ಟು ಕೆಲಸ ಮಾಡಿರದಿದ್ದರೆ ರಾತ್ರಿ ಬೌದ್ಧಿಕ-ವ್ಯಾಸಂಗ ಅಥವಾ ಗ್ರಂಥರಚನೆಗಳನ್ನು ಮಾಡಲು ತನಗೆ ಸಾಧ್ಯವೇ ಆಗುತ್ತಿರಲಿಲ್ಲವೆಂದು ಒಂದು ಸಾರಿ ಹೇಳಿಕೊಂಡಿದ್ದಾನೆ. ದಿನ ಆರಂಭವಾಗುತ್ತಿರುವಾಗಲೇ ಬಿಡುವಿಲ್ಲದ ಕೆಲಸ ಕಾರ್ಯಕ್ರಮಗಳ ಸೂಚನೆಗಳಿದ್ದಾಗ ಆ ದಿನ ಹೆಚ್ಚು ಸ್ಫೂರ್ತಿಯಿಂದ ಕೆಲಸ ಮಾಡಲು ಸಾಧ್ಯವಾಗುತ್ತಿತ್ತಂತೆ. ಒತ್ತಡಗಳು ಹೆಚ್ಚಾದಾಗ ಮಾನವ-ಸಹಜ ಗೊಣಗು ಇರುತ್ತಿತ್ತಾದರೂ, ಅದು ಮಗುವಿನ ಏಳಿಗೆಗಾಗಿ ಕಷ್ಟಪಡುವ ತಾಯಿಯ ಗೊಣಗಿನಂತಿತ್ತು.

ಲ್ಯಾಂಬರೀನೆಯ ಆಸ್ಪತ್ರೆಯ ಕೆಲಸ ನಾಗರಿಕ-ಜಗತ್ತಿನ ಆಸ್ಪತ್ರೆಗಳಲ್ಲಿ ನಡೆಯುವ ನೇರ, ಸರಳ ವೈದ್ಯಕೀಯ ಚಿಕಿತ್ಸೆಗಳಾಗಿರಲು ಸಾಧ್ಯವಿಲ್ಲ. ಅಲ್ಲಿನ ಆದಿವಾಸಿಗಳು ಮೂಢನಂಬಿಕೆ, ಅಂಧಶ್ರದ್ಧೆಗಳ ದಾಸರಾದವರು. ಮಂತ್ರ-ಮಾಟ, ದೆವ್ವ-ಭೂತ

ಗಳನ್ನು ಸಂತೃಪ್ತಿಪಡಿಸುವ ವಿಧಾನಗಳು ಅವರ ಚಿಕಿತ್ಸೆಗಳ ಅವಿಭಾಜ್ಯ ಅಂಗಗಳಾಗಿದ್ದವು. ಒಬ್ಬ ರೋಗಿಯ ಕಾಯಿಲೆ ಅವನಿಗಾಗದವನೊಬ್ಬ ಮಾಡಿಸಿದ ಮಾಟದಿಂದ ಎಂದು ಮಾಂತ್ರಿಕನೊಬ್ಬ ಹೇಳಿದರೆ ಮುಗಿಯಿತು. ಅಂಥವನು ಸತ್ತರಂತೂ ಗುಂಪು-ಘರ್ಷಣೆಗಳಾಗಿ ಇನ್ನಷ್ಟು ಜನ ಸಾವು-ನೋವಿಗೀಡಾಗು ತ್ತಿದ್ದುದು ಅಲ್ಲಿ ಸರ್ವೇ ಸಾಮಾನ್ಯ. ಆಸ್ಪತ್ರೆಯಲ್ಲಿ ಸತ್ತವರ ಸಾವಿಗೆ ಅವನ ಸಂಬಂಧಿಕರ ಮನಸ್ಸಿಗೆ ನಾಟುವಂತೆ ವಿವರಿಸಬೇಕಾಗುತ್ತಿತ್ತು. ಆದರೂ ತಮ್ಮ ತಾಂಡ ಗಳಿಗೆ ಹಿಂದಿರುಗಿದ ನಂತರ ಮತ್ತೆ ಹೊಡೆದಾಟಗಳಾಗುತ್ತಿದ್ದವು.

**ನ್ಯಾಯಾಧೀಶ-ನೀತಿಬೋಧಕ**

ಆಸ್ಪತ್ರೆಗಳಲ್ಲಿ ಕಾಯಿಲೆಗಳನ್ನು ಗುಣಪಡಿಸುವುದೇ ಡಾ॥ ಶ್ವೆಯಿಟ್ಸರನ ಪ್ರಮುಖ ಕರ್ತವ್ಯವಾಗಿದ್ದರೂ ಕೆಲ ಸಾರಿ ನೀಗ್ರೋಗಳಲ್ಲಿ ಭುಗಿಲೆದ್ದು ಹತ್ತಿಕೊಳ್ಳುತ್ತಿದ್ದ ವ್ಯಾಜ್ಯಗಳಿಗೆ ನ್ಯಾಯಾಧೀಶನೂ ಆಗುತ್ತಿದ್ದ. ಯಾವುದೇ ನ್ಯಾಯ, ನೀತಿ, ಧರ್ಮಗಳ ಗಂಧ ಗಾಳಿಯಿಲ್ಲದವರ ಜಗಳವನ್ನು ಪರಿಹರಿಸುವುದರಲ್ಲಿ ಅವನು ಬಳಸುತ್ತಿದ್ದ ಉಪಾಯಗಳು ಇಲ್ಲಿ ಉಲ್ಲೇಖಾರ್ಹ:

ಒಂದು ಬೆಳದಿಂಗಳ ರಾತ್ರಿ ನದಿಯಲ್ಲಿ ನಿಲ್ಲಿಸಿದ ಒಬ್ಬನ ದೋಣಿಯನ್ನು, ಅನುಮತಿ ಇಲ್ಲದೆ ಇನ್ನೊಬ್ಬನು ಮೀನು ಹಿಡಿಯಲು ತೆಗೆದುಕೊಂಡು ಹೋದ. ಮರುದಿನ ಮುಂಜಾನೆ ನದಿಯಲ್ಲಿ ದೋಣಿ ನಾಪತ್ತೆಯಾದುದನ್ನು ಗಮನಿಸಿದ ಅದರ ಮಾಲೀಕ, ಅಲ್ಲೇ ಹೊಂಚುಹಾಕುತ್ತಾ ಕುಳಿತ. ರಾತ್ರಿ ದೋಣಿ ತೆಗೆದುಕೊಂಡು ಹೋದವನು ದೋಣಿ ತುಂಬಾ ಮೀನು ತುಂಬಿಕೊಂಡು ಅಷ್ಟರಲ್ಲೇ ಪ್ರತ್ಯಕ್ಷ. ಸರಿ, ಅವರಿಬ್ಬರಿಗೂ ಜಟಾಪಟಿ ಶುರುವಾಗುತ್ತದೆ. ಅಲ್ಲಿ ನೆರೆದ ಜನ ಅವರಿಬ್ಬರನ್ನೂ ಬಿಡಿಸಿ ಡಾ॥ ಶ್ವೆಯಿಟ್ಸರ್‌ನ ಹತ್ತಿರ ನ್ಯಾಯನಿರ್ಣಯಕ್ಕಾಗಿ ಕರೆತರುತ್ತಾರೆ.

ಅವರಿಬ್ಬರ ವಾದವಿವಾದಗಳನ್ನು ಶ್ವೆಯಿಟ್ಸರ್ ಆಲಿಸಿದ. ದೋಣಿಯ ಮಾಲೀಕನಿಗೆ ಮೊದಲು ಹೇಳಿದ: ''ನಿನ್ನ ಅಪ್ಪಣೆ ಪಡೆಯದೇ ದೋಣಿಯನ್ನು ತೆಗೆದುಕೊಂಡು ಹೋಗಿರುವುದು ತಪ್ಪು. ಆದರೆ, ನೀನು ದೋಣಿಗೆ ಭದ್ರವಾಗಿ ಬೀಗ ಹಾಕಿರಲಿಲ್ಲ. ಒಳ್ಳೆಯ ಬೆಳದಿಂಗಳಿದ್ದಾಗ ಮೀನು ಹಿಡಿಯುವುದನ್ನು ಬಿಟ್ಟು ಮನೆಯಲ್ಲಿ ಸೋಮಾರಿಯಾಗಿ ಮಲಗಿದ್ದು ಸಹಾ ನಿನ್ನ ತಪ್ಪು.'' ಅದೇ ರೀತಿ ದೋಣಿಯನ್ನು ಕದ್ದುಕೊಂಡು ಹೋದವನಿಗೆ ''ದೋಣಿಯ ಮಾಲೀಕನ ಅಪ್ಪಣೆ ಪಡೆಯದೆ ದೋಣಿಯನ್ನು ತೆಗೆದುಕೊಂಡು ಹೋಗಿದ್ದು ನಿನ್ನ ತಪ್ಪು, ಆದರೆ ಬೆಳದಿಂಗಳಿದ್ದಾಗ ಸೋಮಾರಿಯಾಗಿರದೆ ಮೀನು ಹಿಡಿದು ಒಳ್ಳೆಯ ಕೆಲಸ ಮಾಡಿದ್ದೀಯೆ.''

ವ್ಯಾಜ್ಯದ ತೀರ್ಮಾನ:- ''ದೋಣಿಯಲ್ಲಿರುವ ಮೀನುಗಳನ್ನು ಮೂರು ಭಾಗ

ಮಾಡಬೇಕು. ಒಂದು ಭಾಗ ದೋಣಿಯ ಮಾಲಿಕನಿಗೆ, ಇನ್ನೊಂದು ಭಾಗ ಮೀನು ಹಿಡಿದು ತಂದವನಿಗೆ, ಉಳಿದದ್ದು ಆಸ್ಪತ್ರೆಯ ರೋಗಿಗಳ ಉಪಯೋಗಕ್ಕೆ. ಏಕೆಂದರೆ ಬೆಲೆಬಾಳುವ ನನ್ನ ವೇಳೆಯನ್ನೂ ನೀವಿಬ್ಬರೂ ಹಾಳುಮಾಡಿದ್ದೀರಿ.'' ನ್ಯಾಯ ಧರ್ಮಗಳ ಲವಲೇಶವನ್ನು ತಿಳಿಯದ ಅನಾಗರಿಕ ಸೋಮಾರಿಗಳಿಗೆ ಇದಕ್ಕಿಂತ ಸಮಂಜಸವಾದ ತೀರ್ಮಾನ ಬೇರಿರಲಾರದು.

ಭಾನುವಾರದ ದಿನಗಳಲ್ಲಿ ಅತ್ಯಂತ ತುರ್ತು ಕಾಯಿಲೆಯವರಿಗೆ ಹೆಚ್ಚಿಗೆ ಗಮನ ಕೊಡಲಾಗುತ್ತಿತ್ತು. ಬೆಳಿಗ್ಗೆ ಒಂಭತ್ತು ಗಂಟೆಗೆ ಆಸ್ಪತ್ರೆಯ ಆವರಣದಲ್ಲಿ ಪ್ರಾರ್ಥನಾ-ಸಭೆ ನಡೆಯುತ್ತದೆ. ಗ್ರಾಮಾಫೋನ್ ಅಥವಾ ಹಾರ್ಮೋನಿಯಂ ಜತೆ ಡಾ॥ ಶ್ವೆಯಿಟ್ಸರ್ ಕೆಲವು ಕೀರ್ತನೆಗಳನ್ನು ಹಾಡುತ್ತಿದ್ದುದೂ ಉಂಟು. ಅಂತಿಮವಾಗಿ ಶ್ವೆಯಿಟ್ಸರ್‌ನಿಂದ ಧಾರ್ಮಿಕ ವಿಷಯಧ ಬಗೆಗೆ ಪ್ರವಚನ. ಆದಿವಾಸಿಗಳ ಭಾಷೆ ಗಳಲ್ಲಿ ಅದನ್ನು ಭಾಷಾಂತರ ಮಾಡಿ ತಿಳಿಸುವ ಏರ್ಪಾಡೂ ಇರುತ್ತಿತ್ತು.

ಇಂಥ ಪುರುಸೊತ್ತಿನ ದಿನಗಳಲ್ಲಿ ನೀಗ್ರೋಗಳನ್ನು ಒಂದೆಡೆ ಸೇರಿಸಿ ಬೈಬಲ್‌ನ ನೀತಿ ಕಥೆಗಳನ್ನು ಹೇಳುವುದು ಡಾ॥ ಶ್ವೆಯಿಟ್ಸರ್‌ನ ಹವ್ಯಾಸ. ಅದಕ್ಕೆ ಚರ್ಚ್ ಅಥವಾ ಯಾವುದೇ ಕಟ್ಟಡ ಬೇಕಂತಿಲ್ಲ. ಪೊದೆಗಳ ನಡುವೆ ತೆರಪಾದ ಜಾಗವಾದರೂ ಆಗಬಹುದು. ಸೇರಿದವರು ಕಾಡುಹರಟೆ ಹೊಡೆಯುತ್ತಾ ಕುಳಿತಿರುತ್ತಾರೆ; ತಲೆ ಬಾಚಿಕೊಳ್ಳುತ್ತಾರೆ. ಕೆಲವರು ಅಡಿಗೆ ಕೆಲಸದಲ್ಲಿರುತ್ತಾರೆ. ಸಾಕು-ಪ್ರಾಣಿಗಳು ಅಡ್ಡಾಡುತ್ತಿರುತ್ತವೆ. ಅವರಿಗೆ ನೀತಿ-ಪಾಠಗಳನ್ನು ಹೇಳಲು ಅದೇ ಸುಸಮಯ! ಬೈಬಲ್‌ನ ನೀತಿ-ಕತೆಗಳನ್ನು, ಆಫ್ರಿಕಾದ ಸಂದರ್ಭ ಮತ್ತು ಅವರ ಬುದ್ಧಿಮತ್ತೆಯ ಮಟ್ಟಕ್ಕನುಸಾರ ಮಾರ್ಪಾಟು ಮಾಡುತ್ತಾನೆ. ಅವರೆಲ್ಲರ ದಿನನಿತ್ಯದ ಕಸುಬಿನ ಸಂದರ್ಭಗಳಲ್ಲಿ ಜರುಗುವ ಘಟನೆಗಳ ಉದಾಹರಣೆಗಳ ಮೂಲಕ ಅವರಿಗೆ ಮನದಟ್ಟಾಗುವಂತೆ ಹೇಳುವುದು ಶ್ವೆಯಿಟ್ಸರ್‌ಗೆ ಕರತಲಾಮಲಕವಾಗಿ ಹೋಗಿತ್ತು. ಅಂಥ ನೀತಿಕತೆಯೊಂದರ ನಿದರ್ಶನ.

ತಪ್ಪು ಮಾಡಿದ ಸಹೋದರನನ್ನು ಎಷ್ಟು ಸಾರಿ ಕ್ಷಮಿಸಬೇಕೆಂಬುದರ ಬಗೆಗೆ ಸಂತ ಪೀಟರ್ ಏಸುಕ್ರಿಸ್ತನನ್ನು ಕೇಳಿದ ಸಂದರ್ಭ. ಏಳು ಸಾರಿ ಕ್ಷಮಿಸಿದರೆ ಸಾಲದೇ ಎಂಬುದನ್ನು ಶ್ವೆಯಿಟ್ಸರ್ ವಿವರಿಸುತ್ತಿದ್ದ ರೀತಿ ಅತ್ಯಂತ ಸ್ವಾರಸ್ಯಕರ.

''ಆ ದಿನ ಬೆಳಿಗ್ಗೆ ನೀನು ಮನೆಯಿಂದ ಹೊರಬರುತ್ತಿದ್ದಂತೆಯೇ ದುಷ್ಟಬುದ್ಧಿ ಯವನೊಬ್ಬ ವಿನಾಕಾರಣ ನಿನ್ನ ಮೈಮೇಲೆ ಎರಗಿ ಹೊಡೆಯುತ್ತಾನೆ. ನಿನಗೂ ಅವನನ್ನು ಥಳಿಸುವ ಮನಸ್ಸಾಗುತ್ತದೆ. ಆದರೆ ತಪ್ಪು ಮಾಡಿದವನನ್ನು ಕ್ಷಮಿಸಬೇಕೆಂಬ ಏಸುವಿನ ವಾಣಿ ನಿನ್ನ ಅಂತರಾತ್ಮದಲ್ಲಿ ಮಿಡಿಯುತ್ತದೆ. ಅವನಿಗೇನೂ ಮಾಡದೇ ನಿನ್ನ ಕೆಲಸಕ್ಕೆ ಹೋಗುತ್ತೀ.

''ನೆರೆಯಮನೆಯವನ ಆಡು ನಿನ್ನ ಬಾಳೆ-ತೋಟಕ್ಕೆ ನುಗ್ಗಿ ಆ ದಿನ ಉಪಹಾರಕ್ಕೆಂದು ನೀನು ಕಾದಿರಿಸಿಕೊಂಡಿದ್ದ ಬಾಳೆ-ಗೊನೆಯನ್ನು ತಿಂದು ಹಾಕುತ್ತದೆ. ಆಡಿನ ಮಾಲೀಕನೊಡನೆ ಜಗಳವಾಡಿ ಒಂದು ಗೊನೆ ಬಾಳೆಹಣ್ಣನ್ನು ವಸೂಲು ಮಾಡಬೇಕೆಂಬ ರೋಷ ನಿನ್ನಲ್ಲಿ ಉಕ್ಕಿಬರುತ್ತದೆ. ಆದರೆ ನಿನ್ನ ತೋಟದಲ್ಲೇ ಇನ್ನೂ ಕೆಲವು ಬಾಳೆ-ಗೊನೆಗಳು ಹಣ್ಣಾಗಿ ಜೋತಾಡುತ್ತಿರುವುದು ನಿನ್ನ ಗಮನಕ್ಕೆ ಬರುತ್ತದೆ. ಭಗವಂತನ ಕೃಪೆಯಿಂದಲೇ ಅವು ನಿನಗೆ ಲಭ್ಯವಾಗಿವೆಯೆಂಬ ಭಾವನೆ ಮೂಡಿ ನೆರೆಮನೆಯವನೊಡನೆ ಜಗಳಕಾಯುವುದಿಲ್ಲ.

''ಹಿಂದಿನ ದಿನ ನಿನ್ನಿಂದ ಹತ್ತು ಗೊನೆ ಬಾಳೆಕಾಯಿಗಳನ್ನು ಸಂತೆಯಲ್ಲಿ ಮಾರಿಕೊಂಡು ಬರಲು ಹೋದವನು ಕೇವಲ ಒಂಭತ್ತು ಗೊನೆಗಳ ದುಡ್ಡನ್ನು ಮಾತ್ರ ಕೊಡುತ್ತಾನೆ. ಆ ಬಗೆಗೆ ಕೇಳಿದಾಗ ನೀನು ಕೊಟ್ಟದ್ದೇ ಒಂಭತ್ತು ಗೊನೆಗಳೆಂದು ವಾದಿಸುತ್ತಾನೆ. ಅವನೊಬ್ಬ ಸುಳ್ಳುಗಾರನೆಂದು ಅವನೊಡನೆ ಜಗಳವಾಡಲು ನೀನು ತಯಾರಾದೆ. ಆದರೆ ತತ್‌ಕ್ಷಣ ನಿನಗೆ ಅರಿವಾಗುತ್ತದೆ: ಪ್ರತಿದಿನ ದೇವರು ಅದೆಷ್ಟು ಜನರ ಸುಳ್ಳುಗಳನ್ನು ಮನ್ನಿಸುತ್ತಿರುತ್ತಾನೆಂಬುದು-ಮರು ಮಾತಾಡದೇ ಮನೆಗೆ ಹಿಂದಿರುಗುತ್ತೀ.

''ಅಡಿಗೆ ಮಾಡಲು ಕಟ್ಟಿಗೆಯನ್ನು ತರಲು ನೀನು ಅವುಗಳನ್ನು ಕೂಡಿಟ್ಟ ಜಾಗಕ್ಕೆ ಹೋದಾಗ, ಅವುಗಳಲ್ಲಿ ಬಹುಪಾಲನ್ನು ಯಾರೋ ಕದ್ದುಕೊಂಡು ಹೋಗಿರುವುದು ಕಂಡುಬರುತ್ತದೆ. ಅವರನ್ನು ಕೂಡಲೇ ಪತ್ತೆ ಹಚ್ಚಿ ಶಿಕ್ಷಿಸಬೇಕೆಂಬ ಮನಸ್ಸಾದರೂ, ಹೃದಯದಲ್ಲಿ ಮನೆಮಾಡಿದ ಕ್ಷಮಾ ಗುಣ ನಿನ್ನನ್ನು ತಡೆಯುತ್ತದೆ. ಉಳಿದ ಕಟ್ಟಿಗೆಯನ್ನೇ ತಂದು ಆ ದಿನದ ಅಡಿಗೆಮಾಡಿಕೊಳ್ಳುವೆ.

''ಮಧ್ಯಾಹ್ನ ಕೆಲಸಕ್ಕೆ ಹೋಗುವಾಗ ನಿನ್ನ ಹೊಸ ಕುಡುಗೋಲು ಇಟ್ಟಿದ್ದ ಜಾಗದಲ್ಲಿ ರುವುದಿಲ್ಲ. ಅದನ್ನು ಕದ್ದುಕೊಂಡು ಹೋಗಿ ಹಳೇ ಕುಡುಗೋಲೊಂದನ್ನು ಯಾರೋ ಇಟ್ಟಿರುತ್ತಾರೆ. ಹಾಗೆ ಮಾಡಿದವನ ಬಗೆಗೆ ನಿನಗೆ ಗುಮಾನಿಯೂ ಇರುತ್ತದೆ. ಆದರೆ ಆ ದಿನ ಮಾಡಿರುವ ಒಳ್ಳೆಯ ಕಾರ್ಯಗಳಿಂದ ಉಲ್ಲಸಿತನಾಗಿದ್ದ ನೀನು ಅವನನ್ನು ಪತ್ತೆಹಚ್ಚುವ ಗೋಜಿಗೆ ಹೋಗದೆ ಮನಸ್ಸಿನಲ್ಲೇ ಸಂತೋಷಪಟ್ಟುಕೊಂಡು ಹಳೇ ಕುಡುಗೋಲನ್ನೇ ತೆಗೆದುಕೊಂಡು ಕೆಲಸಮಾಡುವೆ.

''ಆ ದಿನ ಸಾಯಂಕಾಲ ಹೊಳೆಯಲ್ಲಿ ಮೀನು ಹಿಡಿಯುವುದಕ್ಕೆ ಏರ್ಪಾಡು ಮಾಡಿಕೊಂಡು, ನಿನ್ನ ಲ್ಯಾಟೀನನ್ನು ಹುಡುಕುವೆ. ಅದನ್ನೂ ಯಾರೋ ಹಾರಿಸಿ ಕೊಂಡು ಹೋಗಿರುತ್ತಾರೆ. ಹೊಳೆಯ ಹತ್ತಿರ ಕಾದಿದ್ದು ಅವನು ಬಂದ ಕೂಡಲೇ ಹಿಡಿದು ಶಿಕ್ಷಿಸಬೇಕೆನಿಸುತ್ತದೆ. ಆದರೆ ಏಸುವಿನ ಕ್ಷಮಾಗುಣ ನಿನ್ನ ನೆನಪಿಗೆ ಬಂದು ಮನಃಪರಿವರ್ತನೆಯಾಗುತ್ತದೆ. ಪಕ್ಕದ ಗುಡಿಸಲಿನವನ ಲ್ಯಾಟೀನು ತೆಗೆದುಕೊಂಡು

ನದಿಯ ಹತ್ತಿರ ಬರುತ್ತೀ.

''ನದಿಗೆ ಬಂದಾಗ ನಿನ್ನ ದೋಣಿಯನ್ನು ಯಾವನೋ ಕದ್ದುಕೊಂಡು ಹೋಗಿರುತ್ತಾನೆ. ನಿನ್ನ ಮೈಯೆಲ್ಲಾ ಬಿಸಿ ಏರಿ, ಕೋಪ ಇಮ್ಮಡಿಯಾಗುತ್ತದೆ. ಮರವೊಂದರ ಹಿಂದೆ ಅವಿತು ಕುಳಿತು, ಅವನು ಬಂದೊಡನೆ ಹಿಡಿದು ಪೋಲಿಸರಿಗೆ ಒಪ್ಪಿಸಬೇಕೆಂದು ಕುಳಿತಿರುವಾಗಲೇ ನಿನ್ನ ಮನಸ್ಸು ಪರಿವರ್ತನೆಯಾಗುತ್ತದೆ. ದೇವರು ಪ್ರತಿದಿನ ನಮ್ಮೆಲ್ಲರ ಸಾವಿರಾರು ತಪ್ಪುಗಳನ್ನು ಕ್ಷಮಿಸುವಾಗ ನನ್ನ ಸಹೋದ್ಯೋಗಿಯೊಬ್ಬನ ತಪ್ಪನ್ನು ನಾನೇಕೆ ಕ್ಷಮಿಸಬಾರದು ? ಎಂದು ಮನೆಗೆ ಹಿಂದಿರುಗುವ ಮನಸ್ಸು ಮಾಡುತ್ತೀಯಾ. ಅಷ್ಟರಲ್ಲೇ ದೋಣಿಯ ಕಳ್ಳ ಅದರ ತುಂಬಾ ಮೀನು ತುಂಬಿಕೊಂಡು ನಿನ್ನ ಎದುರಿಗೆ ಬರುತ್ತಾನೆ. ನೀನು ಕೋಪಗೊಳ್ಳುವಿಯೋ ಎಂದು ಹೆದರುತ್ತಾನೆ. ನೀನು ಜಗಳಕ್ಕಿಳಿಯದುದನ್ನು ನೋಡಿ ಅವನಿಗೇ ಆಶ್ಚರ್ಯವಾಗುತ್ತದೆ. ಅವನು ದೋಣಿಯನ್ನು ಖಾಲಿಮಾಡಿದ ಮೇಲೆ ನೀನು ಅದನ್ನು ತೆಗೆದುಕೊಂಡು ಹೊರಡುವೆ.

ಆ ದಿನವೆಲ್ಲಾ ಮಾಡಿದ ಒಳ್ಳೆಯ ಕಾರ್ಯಗಳಿಂದ ಹರ್ಷಿತನಾಗಿ ನಿನ್ನ ಗುಡಿಸಿಲಿಗೆ ಹಿಂದಿರುಗುವೆ. ಆ ದಿನವೇ ಭಗವಾನ್ ಏಸು ನಿನ್ನನ್ನು ಹರಸಲು ಬಂದು ನಿಂತಂತೆ ಭಾಸವಾಗುತ್ತದೆ. ಅವನೆದುರು ನೀನು ದೈನ್ಯಭಾವದಿಂದ ಕೈಮುಗಿದು ನಿಂತಿರುವೆ, ಎಂದೆನಿಸುತ್ತದೆ. ಭಗವಾನನು ಸಂತ ಪೀಟರ್‌ಗೆ ಹೇಳಿದಂತೆ ನೀನು ಏಳು ಸಾರಿ ಕ್ಷಮಿಸಿದರೆ ಸಾಲದು, ಮತ್ತೂ ಏಳು ಸಾರಿ, ಮತ್ತೆ, ಮತ್ತೆ ಏಳೇಳು ಸಾರಿ ಕ್ಷಮಿಸುತ್ತಲೇ ಇರಬೇಕೆಂದು ಬೋಧಿಸಿದ ಅನುಭವ ಉಂಟಾಗುತ್ತದೆ. ನಿನ್ನೆಲ್ಲಾ ತಪ್ಪುಗಳನ್ನು ದೇವರು ಕ್ಷಮಿಸಿದ್ದಾನೆಂಬ ಅರಿವಾಗುವವರೆಗೂ ನೀನು ಕ್ಷಮಿಸುತ್ತಲೇ ಇರಬೇಕು, ಎಂದು ಕೇಳಿದಂತಾಗುತ್ತದೆ, ನಿನ್ನ ಮನಸ್ಸಿಗೆ.''

ಡಾ॥ ಶ್ವೈಯಿಟ್ಸರ್ ಈ ರೀತಿ ಹೆಣೆದು ಹೇಳುತ್ತಿದ್ದ ನೀತಿ-ಕಥೆಗಳು ಮುಗ್ಧ ಆಫ್ರಿಕನ್ನರ ಮನಸ್ಸನ್ನು ಸೆರೆಹಿಡಿದಿದ್ದವು. ಎಲ್ಲಕ್ಕಿಂತ ಮಿಗಿಲಾಗಿ ಅವನು ಬೋಧಿಸುತ್ತಿದ್ದ ನ್ಯಾಯ-ನೀತಿ-ಮಾರ್ಗಗಳಲ್ಲೇ ನಡೆದುಕೊಂಡು ಅವರೆಲ್ಲರಿಗೂ ಅನುಕರಣೀಯನಾಗಿರುತ್ತಿದ್ದ. ಆಫ್ರಿಕಾದ ನೀಗ್ರೋಗಳನ್ನು ಬರೇ ಕ್ರೈಸ್ತ-ಮತಕ್ಕೆ ಪರಿವರ್ತನೆ ಮಾಡುವ ಉದ್ದೇಶ ಅವನದಾಗಿರಲಿಲ್ಲ. ನಾಗರಿಕ ಸಂಸ್ಕೃತಿ ಮತ್ತು ಶಿಷ್ಟ ನಡೆವಳಿಕೆಗಳನ್ನರಿಯದ ಮುಗ್ಧ-ಜನರನ್ನು ಒಳ್ಳೆಯ ನೀತಿವಂತ ಪೌರರನ್ನಾಗಿಸುವುದು ಅವನ ಧ್ಯೇಯ. ಮೊದಲಿನಿಂದಲೂ ವೈಚಾರಿಕತೆಯನ್ನು ಮೈಗೂಡಿಸಿಕೊಂಡಿದ್ದ ಶ್ವೈಯಿಟ್ಸರ್, ಭಗವಾನ್ ಏಸುಕ್ರಿಸ್ತನ ಬೋಧನೆಗಳ ನಿಜವಾದ ಅರ್ಥ ಜನರಿಗುಂಟಾಗಿ ಅವರು ಅದರಂತೆ ನಡೆಯಲು ಸಾಧ್ಯವಾಗಬೇಕೆಂದು ಶ್ರಮಿಸುತ್ತಿದ್ದವ, ಅದರಿಂದ ಮತೀಯ ಕಟ್ಟುಪಾಡುಗಳಿಗೆ ಅಂಟಿಕೊಳ್ಳದೇ ಅವನನ್ನು

ನಂಬಿದ್ದ ನೀಗ್ರೋಗಳ ಸಮಯ, ಅನುಕೂಲಗಳಿಗನುಸಾರ ಎಲ್ಲೆಂದರಲ್ಲಿ ತನ್ನ ಪ್ರವಚನಗಳನ್ನು ಮಾಡುತ್ತಿದ್ದ.

ಇವೆಲ್ಲದರ ಜತೆಗೆ ಅಲ್ಲಿದ್ದ ಆನಂದಮಯ ವಾತಾವರಣ ಮರೆಯುವಂತಹದಲ್ಲ. ಅವನ ಮಾತು-ಕತೆಗಳಲ್ಲಿ ಲಘುಹಾಸ್ಯ ತುಂಬಿರುತ್ತಿತ್ತು. ಆಸ್ಪತ್ರೆಯ ಕೆಲಸದ ಸಮಯದಲ್ಲಿ ಬಿಗುವಿನ ವಾತಾವರಣ ಉಂಟಾಗದಂತೆ ಸದಾ ಎಚ್ಚರ ವಹಿಸುತ್ತಿದ್ದ.

**ಕರುಣಾಮಯಿ**

ಲ್ಯಾಂಬರೀನೆಯ ಕಾಡಿನ ಆಸ್ಪತ್ರೆಯ ಇನ್ನೊಂದು ಮುಖ, ಅಲ್ಲಿನ ಕಾರುಣ್ಯಮಯ ವಾತಾವರಣ, ಕುರಿ, ಕೋಳಿ, ಬಾತು, ಆಡು, ಜಿಂಕೆ, ಬೆಕ್ಕು, ಪೆಲಿಕಾನ್‌ಪಕ್ಷಿ, ಕೋತಿಗಳನೇಕವನ್ನು ಸಾಕುಪ್ರಾಣಿಗಳಾಗಿ ಅಲ್ಲಿ ಸಲಹುತ್ತಿದ್ದರು. ಕೆಲ ಸಾರಿ ಗಾಯಗೊಂಡ ಕಾಡು ಪ್ರಾಣಿಗಳಿಗೂ ಅಲ್ಲಿ ಚಿಕಿತ್ಸೆ ಮಾಡಲಾಗುತ್ತಿತ್ತು. ಹಾಲನ್ನೇ ಕಾಣದ ಹಸುಳೆಗಳಿಗೆ ಅದೇ ಮೊದಲ ಬಾರಿಗೆ ಆಡಿನ ಹಾಲು ದೊರಕುವಂತಾಗಿತ್ತು. ಕುರಿ ಕೋಳಿ ಇತ್ಯಾದಿಗಳನ್ನು ಆಹಾರವಾಗಿ ಉಪಯೋಗಿಸುವುದಕ್ಕಾಗಿ ಸಾಕಿರುತ್ತಿದ್ದರೂ, ಅವು ಬದುಕಿರುವಾಗ ಹಿಂಸೆಗೊಳಗಾಗದಂತೆ ಎಚ್ಚರ ವಹಿಸುತ್ತಿದ್ದರು. ಸಾಕು-ಪ್ರಾಣಿಗಳ ಓಡಾಟಕ್ಕೆ ಆಸ್ಪತ್ರೆಯಲ್ಲಿ ನಿರ್ಬಂಧವೇ ಇರಲಿಲ್ಲ. ಆಸ್ಪತ್ರೆಗೆ ಆಗಾಗ್ಗೆ ಭೇಟಿ ನೀಡುತ್ತಿದ್ದ ಪಾಶ್ಚಿಮಾತ್ಯರನೇಕರು ವಾರ್ಡುಗಳಲ್ಲಿ ಪ್ರಾಣಿಗಳು ಓಡಾಡಿಕೊಂಡಿರುವುದನ್ನು ಟೀಕಿಸುತ್ತಿದ್ದರು. ಇಲ್ಲಿಯ ಆಸ್ಪತ್ರೆಗೆ ಬರುತ್ತಿದ್ದ ಆಫ್ರಿಕನ್ನರಿಗೆ ಅವರು ನಿಜ-ಜೀವನದಲ್ಲಿ ವಾಸಿಸುವ ವಾತಾವರಣ ಇದ್ದಲ್ಲಿ ಮಾತ್ರ ಸ್ವಲ್ಪಕಾಲ ತಂಗುತ್ತಿದ್ದರು. ಸಾಕು-ಪ್ರಾಣಿಗಳನ್ನು ಕೆಲವರು ತಮ್ಮ ಜೊತೆಗೇ ತರುತ್ತಿದ್ದರು. ಆಫ್ರಿಕಾದ ಇತರ ಕಡೆಗಳಲ್ಲಿದ್ದ ಆಸ್ಪತ್ರೆಗಳ ಅವರ ಅನುಭವವೂ ಇದೇ ಆಗಿತ್ತು. ಪರಿಸ್ಥಿತಿಗೆ ಒಗ್ಗದ ಕೆಲವು ನೀಗ್ರೋಗಳು ಬಹಳ ದೂರದ ಆಸ್ಪತ್ರೆಗಳಿಂದ ಲ್ಯಾಂಬರೀನೆಯ ಆಸ್ಪತ್ರೆಗೆ ಬಂದು ಚಿಕಿತ್ಸೆ ಪಡೆಯುತ್ತಿದ್ದ ನಿದರ್ಶನಗಳೂ ಇದ್ದವು. ಬಹುಶಃ ಇಂಥ ಅನುಭವದಿಂದಲೇ ಶ್ವೈಟ್ಸರ್ ಲ್ಯಾಂಬರೀನೆಯಲ್ಲಿ ಆಸ್ಪತ್ರೆಯಲ್ಲಿ ಸ್ಥಾಪಿಸುವ ಮೊದಲು, ಹಿರಿಯ ಮಿಷನರಿಯೊಬ್ಬರು ಅವನು ಸ್ಥಾಪಿಸುವ ಆಸ್ಪತ್ರೆ ಅಲ್ಲಿಯ ನೆಲದ ಗುಣಕ್ಕನುಗುಣವಾಗಿರಬೇಕೇ ಹೊರತು, ಸ್ವರ್ಗದ ಮಟ್ಟದ್ದಾಗಿರಬಾರದೆಂದು ಎಚ್ಚರಿಸಿದರಂತೆ. ಮನೆ ಅಥವಾ ಗುಡಿಸಿಲೊಳಗೆ ತಯಾರಿಸಿದ ಆಹಾರ-ವಸ್ತುಗಳಿಗೆ ವಿಷ ಸೇರಿಸಿರ ಬಹುದೆಂಬ ಶಂಕೆ ಆಫ್ರಿಕನ್ನರೆಲ್ಲರಿಗೂ ಇರುತ್ತಿದ್ದ ಇನ್ನೊಂದು ಭಯ. ಅದರಿಂದ ಅವರೆಲ್ಲಾ ಬಯಲು ಪ್ರದೇಶಗಳಲ್ಲೇ ಬೆಂಕಿ ಹೊತ್ತಿಸಿ ತಮ್ಮ ಆಹಾರವನ್ನು ಬೇಯಿಸಿ ಕೊಳ್ಳುತ್ತಿದ್ದರು. ಆಸ್ಪತ್ರೆಯ ಕೆಲವು ರೋಗಿಗಳು ಮತ್ತೆ ಅವರ ಜತೆಯಲ್ಲಿ ಬರುತ್ತಿದ್ದವರಿಗೆ ಪಡಿತರವನ್ನು ವಿತರಿಸುತ್ತಿದ್ದುದೂ ಈ ಕಾರಣದಿಂದಲೇ. ಆಸ್ಪತ್ರೆಯ ಆವರಣದಲ್ಲಿ ಶುಚಿಯಾದ ಕಕ್ಕಸುಗಳನ್ನು ನಿರ್ಮಿಸಿದ್ದರೂ,

ನೀಗ್ರೋಗಳು ಅವುಗಳನ್ನು ಉಪಯೋಗಿಸದೆ, ಹೊರಗಡೆ ಬಹಿರ್ದೆಶೆಗೆ ಹೋಗುತ್ತಿದ್ದರು.

ಮನುಷ್ಯರೇ ಅಲ್ಲದೆ ಪ್ರಾಣಿಗಳ ವಿಷಯದಲ್ಲೂ ಡಾ|| ಶ್ವೈಯಿಟ್ಸರ್‌ನ ದಯಾಪರತೆ ಮತ್ತು ಪ್ರೀತಿ ಇತರರಿಗೆ ಮಾದರಿಯದಾಗಿದ್ದವು. ಭೋಜನ ಸಮಯದಲ್ಲಿ ಅವನ ಮೇಜಿನ ಸುತ್ತ ನಾಯಿ, ಬೆಕ್ಕುಗಳು ತಮ್ಮ ಪಾಲಿಗಾಗಿ ಕಾದು ಕೊಂಡಿರುತ್ತಿದ್ದವು. ಜಿಂಕೆಯಂತೂ ಅವನ ಕೈಕಾಲುಗಳನ್ನು ನೆಕ್ಕುತ್ತಿರುತ್ತಿತ್ತು. ಗಾಯ ಗೊಂಡಿದ್ದ ಪೆಲಿಕಾನ್ ಪಕ್ಷಿಯೊಂದನ್ನು ಹೊಲಿಗೆ ಹಾಕಿ ಆಸ್ಪತ್ರೆಯಲ್ಲೇ ಬಹಳ ಸಮಯ ಶುಶ್ರೂಷೆ ಮಾಡಿದ್ದ. ನಂತರ ಅದನ್ನು ಬಿಡುಗಡೆಮಾಡಿ ಕಾಡಿನಲ್ಲಿ ಬಿಟ್ಟರೂ, ಅದರ ಸಂಗಾತಿಯೊಡನೆ ಆಸ್ಪತ್ರೆಗೆ ಬಂದು ಕೆಲಕಾಲ ಇರುತ್ತಿತ್ತಂತೆ. ಸ್ವೈಯಿಟ್ಸರ್ ಬರೆದ ಅದರ ''ಆತ್ಮಕತೆ'' ಅತ್ಯಂತ ಸ್ವಾರಸ್ಯಕರವಾಗಿ ಮೂಡಿಬಂದಿದೆ. ಅಪಾಯಕಾರಿಯಾದ ಸರ್ಪವನ್ನು ಕೊಲ್ಲಲು ತಾನೇ ಮುಂದಾಗುವನಾದರೂ, ನಿರುಪದ್ರವಿಯಾದ ಜೇಡರಹುಳುವಿನ ಮೇಲೆ ಕಾಲಿಡಲಾರದಂಥ ಮನೋಭಾವ ಅವನದು. ಜೀವೋಪಾಸನಾ-ತತ್ವವನ್ನು ಜೀವಂತ ಆಚರಿಸಿ ತೋರಿಸುತ್ತಿದ್ದ ರೀತಿಯದು. ಇಂಗ್ಲೆಂಡಿನಿಂದ ಬಂದಿದ್ದ ಸಮಾಜ ಸುಧಾರಕರೊಬ್ಬರು ಲ್ಯಾಂಬರೀನೆ ಯನ್ನು ಭಾರತೀಯ ಋಷಿಗಳ ಆಶ್ರಮದಂತಿದೆಯೆಂದು ವಿವರಿಸಿದ್ದು ಅತಿಶಯೋಕ್ತಿ ಅಲ್ಲ.

ಆಸ್ಪತ್ರೆಯ ಯಶಸ್ಸು ಹೊರಜಗತ್ತಿನಲ್ಲಿ ಹರಡಿ, ಅಲ್ಲಿನ ಕೆಲಸ ಕಾರ್ಯಗಳು ವಿಸ್ತಾರಗೊಂಡಂತೆಲ್ಲಾ ಯುರೋಪು, ಇಂಗ್ಲೆಂಡ್‌ಗಳಿಂದ ಹಲವು ವೈದ್ಯರು, ದಾದಿಯರು ಮತ್ತು ಸಮಾಜ-ಸೇವಕರು ಸ್ವಪ್ರೇರಿತರಾಗಿ ಸೇವೆ ಮಾಡಲು ಬರುತ್ತಿದ್ದರು. ಅವರೆಷ್ಟೇ ಉದಾತ್ತ ಧ್ಯೇಯಗಳಿಂದ ಪ್ರೇರಿತರಾಗಿ ಬಂದಿದ್ದರೂ ಕೆಲ ಸಾರಿ ಅವರವರೊಳಗೆ ಮನಸ್ತಾಪ, ತಿಕ್ಕಾಟ, ಪ್ರಣಯ-ಪ್ರಸಂಗ, ಇತ್ಯಾದಿಗಳು ನಡೆಯುತ್ತಿದ್ದವು. ಪರಿಸ್ಥಿತಿ ವಿಕೋಪಕ್ಕೆ ಹೋದಾಗ ಮಾತ್ರ ಶ್ವೈಯಿಟ್ಸರ್ ಅಂಥ ವಿಷಯಗಳಲ್ಲಿ ಹಸ್ತಕ್ಷೇಪ ಮಾಡುತ್ತಿದ್ದ. ಉಳಿದ ಸಂದರ್ಭಗಳಲ್ಲಿ ಯಾರೊಬ್ಬರ ವೈಯಕ್ತಿಕ ವಿಚಾರದಲ್ಲೂ ತಲೆಹಾಕುವ ಅಭ್ಯಾಸ ಅವನದಾಗಿರಲಿಲ್ಲ.

**ಹೊಸ ಮದ್ದುಗಳ ಬಳಕೆ**

ವೈದ್ಯಕೀಯ ಕ್ಷೇತ್ರಕ್ಕೆ ಹೊಸದಾಗಿ ಬರುತ್ತಿದ್ದ ಮದ್ದುಗಳನ್ನು ಲ್ಯಾಂಬರೀನೆಯ ರೋಗಿಗಳ ಮೇಲೆ ಮೊಟ್ಟಮೊದಲು ಪ್ರಯೋಗ ಮಾಡುವ ವಿಷಯದಲ್ಲಿ ಕಾದು ನೋಡುವ ಧೋರಣೆ ಡಾ|| ಶ್ವೈಯಿಟ್ಸರ್‌ನದು. ಕೊಕ್ಕೆಹುಳುವಿನ ರೋಗಕ್ಕೆ ತನ್ನದೇ ಆದ ಒಂದು ಮದ್ದನ್ನು ಬಹಳ ಸಮಯದಿಂದ ಉಪಯೋಗಿಸುತ್ತಿದ್ದ. ಸ್ವಲ್ಪ ತೀಕ್ಷ್ಣ ಸ್ವರೂಪದ್ದಾದರೂ ಅದನ್ನು ನೀಡುವ ರೀತಿ-ನೀತಿ ಪ್ರಮಾಣಗಳನ್ನು ತನ್ನ

ಅನುಭವದಿಂದ ನಿಗದಿಪಡಿಸಿಕೊಂಡಿದ್ದ. ದಾದಿಯರೇ ಅಲ್ಲದೆ ಕೆಲವು ರೋಗಿಗಳಿಗೂ ಅದನ್ನು ಅಪಾಯವಿಲ್ಲದೆ ಉಪಯೋಗಿಸುವ ರೀತಿ ಒಗ್ಗಿಹೋಗಿತ್ತು. ಯುರೋಪಿನಲ್ಲಿ ಈ ರೋಗದ ಚಿಕಿತ್ಸೆಗಾಗಿ ಹೊಸದಾಗಿ ಬಳಕೆಯಾಗುತ್ತಿದ್ದ ಮದ್ದನ್ನು ಲ್ಯಾಂಬರೀನೆಗೆ ಹೊಸದಾಗಿ ಬಂದಿದ್ದ ವೈದ್ಯರೊಬ್ಬರು ಇಲ್ಲಿಯ ರೋಗಿಗಳಿಗೆ ಉಪಯೋಗಿಸುವಂತೆ ಪ್ರಚೋದಿಸಿದರು. ಬಳಸಿದ ಸ್ವಲ್ಪ ದಿನಗಳಲ್ಲೇ ಮೂರು ಜನ ರೋಗಿಗಳನ್ನು ಅದು ಬಲಿ ತೆಗೆದುಕೊಂಡಿತು. ತನ್ನ ಮೂರ್ಖತನ ರೋಗಿಗಳ ಸಾವಿಗೆ ಕಾರಣವಾಗಿದ್ದು ಶ್ವೈಯಿಟ್ಸರ್‌ನನ್ನು ಬಹಳ ಕಾಲ ಬಾಧಿಸುತ್ತಿತ್ತು. ಮತ್ತೆ ಕೆಲವು ವರ್ಷಗಳು ಉರುಳಿದವು. ಅದೇ ರೋಗದ ಚಿಕಿತ್ಸೆಗೆ ಇನ್ನೊಂದು ಹೊಸ ಮದ್ದು ಪ್ರಚಾರಕ್ಕೆ ಬಂದಿತು. ಅದನ್ನು ರೋಗಿಗಳಿಗೆ ಬಳಸುವ ವಿಷಯವನ್ನು ಅವನ ಮುಂದೆ ಪ್ರಸ್ತಾಪಿಸಿದರು, ಆ ಮದ್ದಿನ ರಚನೆ, ಅದರಲ್ಲಿರುವ ರಾಸಾಯನಿಕಗಳ ಗುಣಾವಗುಣಗಳ ಬಗೆಗಿನ ಎಲ್ಲಾ ವರದಿಗಳನ್ನು ಪರಿಶೀಲಿಸಿ ಅದರಿಂದ ರೋಗಿಗಳಿಗೆ ತೊಂದರೆಯಾಗಲಾರದೆಂದು ಖಚಿತವಾದ ನಂತರವೇ ಅದರ ಪ್ರಯೋಗಕ್ಕೆ ಅನುಮತಿ ದೊರೆಯಿತು. ಅದರಿಂದ ಅನುಕೂಲವಾದ್ದರಿಂದ, ಮುಂದೆ ಹೊಸ ಮದ್ದುಗಳನ್ನು ಬಳಸಬೇಕಾದ ಸಂದರ್ಭಗಳು ಬಂದಾಗಲೆಲ್ಲಾ ಈ ಕ್ರಮ ಅನುಸರಿಸಲ್ಪಡುತ್ತಿತ್ತು. ವಿಶೇಷ ಪರಿಣಿತಿ ಪಡೆದ ವೈದ್ಯರು ಬಳಸಲು ಬೇಕಾಗುವ ಔಷಧ ಮತ್ತು ಸಲಕರಣೆಗಳು ರೋಗಿಗಳಿಗೆ ಉಪಯುಕ್ತವೆಂದು ಮನದಟ್ಟಾದರೆ ಅವುಗಳಿಗೆ ಎಷ್ಟೇ ವೆಚ್ಚ ತಗಲಬಹುದಾದರೂ ತರಿಸಿಕೊಡಲು ಹಿಂಜರಿಯುತ್ತಿರಲಿಲ್ಲ.

ಹೊಸ ಮದ್ದುಗಳ ಅದರಲ್ಲೂ ಜೀವಿರೋಧಕ ಔಷಧಿಗಳ (ANTI-BIOTICS) ಬಳಕೆಯಲ್ಲಿ ಡಾ॥ ಶ್ವೈಯಿಟ್ಸರ್ ಅನುಸರಿಸುತ್ತಿದ್ದನೆನ್ನಲಾದ ಪ್ರಗತಿ-ವಿರೋಧಿ-ಧೋರಣೆ ಬಹುಜನರ ಟೀಕೆಗೊಳಗಾಗಿತ್ತು. ನಿಜಸಂಗತಿ ಎಂದರೆ ಸುರಕ್ಷತೆ ಮತ್ತು ಪರಿಣಾಮದ ಅರಿವು ಉಂಟಾದನಂತರ, ಅವುಗಳ ಬಳಕೆ ವ್ಯಾಪಕವಾಗಿ ಲ್ಯಾಂಬರೀನೆಯಲ್ಲಿ ಉಂಟಾಯಿತು. ಅವು ನೀಡುತ್ತಿದ್ದ ಅಚ್ಚರಿಯ ಪರಿಣಾಮ ಗಳಿಂದ ಸಂಪ್ರೀತನಾದ ಶ್ವೈಯಿಟ್ಸರ್ ತನ್ನ ಸಾಕು-ಪ್ರಾಣಿಗಳಿಗೆ ವಿವಿಧ ಜೀವಿ ರೋಧಕಗಳ ಹೆಸರಿಟ್ಟು ಕರೆಯುತ್ತಿದ್ದನಂತೆ! ಹೊಸದಾಗಿ ಬರುತ್ತಿದ್ದ ತರುಣ ವೈದ್ಯರು, ಆಗ ತಾನೆ ಮಾರುಕಟ್ಟೆಗೆ ಬರುತ್ತಿದ್ದ ಮದ್ದುಗಳನ್ನು ರೋಗಿಗಳ ಮೇಲೆ ಬೇಕಾಬಿಟ್ಟಿ ಪ್ರಯೋಗ ಮಾಡಲು ಅವನು ಅನುಮತಿ ನೀಡುತ್ತಿರಲಿಲ್ಲ ವೆಂಬುದೇನೋ ನಿಜ ಸಂಗತಿ.

ಅತ್ಯಾಧುನಿಕವಲ್ಲವೆನ್ನಬಹುದಾದ ಶ್ವೈಯಿಟ್ಸರ್‌ನ ವರ್ತನೆಗಳಿಗೆ ಪ್ರತ್ಯಕ್ಷ ನಿದರ್ಶನ (?)ಗಳಿವೆಯೆಂದು ಹೇಳಿ ಅವನ ವಿರುದ್ಧ ಅಪಪ್ರಚಾರ ಮಾಡುತ್ತಿದ್ದವರೂ ಇದ್ದರು. ಹೊರದೇಶಗಳಿಂದ ಬಂದ ಕೆಲವರು ಒಂದೆರಡು

ಔಷಧ-ಪೆಟ್ಟಿಗೆಗಳನ್ನು ಸ್ವತಃ ಶ್ವೈಯಿಟ್ಸರ್‌ನೇ ನದಿಯಲ್ಲಿ ಸುರುವಿ ಖಾಲಿಮಾಡಿದ್ದನ್ನು ಕಣ್ಣಾರೆ ನೋಡಿದ್ದಾಗಿ ತಮ್ಮ ಪ್ರಚಾರಕ್ಕೆ ಬಳಸಿಕೊಂಡಿದ್ದರು. ಅದನ್ನು ಕೂಲಂಕಷವಾಗಿ ವಿಚಾರಿಸಿದಾಗ ನಿಜ ಸಂಗತಿ ತಿಳಿದುಬಂತು. ಲ್ಯಾಂಬರೀನೆಯ ಆಸ್ಪತ್ರೆಗೆ ಸಹಾಯ ಮಾಡುತ್ತೇವೆಂಬ ಘನತೆಯನ್ನು ಪ್ರದರ್ಶಿಸಲು, ಇಲ್ಲವೇ ತೆರಿಗೆ-ವಿನಾಯಿತಿ ಪಡೆಯುವ ಸಲುವಾಗಿ ಕೆಲವು ಔಷಧ-ತಯಾರಕರು ಮದ್ದುಗಳನ್ನು ಕಳುಹಿಸುತ್ತಿದ್ದರು. ಕೆಲವು ಪೆಟ್ಟಿಗೆಗಳಲ್ಲಿನ ಮದ್ದುಗಳು ಸರಿಯಾಗಿ ಪ್ಯಾಕ್ ಮಾಡದಿದ್ದುದರಿಂದ ಹಾಳಾಗಿರುತ್ತಿದ್ದವು. ಮತ್ತೆ ಕೆಲವು ಔಷಧಿಗಳ ಅವಧಿ ಮುಗಿದು ಹೋಗಿರುತ್ತಿದ್ದವು. ಅಂಥವುಗಳನ್ನು ನದಿಗೆ ಹಾಕದೆ ಬೇರೇನೂ ಮಾಡಲಾಗುತ್ತಿರಲಿಲ್ಲ ವೆಂಬುದು ಆ ಮಹನೀಯರು ಅರಿತಿರಲಿಲ್ಲ! ಶಿಶುಗಳಿಗೆ ತಾಯಿಯ ಸ್ತನ್ಯಪಾನವೇ ಶ್ರೇಷ್ಠವೆಂದು ಇತ್ತೀಚಿನ ವರ್ಷಗಳಲ್ಲಿ ಪ್ರಪಂಚದಾದ್ಯಂತ ಸಾರಲಾಗುತ್ತಿದೆ. ಮಕ್ಕಳನ್ನು ಮೊಲೆಯುಣಿಸಿ ಪೋಷಿಸಲು ತಾಯಂದಿರ ಮನ ಒಲಿಸಲು ಬಿರುಸಿನ ಪ್ರಚಾರ ಗಳಾಗುತ್ತಿವೆ. ಡಾ॥ ಶ್ವೈಯಿಟ್ಸರ್ ಆ ಕಾಲದಲ್ಲೇ ಮೊಲೆಯುಣಿಸಿ ಸಾಕುವುದರ ಮಹತ್ವವನ್ನು ಮನಗಂಡು ಲ್ಯಾಂಬರೀನೆಯಲ್ಲಿ ಶಿಶುಗಳಿಗೆ ಬಾಟಲಿ ಹಾಲು ಕೊಡುವುದನ್ನು ನಿಷೇಧಿಸಿದ್ದ. ಅಲ್ಲಿಗೆ ದಾನವಾಗಿ ಬರುತ್ತಿದ್ದ ಹಾಲುಪುಡಿಯನ್ನು ತಾಯಂದಿರಿಗೆ ಇಲ್ಲವೇ ಸಾಕು-ಪ್ರಾಣಿಗಳಿಗೆ ಕೊಟ್ಟು ಶ್ವೈಯಿಟ್ಸರ್ ಶಿಶುಗಳಿಗೆ ಅನ್ಯಾಯವೆಸಗುತ್ತಿದ್ದಾನೆಂದು ಅಪಪ್ರಚಾರ ನಡೆಯುತ್ತಿತ್ತು.

ಹೊಸ ಔಷಧಗಳ ಬಳಕೆಯಿಂದ ರೋಗಿಗಳಿಗೆ ತೊಂದರೆಯಾಗಬಾರದೆಂಬ ಅಭಿಪ್ರಾಯಕ್ಕೆ ಶ್ವೈಯಿಟ್ಸರ್ ಅದೆಷ್ಟು ಪ್ರಾಮುಖ್ಯತೆ ಕೊಡುತ್ತಿದ್ದನೆಂಬುದರ ನಿದರ್ಶನ ಒಂದಿದೆ. ಪ್ಯಾರಿಸಿನ ಪ್ಯಾಶ್ಚರ್-ಇನ್ಸ್ಟಿಟ್ಯೂಟಿನವರು ೧೯೩೩ರ ಸಮಯದಲ್ಲಿ ಆಫ್ರಿಕಾದ ಹಳದಿ-ಜ್ವರದ ಬಗೆಗೆ ನಿರೋಧಕ ಲಸಿಕೆಯೊಂದನ್ನು ಪರಿಶೋಧಿಸಿದ್ದರು. ಅದರಿಂದಾಗಬಹುದಾದ ಪ್ರತಿಕೂಲ ಪರಿಣಾಮಗಳು ಖಚಿತ ವಾಗಿರಲಿಲ್ಲವಾದ್ದರಿಂದ ಮಾನವ-ಪ್ರಯೋಗ ಇನ್ನೂ ನಡೆದಿರಲಿಲ್ಲ. ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ಗೆ ಒಂದು ದಿನ ಕೋಲ್ಮಾರ್‌ನ ವೈದ್ಯರೊಬ್ಬರು ಟೆಲಿಫೋನ್ ಮಾಡಿ ಆ ಲಸಿಕೆಯ ಬಗೆಗೆ ಮಾಹಿತಿ ಕೇಳಿದರು. ಮರುದಿನ ಆ ವೈದ್ಯರು ಇನ್ಸ್ಟಿಟೂಟ್‌ನಲ್ಲಿ ಹಾಜರಾಗಿ, ಹಳದಿ-ಜ್ವರದ ಲಸಿಕೆಯನ್ನು ತಮ್ಮ ಮೇಲೆ ಪ್ರಯೋಗಿಸಬೇಕೆಂದು ಒತ್ತಾಯ ಮಾಡಿದರು. ಅದರಿಂದ ಪ್ರತಿಕೂಲ ಪರಿಣಾಮಗಳಾಗಿ ಅಪಾಯವಾಗ ಬಹುದೆಂದು ಇನ್ಸ್ಟಿಟ್ಯೂಟ್‌ನವರು ಎಷ್ಟೇ ನಿರಾಕರಿಸಿದರೂ ಕೋಲ್ಮಾರ್‌ನ ವೈದ್ಯ ಜಪ್ಪೆನ್ನಲಿಲ್ಲ. ಒತ್ತಾಯಕ್ಕೆ ಮಣಿದು ಲಸಿಕೆಯನ್ನು ನೀಡಿದ್ದಾಯಿತು. ಆದರೆ ಅವರಿಗೆ ಆ ದಿನವೇ ಕೋಲ್ಮಾರ್‌ಗೆ ಹಿಂದಿರುಗಬೇಕೆಂಬ ತವಕ ಬೇರೆ. ಇನ್ಸ್ಟಿಟ್ಯೂಟ್‌ನವರು ಒತ್ತಾಯದಿಂದ ಆ ವೈದ್ಯರನ್ನು ಅಲ್ಲೇ ಎರಡು ದಿನ ಉಳಿಸಿಕೊಂಡು

ಪರಿಣಾಮಗಳನ್ನು ವೀಕ್ಷಿಸಿದರು. ಐವತ್ತೊಂಭತ್ತು ವಯಸ್ಸಿನ ಆ ವೈದ್ಯ ಬೇರಾರೂ ಅಲ್ಲ, ಸ್ವತಃ ಡಾ|| ಆಲ್ಬರ್ಟ್ ಶ್ವೈಯಿಟ್ಸರ್‌ನೇ! ಪ್ರತಿಕೂಲ ಪರಿಣಾಮಗಳು ಕಂಡುಬಾರದಿದ್ದು ದರಿಂದ ಹಳದಿ-ಜ್ವರದ ಲಸಿಕೆಯನ್ನು ಮಾನವ ಪ್ರಯೋಗಕ್ಕೆ ಬಿಡುಗಡೆ ಮಾಡಿದರು. ಹಳದಿ ಜ್ವರದಿಂದಾಗುತ್ತಿದ್ದ ಸಾವು-ನೋವಿನ ಗೋಳನ್ನು ಆಫ್ರಿಕಾದಲ್ಲಿ ಕಣ್ಣಾರೆ ಕಂಡಿದ್ದ ಡಾ|| ಶ್ವೈಯಿಟ್ಸರ್‌ನಂಥವರಿಗೆ ಮಾತ್ರ ಆ ಲಸಿಕೆಯ ಮಹತ್ವ ತಿಳಿಯಲು ಸಾಧ್ಯ.

ವಯಸ್ಸಾಗುತ್ತಾ ಬಂದಂತೆಲ್ಲಾ ಡಾ|| ಶ್ವೈಯಿಟ್ಸರ್‌ನಲ್ಲಿ ಬಿಗಿಯಾಗುತ್ತಿದ್ದ ಶಿಸ್ತು, ಹಠಮಾರಿತನ, ಅತಿಯಾದ ಯಾಂತ್ರಿಕತೆಯ ಅವಹೇಳನೆಗಳು, ಹೊಸಬರಿಗೆ ಬೇಸರವನ್ನುಂಟುಮಾಡುತ್ತಿದ್ದವು. ಈ ಬಗೆಗೆ ಅವನನ್ನು ಕೆಲವರು ಕಟುವಾಗಿ ಟೀಕಿಸಿ, ಚರ್ಚೆಗಿಳಿಯುತ್ತಿದ್ದುದೂ ಉಂಟು. ಅವನ ವಾದಗಳಿಗೆ ಅವರು ಮಣಿಯದಿದ್ದಾಗ ಅಲ್ಲಿಯ ಪರಿಸ್ಥಿತಿಗಳಿಗೆ ಅವನ ಭಾವನೆ ಮತ್ತು ನಡತೆಗಳು ಸರಿಯಾದವೇ ಅವರೆಲ್ಲಾ ಅಲ್ಲಿರುವ ತನಕ ಹೊಂದಿಕೊಂಡಿರಬೇಕೆಂದು ಕಠಿಣವಾಗಿ ನುಡಿದು ವಾದ-ವಿವಾದ ಗಳಿಗೆ ಇತಿಶ್ರೀ ಹಾಡುತ್ತಿದ್ದನಂತೆ!

ಆಸ್ಪತ್ರೆಯ ಖ್ಯಾತಿ ಪ್ರಪಂಚದ ಮೂಲೆ ಮೂಲೆಗಳಿಗೆ ಹರಡಿದಂತೆಲ್ಲಾ, ಹಲವಾರು ಕಡೆಗಳಿಂದ ಪತ್ರಕರ್ತರು, ಸಮಾಜ-ಸುಧಾರಕರು, ಮತ್ತು ರಾಜಕಾರಣಿ ಗಳು ಲ್ಯಾಂಬರೀನೆಯ ಆಸ್ಪತ್ರೆಯ ಕಾರ್ಯವಿಧಾನ ಮತ್ತು ಡಾ|| ಶ್ವೈಯಿಟ್ಸರ್ ಮಹತ್ವವನ್ನು ಹತ್ತಿರದಿಂದ ವೀಕ್ಷಿಸಲು ಬರುತ್ತಿದ್ದರು. ಆಸ್ಪತ್ರೆಯನ್ನು ಆಧುನಿಕ ಜಗತ್ತಿನ ಆಸ್ಪತ್ರೆಗಳಿಗೆ ಹೋಲಿಸಿ ಇಲ್ಲಿನ ಸ್ಥಿತಿಗಳನ್ನು ಕೆಲವರು ಕಟುವಾಗಿ ಟೀಕಿಸಿ ಬರೆಯು ತ್ತಿದ್ದರು. ಮತ್ತೆ ಕೆಲವರು ಆಫ್ರಿಕಾದ ಮಣ್ಣಿನ ಮಕ್ಕಳಿಗೆ ಸರಿಯಾದ ಜವಾಬ್ದಾರಿ ಕೆಲಸ ಗಳನ್ನು ವಹಿಸುತ್ತಿಲ್ಲ; ಅವರನ್ನೆಲ್ಲಾ ಹೀನಾಯವಾಗಿ ಸರ್ವಾಧಿಕಾರಿ ಮನೋಭಾವ ದಿಂದ ನೋಡಿಕೊಳ್ಳುತ್ತಿದ್ದಾನೆಂದು ದೂರಿ ವರದಿಮಾಡುತ್ತಿದ್ದರು. ಲ್ಯಾಂಬರೀನೆ ಯಿಂದ ಹೊರಗಡೆ ಪ್ರಚಾರವಿರುಷ್ಟು ಅವನು ಕರುಣಾಮಯಿಯಾಗಿಲ್ಲವೆಂದು ಅಪವಾದ ಹೊರಿಸುತ್ತಲೂ ಇದ್ದರು. ಬಹುಶಃ ಅವರೆಲ್ಲರಿಗೆ ಆಫ್ರಿಕಾದ ಮೂಲನಿವಾಸಿಗಳ ಸೋಮಾರಿತನ, ಬೇಜವಾಬ್ದಾರಿ ನಡೆವಳಿಕೆ, ಅನಕ್ಷರತೆ ಇತ್ಯಾದಿಗಳ ಪರಿಚಯವಿರಲಿಲ್ಲ. ಜೋಸೆಫ್, ಡೊಮಿನಿಕ್‌ರಂಥ ನಂಬಿಕೆಗೆ ಅರ್ಹರಾದ ಹಲವಾರು ಆಫ್ರಿಕಾದವರಿಗೆ ಜವಾಬ್ದಾರಿಯ ಕೆಲಸ ವಹಿಸಿದ್ದನು. ಅವರಿಂದ ಕೆಲಸ ಮಾಡಿಸುವ ಕಷ್ಟವನ್ನು ಅನುಭವಿಸಿದವರೇ ಬಲ್ಲರು. ಇಂಥ ಟೀಕೆಗಳಿಗೆ ಅಲ್ಲಿ ಕೆಲವು ವರ್ಷಗಳು ಕೆಲಸ ಮಾಡಿದ್ದ ದಾದಿ ಟ್ರೂಡಿ ಬೋಸ್ಲರ್ ''ಲ್ಯಾಂಬರೀನೆಯಲ್ಲಿ ಡಾ|| ಶ್ವೈಯಟ್ಸರ್ ಜತೆ ಕನಿಷ್ಠ ಆರು ತಿಂಗಳು ಇದ್ದುಕೊಂಡು ಕೆಲಸ ಮಾಡಿದವರು ಮಾತ್ರ ಅವನ ಬಗೆಗೆ ಸರಿಯಾದ ಅಭಿಪ್ರಾಯ ನೀಡಲು

ಅರ್ಹರಾಗಬಹುದು. ಉಳಿದವರಿಗೆ ಈ ಅಧಿಕಾರವಿಲ್ಲ'' ಎಂಬುದರಲ್ಲಿ ನಿಜಾಂಶವಿದೆ. ಅವನು ಆಫ್ರಿಕಾದಲ್ಲಿ ಕೆಲಸ ಮಾಡುವ ಪರಿಸ್ಥಿತಿಯನ್ನು ನೋಡದವರು ಅವನ ಪರಿಚಯವಾಗಿದೆ ಎಂದು ಹೇಳುವಂತಿಲ್ಲವೆಂದು ಸ್ವತಃ ಶ್ವೈಯಿಟ್ಸರ್‌ನೇ ಉದ್ಗಾರ ತೆಗೆದಿದ್ದಿದೆ. ಲ್ಯಾಂಬರೀನೆಯಲ್ಲಿ ಅವನು ಬರೇ ರೋಗ-ರುಜಿನಗಳನ್ನು ವಾಸಿ ಮಾಡುವ ವೈದ್ಯನಾಗಿರಲಿಲ್ಲ. ಕಟ್ಟಡಗಳನ್ನು ನಿರ್ಮಿಸುವ ತಾಂತ್ರಿಕ, ಕೆಲಸಗಾರ; ಆಸ್ಪತ್ರೆಯ ಆಡಳಿತಾಧಿಕಾರಿ, ಅಲ್ಲಿರುವ ಸಿಬ್ಬಂದಿಗಳೆಲ್ಲರ ಯಜಮಾನ, ಹಣ್ಣು-ತರಕಾರಿಗಳನ್ನು ಬೆಳೆಯುವ ಕೃಷಿಕ; ಯುರೋಪಿನ ಸುಖಜೀವನವನ್ನು ಕಡೆಗಣಿಸಿ ಕಾಡಿಗೆ ಹೋದ ತ್ಯಾಗಿ ಆತ, ಎಂದೆಲ್ಲಾ ಅರಿತವರೆಷ್ಟು ಮಂದಿ? ಅವನ ಕಟ್ಟುನಿಟ್ಟಾದ ನಡೆವಳಿಕೆಗಳನ್ನು ಮಕ್ಕಳು ಕೆಟ್ಟುಹೋಗದಂತೆ ಮಾತೆಯಾದವಳು ಸಹಾ ಕೆಲಸಾರಿ ಅವರೊಂದಿಗೆ ಕಠಿಣವಾಗಿ ವರ್ತಿಸುವ ರೀತಿ ಅದೆಂಬುದು ಅವರಿಗೆ ಅರ್ಥವಾಗದಿದ್ದುದು ಶೋಚನೀಯವೇ ಸರಿ.

## ೧೬. ಆಸ್ಪತ್ರೆಯ ಬೆಂಬಲಕ್ಕಾಗಿ ಪ್ರವಾಸ

ಲ್ಯಾಂಬರೀನೆಯ ಆಸ್ಪತ್ರೆ ವಿಸ್ತರಣೆಯಾಗಬೇಕಾದರೆ ಅಲ್ಲಿಯ ರೋಗಿಗಳಿಗೆ ಔಷಧ, ಆಹಾರ, ಮತ್ತಿತರ ಸೌಲಭ್ಯಗಳು ಸದಾ ದೊರೆಯುತ್ತಿರಬೇಕಾದರೆ ಡಾ॥ ಶ್ವೈಯಿಟ್ಸರ್ ಹಣ ಒದಗಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಅದಕ್ಕಾಗಿ ಅವನು ಯುರೋಪಿನಲ್ಲಿ ಆಗಾಗ್ಗೆ ಸಂಚರಿಸಬೇಕಾಗುತ್ತಿತ್ತು. ಜತೆಗೆ ಯುರೋಪಿನಲ್ಲೇ ನೆಲೆಸಿ ಕ್ಷಯರೋಗದಿಂದ ಬಳಲುತ್ತಿದ್ದ ಪತ್ನಿ ಮತ್ತು ಒಬ್ಬಂಟಿತನದ ಬೇರದಿಂದ ಕೊರಗುವ ಪುಟ್ಟ ಮಗಳ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುವ ಜವಾಬ್ದಾರಿಯೂ ಅವನ ಮೇಲಿತ್ತು.

೧೯೩೨ರ ವರ್ಷವನ್ನು ಡಾ॥ ಶ್ವೈಯಿಟ್ಸರ್ ಹೆಚ್ಚು ಕಡಿಮೆ ಯುರೋಪಿನಲ್ಲೇ ಕಳೆದನು. ಯುರೋಪಿನಾದ್ಯಂತ ಮನೆಮಾತಾಗಿದ್ದ ಅವನು ಅಲ್ಲಿಗೆ ಬಂದಾಗಲೆಲ್ಲಾ ದರ್ಶನಮಾಡಲು ಜನಜಂಗುಳಿ ಸೇರುತ್ತಿತ್ತು. ಗನ್ಸ್‌ಬಾಕ್‌ನಲ್ಲಿದ್ದ ಅತಿಥಿಗೃಹ ಅವನ ಪ್ರಧಾನ-ಕಚೇರಿಯಾಗಿತ್ತು. ಹೆಚ್ಚು ಸಮಯವನ್ನು ಅಲ್ಲೇ ಕಳೆಯುತ್ತಿದ್ದುದು ವಾಡಿಕೆ. ಹಳೇ ಸ್ನೇಹಿತರು ಸಹಪಾಠಿಗಳು, ಬಂಧುಗಳೇ ಅಲ್ಲದೆ ಪತ್ರಕರ್ತರು, ಸಮಾಜ ಸುಧಾರಕರು, ಸಂಗೀತಾಸಕ್ತರು, ಧರ್ಮ-ತತ್ವಶಾಸ್ತ್ರ-ಜಿಜ್ಞಾಸುಗಳು ಮತ್ತು ದಾನಿಗಳ ಸಂತೆಯೇ ಅಲ್ಲಿ ಸೇರಿರುತ್ತಿತ್ತು. ಅವರೆಲ್ಲರೊಡನೆ ಆತ್ಮೀಯವಾಗಿ ಮಾತು ಕತೆ ನಡೆಸುತ್ತಿದ್ದನಲ್ಲದೆ, ಊಟ-ಉಪಚಾರಗಳ ಆತಿಥ್ಯವೂ ಜರುಗುತ್ತಲೇ ಇದ್ದವು. ಗನ್ಸ್‌ಬಾಕ್‌ನ ಜನರಿಗಂತೂ ಅವರಲ್ಲೊಬ್ಬ ವಿಶ್ವವಿಖ್ಯಾತಿ ಪಡೆದದ್ದು ಹೆಮ್ಮೆಯ

ವಿಷಯವಾಗಿತ್ತು. ನೋಡಲು ಬರುವಾಗಲೆಲ್ಲಾ ಹೂವು, ಹಣ್ಣು, ಹಾಲು ಇತ್ಯಾದಿಗಳನ್ನು ಅರ್ಪಿಸಿ ತಮ್ಮ ಗೌರವ ವ್ಯಕ್ತಪಡಿಸುತ್ತಿದ್ದರು. ಬೀದಿಗೆ ತೆರೆದು ಕೊಂಡಿರುವ ಕೊಠಡಿಯೊಂದರಲ್ಲಿ ಕುಳಿತು ಸಂಗೀತಾಭ್ಯಾಸದಲ್ಲೋ, ಗ್ರಂಥ ಬರೆಯುವುದರಲ್ಲೋ ಮಗ್ನನಾಗಿ ಶ್ವೈಯಿಟ್ಸರ್ ಕುಳಿತುಕೊಂಡಿರುತ್ತಿದ್ದ. ತನ್ನನ್ನು ನೋಡಲು ಬರುವವರಿಗೆ ಯಾವ ಅಡಚಣೆಗಳೂ ಇರಬಾರದೆಂಬುದು ಅವನ ಇಚ್ಛೆಯಾಗಿತ್ತಂತೆ.

ಕೋನಿಗ್ಸ್‌ಫೆಲ್ಡ್‌ನಲ್ಲಿ ಮಗಳು ರೆನ್ನಾ ಜೊತೆ ನೆಲೆಸಿದ್ದ ಹೆಲೆನ್, ಶ್ವೈಯಿಟ್ಸರ್ ಗನ್ಸ್ ಬಾಕ್‌ಗೆ ಬಂದಾಗಲೆಲ್ಲಾ ಅವನ ಜತೆಯಲ್ಲೇ ಇರಲು ಪ್ರಯತ್ನಿಸುತ್ತಿದ್ದಳು. ಕಾಯಿಲೆಯಿಂದ ದೈಹಿಕವಾಗಿ ಜರ್ಝರಿತಳಾಗಿದ್ದ ಹೆಲೆನ್, ಪತಿಯ ಕಾರ್ಯಕ್ರಮ ಗಳಲ್ಲಿ ಭಾಗವಹಿಸಲು ಸಾಧ್ಯವಾಗದಿದ್ದುದಕ್ಕೆ ಮಾನಸಿಕವಾಗಿಯೂ ಪರಿತಪಿಸು ತ್ತಿದ್ದಳು. ಉತ್ತಮ ಜೀವನದ ಕನಸು ಕಂಡು, ಪತಿಯ ಜತೆಯಲ್ಲಿ ಮಾನವೀಯ ಸೇವೆ ಸಲ್ಲಿಸಲು ಅವನ ನೆರಳಂತೆ ಹಿಂಬಾಲಿಸಿದ ತ್ಯಾಗಮಯಿ ಹೆಲೆನ್, ಆ ಕಾರಣ ದಿಂದಲೇ ಕ್ಷಯರೋಗ ಪೀಡಿತಳಾಗಿ ಜೀವಮಾನಪರ್ಯಂತ ನರಳುವಂತಾದುದು ಆಕೆಯ ಜೀವನದ ದುರಂತ. ಆದರೂ ಇದಕ್ಕಾಗಿ ಅವಳೆಂದೂ ತನ್ನ ಪತಿಯನ್ನು ದೂಷಿಸಿದವಳಲ್ಲ.

ಇದು, ತಾಯಿಯ ದುರಂತವಾದರೆ ಮಗಳದ್ದು ಇನ್ನೊಂದು ತರದ್ದು. ಹುಟ್ಟಿದಾರಭ್ಯ ತಂದೆಯ ದರ್ಶನವೇ ಅಪರೂಪ. ಕೆಲ ಸಾರಿ ತಾಯಿಯೂ ತಂದೆಯ ಜತೆ ಯುರೋಪಿನಲ್ಲಿ ತಿರುಗಾಟಕ್ಕೆ ಹೋದಾಗ ಅನಾಥಳಂತೆ ಇತರರ ಮನೆಯಲ್ಲಿ ಕಾಲ ಕಳೆಯುವ ಪರಿಸ್ಥಿತಿ. ಆದರೂ ಬುದ್ಧಿ ತಿಳಿದಂತೆಲ್ಲಾ ತನ್ನ ತಂದೆ ನಿರ್ವಹಿಸು ತ್ತಿರುವ ಶ್ರೇಷ್ಠತರಹೆಯ ಮಾನವೀಯ ಸೇವೆ ಮತ್ತು ಅದರಿಂದ ಲಭಿಸುತ್ತಿದ್ದ ಗೌರವಾದರಗಳ ಬಗೆಗೆ ಅವಳೂ ಹೆಮ್ಮೆ ಪಡುತ್ತಿದ್ದಳು. ಶಾಲೆಯ ಶಿಸ್ತು ಅವಳಿಗೆ ಹಿಡಿಸುತ್ತಿರಲಿಲ್ಲ. ತಾಯಿಗೆ ತಗಲಿದ್ದ ಕ್ಷಯ ಅವಳ ಮುಖದ ಚರ್ಮಕ್ಕೂ ತಗುಲಿತ್ತು. ಮುಖ ವಿಕಾರಗೊಂಡು ಅವಳು ಸಹಾ ಬಹಳ ಸಮಯ ದುಃಖಿಸುವಂತಾಗಿತ್ತು. ಅವಳದೂ ಒಂದು ರೀತಿಯ ತ್ಯಾಗಜೀವನವೇ.

ಡಾ॥ ಶ್ವೈಯಿಟ್ಸರ್‌ನ ಯುರೋಪಿನ ಪ್ರವಾಸ ಆ ವರ್ಷದ ಮಾರ್ಚ್ ತಿಂಗಳಲ್ಲಿ ಶುರುವಾಯಿತು. ಲ್ಯಾಂಬರೀನೆಯ ಆಸ್ಪತ್ರೆಗೆ ಸಹಾಯ ಒದಗಿಸಿಕೊಳ್ಳುವ ಉದ್ದೇಶದ ಈ ತಿರುಗಾಟದಲ್ಲಿ ಧಾರ್ಮಿಕ ವಿಷಯಗಳ ವ್ಯಾಖ್ಯಾನ, ಆಫ್ರಿಕಾದ ಆದಿವಾಸಿಗಳ ದಾರುಣ ಪರಿಸ್ಥಿತಿ, ಅವರಿಗಾಗಿ ಆಸ್ಪತ್ರೆ ನಡೆಸುವ ಕಷ್ಟಕೋಟಲೆಗಳೇ ಈ ಸಾರಿ ಭಾಷಣಗಳ ಮುಖ್ಯ ವಿಷಯಗಳಾಗಿರುತ್ತಿದ್ದವು. ಜೊತೆಗೆ ಹಲವಾರು ಕಡೆ ಸಂಗೀತ-ಕಛೇರಿಗಳೂ ನಡೆದವು. ಹೋದೆಡೆಗಳಲ್ಲೆಲ್ಲಾ ಸನ್ಮಾನ, ಬಿರುದು-

ಬಾವಲಿಗಳು ಹಿಂಬಾಲಿಸುತ್ತಿದ್ದವು.

ಹದಿನೆಂಟನೆ ಶತಮಾನದ ಜರ್ಮನ್ ಕವಿ ವಿಜ್ಞಾನಿ ಹಾಗೂ ದಾರ್ಶನಿಕ ಗಯಟೆಯು ಗತಿಸಿದ ಶತಮಾನೋತ್ಸವ ಮಾರ್ಚ್ ೨೨ರಂದು ಜರುಗಿತು. ಪ್ರಮುಖ ಸಮಾವೇಶ ಫ್ರಾಂಕ್‌ಫರ್ಟ್ ನಗರದಲ್ಲಿ; ಏಸುಕ್ರಿಸ್ತನಂತೆಯೆ ಶ್ವೆಯಿಟ್ಸರ್‌ಗೆ ಗಯಟೆಯೂ ಒಬ್ಬ ಮಾರ್ಗದರ್ಶಕ ಮತ್ತು ಗೌರವಾನ್ವಿತ ವ್ಯಕ್ತಿ. ಗಯಟೆಯೂ ಮತ-ಧರ್ಮ-ತತ್ವಗಳ ವಿಷಯದಲ್ಲಿ ಬಿಚ್ಚು ಮನಸ್ಸಿನವ. ವೈಚಾರಿಕ-ಮನೋಭಾವ ಮತ್ತು ವೈಜ್ಞಾನಿಕ ಪ್ರವೃತ್ತಿಗಳಿಗೆ ಗಯಟೆ ಆ ಕಾಲದಲ್ಲೇ ಹೆಸರಾದವ. ಮೂಢನಂಬಿಕೆಗಳನ್ನು ಅವನೂ ಪುರಸ್ಕರಿಸುತ್ತಿರಲಿಲ್ಲ. ವಿದ್ಯಾರ್ಥಿ ದೆಸೆಯಿಂದಲೂ ಗಯಟೆಯ ಸಾಹಿತ್ಯವನ್ನು ಆಳವಾಗಿ ಅಭ್ಯಸಿಸಿ ಅವನ ವಿಚಾರಧಾರೆಗಳಿಗೆ ಶ್ವೆಯಿಟ್ಸರ್ ಶರಣು ಹೋಗಿದ್ದ. ಗಯಟೆಯ ವಿಷಯದಲ್ಲಿ ಶ್ವೆಯಿಟ್ಸರ್‌ಗಿದ್ದ ವಿದ್ವತ್ತನ್ನು ಗುರುತಿಸಿ ಮೊದಲ ಗಯಟೆ ಬಹುಮಾನವನ್ನು ಕೆಲವು ವರ್ಷಗಳ ಹಿಂದೆ ನೀಡಲಾಗಿತ್ತು. ಈ ಸಾರಿಯ ಉತ್ಸವದ ಗೌರವಾನ್ವಿತ ಅತಿಥಿಯಾಗಿ ಅವನನ್ನೇ ಆಹ್ವಾನಿಸಲಾಗಿತ್ತು.

ಡಾ|| ಆಲ್ಬರ್ಟ್ ಶ್ವೆಯಿಟ್ಸರ್‌ನ ಭಾಷಣವನ್ನು ಕೇಳಲು ಫ್ರಾಂಕ್‌ಫರ್ಟ್‌ನ ಅಪೆರಾ ಹೌಸ್, ಹೆಸರಾಂತ ಗಣ್ಯವಕ್ತಿಗಳಿಂದ ತುಂಬಿತುಳುಕುತ್ತಿತ್ತು. ಜರ್ಮನಿಯ ಆಗಿನ ರಾಜಕೀಯ ಸಂಕ್ಷೋಭೆಗಳತ್ತ ಜನರ ಗಮನ ಸೆಳೆಯುವುದು ಅಂದು ಅವನ ಉದ್ದೇಶ. ಅಸಹಜ ಹಾಗೂ ಪ್ರಕೃತಿ ವಿರೋಧ ಮತ-ತತ್ವಗಳಿಗೆ ಜನ ಗಮನ ಕೊಡದೆ ಆಧುನಿಕ ವೈಚಾರಿಕ ವಿಚಾರಗಳನ್ನು ಮೈಗೂಡಿಸಿಕೊಳ್ಳಬೇಕೆಂದು ಕಳಕಳಿಯ ಮನವಿಮಾಡಿದ. ಗಯಟೆ, ಶ್ವೆಯಿಟ್ಸರ್ ಮುಖಾಂತರ ಮಾತನಾಡಿದನೋ ಇಲ್ಲವೇ ಶ್ವೆಯಿಟ್ಸರ್‌ನೇ ಗಯಟೆಯಾಗಿ ಮಾತನಾಡಿದನೋ ಎಂದು ವಿಂಗಡಿಸುವುದೇ ಅಸಾಧ್ಯವಾಗಿತ್ತು. ಜತೆಗೆ ಜರ್ಮನಿಯ ಆಗಿನ ರಾಜಕೀಯ ಸ್ಥಿತಿ-ಗತಿಗಳ ಬಗೆಗೆ ಅವನು ಮಾಡಿದ ವಿಶ್ಲೇಷಣೆ, ಮುಂದೆ ಆ ರಾಷ್ಟ್ರಕ್ಕೆ ಒದಗಲಿರುವ ವಿಪತ್ತಿನ ಭವಿಷ್ಯವಾಣಿಯಂತಿತ್ತು. ಮುಂದಿನ ಹನ್ನೆರಡು ವರ್ಷಗಳಲ್ಲಿ ಹಿಟ್ಲರ್, ಅವನು ನುಡಿದ ಭವಿಷ್ಯವನ್ನು ನಿಜವನ್ನಾಗಿ ಮಾಡಿದ್ದು ಈಗ ಇತಿಹಾಸವಾಗಿದೆ.

ಡಾ|| ಶ್ವೆಯಿಟ್ಸರ್ ಮುಂದೆ ಹಾಲೆಂಡ್, ಬ್ರಿಟನ್, ಸ್ವೀಡನ್ ಮತ್ತು ಸ್ವಿಟ್ಸರ್‌ಲೆಂಡ್ ಹಾಗೂ ಜರ್ಮನಿಗಳಲ್ಲಿ ನಿರಂತರ ಪ್ರವಾಸಮಾಡಿದ. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯ ಆಧ್ಯಾತ್ಮಿಕ ವಿಷಯದ ಗೌರವ-ಪದವಿ ನೀಡಿ ಸನ್ಮಾನಿಸಿತು. ಎಡಿನ್‌ಬರ್ಗ್ ವಿಶ್ವವಿದ್ಯಾನಿಲಯವೂ ಸಂಗೀತಶಾಸ್ತ್ರ ಮತ್ತು ಆಧ್ಯಾತ್ಮಿಕ ವಿಷಯಗಳೆರಡರ ಬಗೆಗೂ ಗೌರವ-ಪದವಿ ನೀಡಿತು. ಸೇಂಟ್ ಆ್ಯಂಡ್ರ್ಯೂಸ್ ವಿಶ್ವವಿದ್ಯಾನಿಲಯ ಗೌರವ-ಕಾನೂನು ಪದವಿ ನೀಡಿತು. ಅಲ್ಲಿನ ವಿದ್ಯಾರ್ಥಿ ಸಮೂಹ ಗೌರವ-ರೆಕ್ಟಾರ್ ಹುದ್ದೆಗೂ ಅವನನ್ನೇ ಆರಿಸಿತು.

ಆ ವರ್ಷದ ಚಳಿಗಾಲವನ್ನೆಲ್ಲಾ ಶ್ವೈಯಿಟ್ಸರ್ ಯುರೋಪಿನ ತಿರುಗಾಟದಲ್ಲೇ ಕಳೆದ. ಜರ್ಮನಿಯಲ್ಲಾಗುತ್ತಿದ್ದ ರಾಜಕೀಯ ಬದಲಾವಣೆಗಳನ್ನು ಗಮನಿಸಿದರೆ ಯಹೂದ್ಯ ಬುಡಕಟ್ಟಿನ ಪತ್ನಿ ಹೆಲೆನ್ ಜರ್ಮನ್ ಪ್ರದೇಶದಲ್ಲಿ ನೆಲೆಸುವುದು ಅಪಾಯಕಾರಿ ಎನಿಸಿತು. ತಾಯಿ-ಮಗಳನ್ನು ಸ್ವಿಟ್ಸರ್‌ಲೇಂಡಿನ ಲುಸಾನ್ನೇ (LAUSANNE)ಯಲ್ಲಿ ನೆಲೆಸುವ ಏರ್ಪಾಡು ಮಾಡಿದ. ಅಲ್ಲಿಯ ಮುಕ್ತ ವಾತಾವರಣ ಅವರಿಗೂ ಹಿತಕರವೆನಿಸಿತು.

**ಭಾಷಣ-ಗ್ರಂಥರಚನೆ**

೧೯೩೩ರ ಚಳಿಗಾಲವನ್ನು ಯುರೋಪಿನಲ್ಲೇ ಕಳೆದು ಡಾ|| ಶ್ವೈಯಿಟ್ಸರ್ ಲ್ಯಾಂಬರೀನೆಗೆ ಹಿಂತಿರುಗಿದ. ಅವನು ಅಲ್ಲಿರದಿದ್ದ ಸಮಯದಲ್ಲಿ ಆಸ್ಪತ್ರೆಯಲ್ಲಿ ಯಾವ ಅಹಿತಕರ ಘಟನೆಗಳೂ ಜರುಗದೆ, ಸುವ್ಯವಸ್ಥಿತವಾಗಿ ಮುಂದುವರೆಯುತ್ತಿದ್ದುದು ಹರ್ಷವನ್ನುಂಟುಮಾಡಿತ್ತು. ಅಲ್ಲಿಗೆ ಬರುತ್ತಿದ್ದ ರೋಗಿಗಳ ಸಂಖ್ಯೆಯೂ ಹೆಚ್ಚಿದ್ದು, ಒಂದೇ ವರ್ಷದಲ್ಲಿ ೫೦೦ಕ್ಕೂ ಹೆಚ್ಚು ಪ್ರಮುಖ ಶಸ್ತ್ರಚಿಕಿತ್ಸೆಗಳನಲ್ಲಿ ಯಶಸ್ವಿಯಾಗಿ ಕೈಗೊಂಡಿದ್ದರು. ಶ್ವೈಯಿಟ್ಸರ್ ಈ ಸಾರಿ ಬರುವಾಗ ತಂದ ಶೀತಕ-ಪೆಟ್ಟಿಗೆ, ಕೆಲವು ಔಷಧ ಮತ್ತು ಆಹಾರ ವಸ್ತುಗಳು ಕೆಡದಂತೆ ಶೇಖರಿಸಿಡಲು ಅನುಕೂಲವಾಯಿತು.

ಈಗ ಲ್ಯಾಂಬರೀನೆಯಲ್ಲಿ ಬೃಹದಾಕಾರವಾಗಿ ಮತ್ತು ಸುವ್ಯವಸ್ಥಿತ ರೀತಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದ ಆಸ್ಪತ್ರೆ, ಡಾ|| ಶ್ವೈಯಿಟ್ಸರ್ ಆಕಸ್ಮಾತ್ತಾಗಿ ಗತಿಸಿದರೆ ಅದರ ಭವಿಷ್ಯವೇನೆಂಬುದು ಹಲವರನ್ನು ಬಾಧಿಸುತ್ತಿತ್ತು. ಡಾ|| ಶ್ವೈಯಿಟ್ಸರ್ ಹಮ್ಮಿಕೊಂಡಿದ್ದ ಹಲವಾರು ಕಾರ್ಯಕ್ರಮಗಳಿಗೆ ಬೆಂಬಲ ನೀಡುವ ಸಲುವಾಗಿ ಸ್ಟ್ರಾಸ್‌ಬರ್ಗ್‌ನಲ್ಲಿ ಧರ್ಮದರ್ಶಿಗಳ ದತ್ತಿ(DR. ALBERT SCHWEITZER TRUST)ಯೊಂದು ಸ್ಥಾಪನೆಯಾಗಿತ್ತು. ಲ್ಯಾಂಬರೀನೆಯ ಆಸ್ಪತ್ರೆಯ ನಿರ್ವಹಣೆಯನ್ನು ಶ್ವೈಯಿಟ್ಸರ್ ಗತಿಸಿದ ನಂತರ ಈ ದತ್ತಿಗೇ ವಹಿಸಬಹುದೆಂಬ ನಿರ್ಧಾರವಾಗಿ ಅದನ್ನು ಅಕ್ಟೋಬರ್ ತಿಂಗಳಲ್ಲಿ ಅಧಿಕೃತವಾಗಿ ನೊಂದಾಯಿಸಲಾಯಿತು.

ಲ್ಯಾಂಬರೀನೆಯಲ್ಲಿ ಡಾ|| ಶ್ವೈಯಿಟ್ಸರ್ ಇಲ್ಲದಿದ್ದಾಗಲೂ ಆಸ್ಪತ್ರೆ ಸುವ್ಯವಸ್ಥಿತವಾಗಿ ನಡೆಯುವ ಸ್ಥಿತಿಗೆ ಬಂದಿದ್ದರಿಂದ ಅವನಿಗೆ ಹಣ ಸಂಗ್ರಹಣೆಗಾಗಿ ಹೊರಗಡೆ ತಿರುಗಾಡಲು ಸಮಯ ಸಿಗುತ್ತಿತ್ತು. ಆ ವರ್ಷ ಆಕ್ಸ್‌ಫರ್ಡ್‌ನ ಮ್ಯಾಂಚೆಸ್ಟರ್ ಕಾಲೇಜಿನಲ್ಲಿ ಹಿಬ್ಬರ್ಟ್ ಸ್ಮಾರಕ ಭಾಷಣ ಮತ್ತು ಎಡಿನ್‌ಬರೋದಲ್ಲಿ ಫೋರ್ಡ್ ಸ್ಮಾರಕ ಭಾಷಣಗಳ ಸರಣಿಗಳಲ್ಲಿ ಭಾಗವಹಿಸಲು ಸಾಧ್ಯವಾಯಿತು. ''ದ ಪ್ರಾಬ್ಲಂ ಆಫ್ ನ್ಯಾಚುರಲ್ ಫಿಲಾಸಫಿ ಎಂಡ್ ನ್ಯಾಚುರಲ್ ಎಥಿಕ್ಸ್'' (THE PROBLEM OF NATURAL PHILOSOPHY AND NATURAL ETHICS) ಎಂಬ

ವಿಷಯದಲ್ಲಿ ಎರಡೂ ಕಡೆ ಸುದೀರ್ಘ ಭಾಷಣಗಳನ್ನು ಮಾಡಿದ. ಈ ಮೊದಲೇ ಅವನು ಪ್ರಕಟಿಸಿದ್ದ ''ನಾಗರಿಕತೆಯ ತತ್ವಜಿಜ್ಞಾಸೆ'' (THE PHOLOSOPHY OF CIVILISATION) ಎಂಬ ಎರಡು ಭಾಗಗಳಿದ್ದ ಗ್ರಂಥಗಳ ವಿಷಯ- ವಿಸ್ತರಣೆಯೇ ಈ ಭಾಷಣಗಳಲ್ಲಿ ಮೂಡಿಬಂದಿದ್ದವು. ಅವನು ಪ್ರತಿಪಾದಿಸುತ್ತಿದ್ದ ಜೀವೋಪಾಸನೆ ತತ್ವದ- (REVERENCE FOR LIFE) ಮುಂದುವರಿದ ವಿಸ್ತರಣೆಯೇ ಅವುಗಳ ಅಂತಿಮ ಗುರಿ. ಪ್ರಪಂಚದ ವಿದ್ಯಮಾನಗಳೆಲ್ಲಾ ಆಧ್ಯಾತ್ಮಿಕ ನೆಲೆಯನ್ನಾಧರಿಸಿರುತ್ತವೆ. ಆಧ್ಯಾತ್ಮಿಕ ನೆಲೆ ಬಲವಾಗಿದ್ದರೆ ಒಳ್ಳೆಯ ಇತಿಹಾಸ ನಿರ್ಮಾಣವಾಗುತ್ತದೆ. ಇಲ್ಲದಿದ್ದರೆ ಇತಿಹಾಸವೂ ಕೆಟ್ಟದಾಗಬಹುದು; ಅವೆರಡರ ಬಾಂಧವ್ಯದ ಬಗೆಗೆ ಆಗಿನ ತತ್ವಶಾಸ್ತ್ರ-ಪರಿಣಿತರು ಹೆಚ್ಚಿನ ಪ್ರಾಮುಖ್ಯತೆ ಕೊಡದಿರುವುದು ಶ್ವೈಯಿಟ್ಸರ್ ವ್ಯಥೆಪಡುವ ವಿಷಯ. ಆಧ್ಯಾತ್ಮ ಮತ್ತು ಸಾಮಾಜಿಕ ವಿಷಯಗಳು ಹಾಗೂ ಮತಧರ್ಮ ಮತ್ತು ಇತಿಹಾಸಗಳ ಬಾಂಧವ್ಯ ಸರಿಯಾಗಿ ವೃದ್ಧಿಯಾಗಬೇಕೆಂಬುದು ಈ ಸರಣಿ-ಭಾಷಣಗಳಲ್ಲಿ ಶ್ವೈಯಿಟ್ಸರ್ ಒತ್ತುಕೊಟ್ಟಿದ್ದ ಅಂಶಗಳು.

ನೈಜ ಹಾಗೂ ಸುಸಂಗತ ವಿವೇಚನೆಯಿಂದ ನಾಗರಿಕತೆ ಸರಾಗವಾಗಿ ಬೆಳೆಯುತ್ತದೆ. ಇದರಿಂದಲೇ ಏಸುಕ್ರಿಸ್ತ ಪ್ರೇಮದಿಂದ ಕೂಡಿದ ನೀತಿ-ಧರ್ಮವನ್ನು ಹೆಚ್ಚು ವಿಶಾಲವಾಗಿ ಪ್ರತಿಪಾದಿಸಲು ಸಾಧ್ಯವಾಯಿತು. ಮೊದಲು ಸಮಾಜದ ಸಣ್ಣ ಸಣ್ಣ ಬುಡಕಟ್ಟುಗಳಲ್ಲಿ ಬಿತ್ತಿದ ಈ ಪ್ರೇಮ ಆಧರಿತ ನೀತಿ-ಧರ್ಮ ಮುಂದೆ ಒಂದು ಜನಾಂಗದಿಂದ ಇನ್ನೊಂದಕ್ಕೆ ಹರಡಿ, ಇಡೀ ಮಾನವಕುಲ ಅದನ್ನು ಅನುಸರಿಸು ವಂತಾಗಬೇಕು. ಅದು ಇನ್ನೂ ಮುಂದುವರಿದು ಜೀವೋಪಾಸನಾ ತತ್ವವನ್ನು ಅಂಗೀಕರಿಸಿ ಮಾನವರೇ ಅಲ್ಲದೆ ಇತರ ಜೀವಜಂತುಗಳನ್ನೂ ಗೌರವ, ಆದರಗಳಿಂದ ಉಪಾಸಿಸುವಂಥ ಮನೋಭೂಮಿಕೆ ಉದ್ಭವಿಸಬೇಕೆಂಬುದು ಶ್ವೈಯಿಟ್ಸರ್‌ನ ಆಶಯ. ಪೌರ್ವಾತ್ಯ ದೇಶಗಳ ಮತಧರ್ಮಗಳ ಸಾರವನ್ನು ಅರಿತಿದ್ದ ಶ್ವೈಯಿಟ್ಸರ್, ಈ ರೀತಿಯ ಯೋಚನಾಲಹರಿ ಅವುಗಳಲ್ಲಿರುವುದನ್ನು ಗುರುತಿಸಿದ್ದ. ಈ ವಿಷಯಗಳನ್ನು ಪೀಠಿಕೆಯ ರೂಪದಲ್ಲಿ ಈ ಭಾಷಣಗಳಲ್ಲೂ ಪ್ರಸ್ತಾಪ ಮಾಡಿದ್ದ. ಇಂಥ ವಿಷಯಗಳು ಅವನ ಗಮನವನ್ನು ಇನ್ನೂ ಹೆಚ್ಚಾಗಿ ಸೆಳೆದಿದ್ದರ ಫಲವೇ ಅವನಿಂದ ''ಭಾರತೀಯ (ಧರ್ಮ) ಚಿಂತನೆ ಹಾಗೂ ಅದರ ವಿಕಸನ'' ಎಂಬ ಗ್ರಂಥ ರಚನೆ.

ಈ ಸಾರಿ ಇಂಗ್ಲೆಂಡ್‌ನಲ್ಲಿದ್ದ ಸಮಯದಲ್ಲಿ ಶ್ವೈಯಿಟ್ಸರ್‌ಗೆ ಇಬ್ಬರು ಪ್ರಮುಖ ವ್ಯಕ್ತಿಗಳ ಭೇಟಿಯ ಅವಕಾಶ ದೊರೆಯಿತು. ಶೀತವಲಯದ ಲ್ಯಾಬ್ರಡಾರ್‌ನಲ್ಲಿ ಮಿಷನರಿ-ಆಸ್ಪತ್ರೆ ನಡೆಸುತ್ತಿದ್ದವರು ಡಾ॥ ವಿಲ್‌ಫ್ರೆಡ್ ಗ್ರೆನ್‌ಫೆಲ್ ಒಬ್ಬರು. ಅವರಿಬ್ಬರೂ ವಿಭಿನ್ನ ಪ್ರದೇಶಗಳಲ್ಲಿ ಆಸ್ಪತ್ರೆಗಳನ್ನು ನಡೆಸುವುದರ ಸಮಸ್ಯೆಗಳ ಬಗೆಗೆ

ವಿಚಾರ ವಿನಿಮಯ ಮಾಡಿಕೊಂಡರು. ವೈದ್ಯಕೀಯ ಸಮಸ್ಯೆಗಳಿಗಿಂತ ಆ ಎರಡು ಪ್ರದೇಶಗಳ ಜನರ ನಡೆ-ನುಡಿ, ಜೀವನಕ್ರಮಗಳೇ ಅವರಿಬ್ಬರ ಚರ್ಚೆಯ ವಿಷಯವಾಯಿತು. ಆಫ್ರಿಕಾದ ನೀರಾನೆ, ಉತ್ತರ ಧ್ರುವದ ಹಿಮಕರಡಿಯನ್ನು ಭೇಟಿಮಾಡಿದಂತಾಯಿತೆಂದು ಶ್ವೈಯಿಟ್ಸರ್ ಹಾಸ್ಯ ಚಟಾಕಿ ಹಾರಿಸದೆ ಬಿಡಲಿಲ್ಲ. ಖ್ಯಾತ ಸಂಗೀತಗಾರ (CELLIST) ಪಬಲೋ ಕ್ಯಾಸಲ್‌ನ ಕಛೇರಿಯೊಂದರಲ್ಲಿ ಹಾಜರಿದ್ದ ಶ್ವೈಯಿಟ್ಸರ್, ಅವರು ನುಡಿಸಿದ ಬಾಕ್ ಸಂಗೀತಲಹರಿಗೆ ಮಾರುಹೋದ. ಅವರಿಬ್ಬರಲ್ಲೂ ಅನ್ಯೋನ್ಯತೆ ಉಂಟಾಗಿ ಇಬ್ಬರೂ ಒಳ್ಳೇ ಸ್ನೇಹಿತರಾದರು. ಮುಂದೆ ಹಾರೋಗೇಟ್, ಲೀಡ್ಸ್, ಪೀಟರ್‌ಬರೋ, ಷೇಫೀಲ್ಡ್, ಮಾಂಚೆಸ್ಟರ್, ಬರ್ಮಿಂಗ್ ಹ್ಯಾಮ್, ಲಂಡನ್ ಹೀಗೆ ಇಂಗ್ಲೆಂಡಿನ ಉದ್ದಗಲ ಸುತ್ತಾಡಿದನು.

ಅರವತ್ತನೇ ವರ್ಷಕ್ಕೆ ಕಾಲಿಟ್ಟಾಗ (೧೯೩೫) ಡಾ|| ಆಲ್ಬರ್ಟ್ ಶ್ವೈಯಿಟ್ಸರ್ ಪ್ರಪಂಚದೆಲ್ಲೆಡೆ ಪರಿಚಿತನಾದ ವ್ಯಕ್ತಿಯಾಗಿದ್ದ. ಯುವಕ ಆಲ್ಬರ್ಟ್ ವಿದ್ಯಾರ್ಥಿಯಾಗಿದ್ದಾಗ ಸಮಾಜ ಸೇವಾ ಕಾರ್ಯಗಳಲ್ಲಿ ಮುಂದಾಳಾಗಿ ಕೆಲಸ ಮಾಡಿದ ಸ್ಟ್ರಾಸ್‌ಬರ್ಗ್ ನಗರದಲ್ಲಿ ಅವನ ಹೆಸರಿನಲ್ಲಿ ಒಂದು ಉದ್ಯಾನವನ್ನು ನಿರ್ಮಿಸಿ ಗೌರವಿಸಿದರು. ಆಗ ಜರ್ಮನಿ, ಶ್ವೈಯಿಟ್ಸರ್‌ನ ಬದ್ಧ ದ್ವೇಷಿಗಳಾದ ಹಿಟ್ಲರ್ ಮತ್ತು ಅವನ ನಾಜಿ-ಪಕ್ಷದ ಹಿಡಿತದಲ್ಲಿತ್ತು. ಅವನ ವಿಚಾರಗಳು ಪ್ರಿಯವಾದವಲ್ಲವಾದರೂ, ಶ್ವೈಯಿಟ್ಸರ್ ತಮ್ಮ ಬಲೆಯೊಳಗಿದ್ದರೆ ಒಳಿತೆಂಬುದು ಅವರ ಇಚ್ಛೆಯಾಗಿತ್ತು. ಶ್ವೈಯಿಟ್ಸರ್‌ಗೆ ಜರ್ಮನಿಯಲ್ಲಿ ನೆಲೆಸುವಂತೆ ಆಹ್ವಾನವಿತ್ತರು. ಸಂಗೀತ ಕಲೆಯ ಪ್ರಚಾರದಲ್ಲಿ ಸಂಪೂರ್ಣ ಸ್ವಾತಂತ್ರ್ಯವಿರುವ ಹುದ್ದೆಯನ್ನು ನೀಡುವ ಆಮಿಷವನ್ನೂ ತೋರಿಸಿದರು. ಅಂಥ ಆಮಿಷಕ್ಕೆ ಶ್ವೈಯಿಟ್ಸರ್ ಮಣಿಯಲಿಲ್ಲ. ಹಿಟ್ಲರ್‌ನ ಪ್ರಚಾರಾಧಿಕಾರಿ ಹುಟ್ಟುಹಬ್ಬಕ್ಕೆ ಕಳುಹಿಸಿದ ''ಜರ್ಮನಿಯ ಶುಭಾಶಯ''ಗಳಿಗೆ ಶ್ವೈಯಿಟ್ಸರ್, ತನ್ನ ''ಮಧ್ಯ ಆಫ್ರಿಕಾದ ಶುಭಾಶಯ''ಗಳನ್ನು ಕಳುಹಿಸಿ ಅವರ ಆ ಆಮಿಷಗಳಿಗೆಲ್ಲಾ ನಕಾರಾತ್ಮಕ ಉತ್ತರ ನೀಡುತ್ತಲೇ ಇದ್ದ.

ಡಾ|| ಶ್ವೈಯಿಟ್ಸರ್ ಮತ್ತೆ ಲ್ಯಾಂಬರೀನೆಗೆ ಹಿಂದಿರುಗುವಾಗ ಅಲ್ಲಿ ರೋಗಿಗಳ ಒತ್ತಡ ಹೆಚ್ಚಾಗುತ್ತಲೇ ಇತ್ತು. ಈಗಿರುವ ಕಟ್ಟಡಗಳು ಅವರಿಗೆಲ್ಲಾ ಶುಶ್ರೂಷೆ ಮಾಡುವುದಕ್ಕೆ ಸಾಲದಾಗಿದ್ದುವು. ಶಸ್ತ್ರಚಿಕಿತ್ಸೆಗೊಳಗಾಗಬೇಕಾದವರ ಆದ್ಯತೆಯ ಪಟ್ಟಿ ದಿನೇ ದಿನೇ ಬೆಳೆಯುತ್ತಲೇ ಇತ್ತು. ಆಗಿದ್ದ ಒಂದೇ ಪರೀಕ್ಷಾ-ಕೊಠಡಿಯಲ್ಲಿ ೩-೪ ಜನ ವೈದ್ಯರು ಏಕಕಾಲದಲ್ಲಿ ಕಾರ್ಯನಿರತರಾಗಿ ಕೆಲಸಮಾಡಲು ಆಗುತ್ತಿರಲಿಲ್ಲ.

ನಾಗಾಲೋಟದಲ್ಲಿ ವಿಸ್ತರಿಸುತ್ತಿದ್ದ ಆಧುನಿಕ ನಾಗರಿಕತೆಯಿಂದ ಲ್ಯಾಂಬರೀನೆ ಮುಕ್ತವಾಗಿರಬೇಕೆಂಬುದು ಡಾ|| ಶ್ವೈಯಿಟ್ಸರ್‌ನ ಅಪೇಕ್ಷೆಯಾಗಿತ್ತು. ಆದರೂ ಅವನಿಗರಿವಿಲ್ಲದೆ ಅದು ನಿಧಾನಗತಿಯಲ್ಲಿ ಅತ್ತ ನುಸುಳುತ್ತಲಿತ್ತು. ತುರ್ತು ಶಸ್ತ್ರಚಿಕಿತ್ಸೆ

ಗಳನ್ನು ಮಾಡಲು ಪೆಟ್ರೋಮ್ಯಾಕ್ಸ್ ದೀಪ ಆಸ್ಪತ್ರೆಗೆ ಮೊದಲ ಹೆಜ್ಜೆ ಇಟ್ಟಿತು. ಯುರೋಪಿನಿಂದ ಕಾಂಗೋ ಕಡೆ ಹೋಗುವ ವಿಮಾನ ಲ್ಯಾಂಬರೀನೆಯ ಆಕಾಶದಲ್ಲಿ ಕಾಣಿಸಿದ್ದು, ಮುಗ್ಧ ಆಫ್ರಿಕನ್ನರನ್ನು ಚಕಿತಗೊಳಿಸಿದರೆ, ಮುಂದೇನಾಗ ಬಹುದೆಂಬ ಚಿಂತೆ ಶ್ವೈಯಿಟ್ಸರ್‌ನನ್ನಾವರಿಸಿತು.

ಅಕ್ಟೋಬರ್‌ನಲ್ಲಿ ಶ್ವೈಯಿಟ್ಸರ್ ಯುರೋಪಿಗೆ ಬಂದಾಗ ಮುಸ್ಸಲೋನಿಯ ಪಡೆಗಳು ಅಬಿಸ್ಸೀನಿಯಾ ದೇಶಕ್ಕೆ ಮುತ್ತಿಗೆ ಹಾಕಿದ್ದವು. ಇದರಿಂದ ಇಡೀ ಯುರೋಪು ನಡುಗಿತು. ಆಫ್ರಿಕಾದ ಭವಿಷ್ಯದ ಬಗೆಗೆ ಮತ್ತೆ ಚಿಂತೆಯಾಯಿತು. ಯುರೋಪಿನಲ್ಲಿ ಸರ್ವಾಧಿಕಾರದ ಮೊಳಕೆಯ ಚಿಹ್ನೆಗಳು ಎದ್ದುಕಾಣಿಸುತ್ತಿದ್ದವು. ಸರ್ವಾಧಿಕಾರಿಗಳ ಅಬ್ಬರ ಅವನ ಕಿವಿಗಡರುತ್ತಿದ್ದವು. ಮತ್ತೊಂದು ಮಹಾಯುದ್ಧ ಆರಂಭವಾಗುವುದರ ಬಗೆಗೆ ಅವನಿಗೀಗ ಲವಲೇಶ ಸಂಶಯವಿರಲಿಲ್ಲ. ಇವೆಲ್ಲದರ ನಡುವೆಯೂ ಡಾ॥ ಶ್ವೈಯಿಟ್ಸರ್‌ಗೆ ಗೌರವಾದರದ ಆಹ್ವಾನಗಳು ಬರುತ್ತಲೇ ಇದ್ದು, ಎಡೆಬಿಡದೆ ಪ್ರಯಾಣಮಾಡುತ್ತಲೇ ಇರಬೇಕಾಯಿತು. ಹಲವಾರು ನಗರದವರು ಗೌರವ-ಸದಸ್ಯ-ಪದವಿಯನ್ನು ಸ್ವೀಕರಿಸಬೇಕೆಂದು ಒತ್ತಾಯ ತರುತ್ತಿದ್ದರು. ಯುರೋಪಿನ ಹಲವಾರು ಪ್ರಮುಖರು ನೋಬೆಲ್ ಪಾರಿತೋಷಕಕ್ಕೆ ಅವನ ಹೆಸರನ್ನು ಸೂಚಿಸಿದ್ದರು ಕೂಡ.

ಒಂದು ಪ್ರಮುಖ ಭೇಟಿ ಈ ಸಮಯದಲ್ಲಿ ಉಲ್ಲೇಖನಾರ್ಹ. ಮಹಾತ್ಮ ಗಾಂಧಿ ಮತ್ತು ಡಾ॥ ಆಲ್ಬರ್ಟ್ ಶ್ವೈಯಿಟ್ಸರ್ ನಡುವೆ ಕೆಲ ಸಮಯದಿಂದ ಪರಸ್ಪರ ಗೌರವಾದರಗಳು ಮೂಡಿಬಂದಿದ್ದವು. ಶ್ವೈಯಿಟ್ಸರ್ ಯುರೋಪಿನಲ್ಲಿದ್ದ ಸಮಯದಲ್ಲಿ ಮಹಾತ್ಮಾಗಾಂಧಿ ಅವನಿಗೆ ಪತ್ರ ಬರೆದಿದ್ದರು. ಆಗತಾನೆ ಬ್ರಿಟಿಷರ ಬಂದಿಖಾನೆಯಿಂದ ಬಿಡುಗಡೆಯಾದ ಪಂಡಿತ ಜವಹರಲಾಲ ನೆಹರುರವರನ್ನು ಅವನ ಜತೆಯಲ್ಲಿರಿಸಿಕೊಳ್ಳಲು ಸಾಧ್ಯವೇ ಎಂದು ವಿಚಾರಿಸಿದ್ದರು. ನೆಹರುರವರ ಆರೋಗ್ಯ ಸರಿಯಾಗಿಲ್ಲದ್ದರಿಂದ ಡಾ॥ ಶ್ವೈಯಿಟ್ಸರ್‌ನ ಸಹಯೋಗ ಅವರಿಗೆ ಒಳ್ಳೆಯದಾಗಬಹುದೆನಿಸಿತ್ತು. ಶ್ವೈಯಿಟ್ಸರ್ ಲುಸಾನೆಯಲ್ಲಿದ್ದ ಸಮಯದಲ್ಲಿ ನೆಹರು ಕೆಲಕಾಲ ಅವರ ಅತಿಥಿಯಾಗಿ ತಂಗಿದ್ದರು. ಇದಕ್ಕೆ ಕೆಲವು ದಿನಗಳ ಹಿಂದೆ ಶ್ವೈಯಿಟ್ಸರ್, ಭಾರತೀಯ ಮತಧರ್ಮಗಳ ಉಗಮ ಮತ್ತು ಬೆಳವಣಿಗೆಯ ಬಗೆಗೆ ವಿಮರ್ಶಾತ್ಮಕವಾಗಿ ಬರೆದ ಗ್ರಂಥ ''ಭಾರತೀಯ (ಧರ್ಮ) ಚಿಂತನೆ ಹಾಗೂ ಅದರ ವಿಕಸನ'' ಪ್ರಕಟವಾಗಿತ್ತು. ಅದರಲ್ಲಿ ಗಾಂಧಿಯವರ ವ್ಯಕ್ತಿತ್ವ ಮತ್ತು ಅವರು ಪ್ರತಿಪಾದಿಸುತ್ತಿದ್ದ ತತ್ವಗಳ ಬಗೆಗೆ ತಮ್ಮ ಮೆಚ್ಚಿಗೆ ಸೂಚಿಸಿದ್ದನು.

ವಿಮರ್ಶಾತ್ಮಕವಾಗಿ ರಚಿಸಿದ್ದ ಈ ಗ್ರಂಥದಲ್ಲಿ ಗಾಂಧಿಯವರ ಕೆಲವು ಕಾರ್ಯ ವಿಧಾನಗಳ ಬಗೆಗೆ ಶ್ವೈಯಿಟ್ಸರ್ ತನ್ನ ಅಸಮ್ಮತಿಯನ್ನೂ ಕೂಡಾ ವ್ಯಕ್ತಪಡಿಸಿದ್ದ. ಆದರೆ

ಗಾಂಧಿಯವರು ಈ ಗ್ರಂಥವನ್ನು ಓದಿದ್ದರೆ ? ಶ್ವೈಯಿಟ್ಸರ್ ಈ ಗ್ರಂಥದ ಬಗೆಗೆ ನೆಹರು ಜತೆ ಚರ್ಚಿಸಿದ್ದರೆ? ಆಧುನಿಕ ಭಾರತದ ಈ ಎರಡು ಪ್ರಮುಖರು, ಶ್ವೈಯಿಟ್ಸರ್ ಭಾರತದ ಮತಧರ್ಮಗಳನ್ನು ವಿಶ್ಲೇಷಿಸಿದ ಬಗೆಗೆ ತಳೆದ ಅಭಿಪ್ರಾಯ ಗಳೇನು? ಮತ್ತು ಶ್ವೈಯಿಟ್ಸರ್‌ನ ಜೀವೋಪಾಸನ-ತತ್ವಗಳ ಬಗೆಗೆ ಗಾಂಧಿ, ನೆಹರು, ತಳೆದ ಅಭಿಪ್ರಾಯಗಳೇನು? ಎಂಬ ವಿಚಾರಗಳಲ್ಲಿ ಈಗ ಯಾವ ಮಾಹಿತಿಯೂ ಇದ್ದಂತಿಲ್ಲ. ಗಾಂಧಿ ಮತ್ತು ಶ್ವೈಯಿಟ್ಸರ್ ಪ್ರಪಂಚದ ಪರಸ್ಪರ ಹೊಂದಾಣಿಕೆಗಳಿಲ್ಲದ ವಿಭಿನ್ನ ಸಂಸ್ಕೃತಿಗಳ ಹಿನ್ನೆಲೆಗಳಿಂದ ಉದ್ಭವಿಸಿ ಬಂದವರು. ಆದರೂ ಅವರ ನಡೆ-ನುಡಿ, ಜೀವನಕ್ರಮಗಳಲ್ಲಿ ಒಂದು ಸಾಮ್ಯತೆ ಕಂಡುಬರುತ್ತಿದ್ದು ಗಮನಾರ್ಹ. ಇಬ್ಬರ ಉಡಿಗೆ-ತೊಡಿಗೆಗಳು ಅತ್ಯಂತ ಸರಳವಾಗಿದ್ದು, ಯಾವಾಗಲೂ ರೈಲಿನ ಮೂರು ಅಥವಾ ನಾಲ್ಕನೇ ದರ್ಜೆ ಗಳಲ್ಲಿ ಪ್ರಯಾಣಿಸುವ ಮನೋಭಾವದವರು. ಅವರಿಬ್ಬರೂ ರೂಪಿಸಿದ ಅಹಿಂಸೆ ಮತ್ತು ಜೀವೋಪಾಸನ-ತತ್ವಗಳಲ್ಲೂ (NON-VOILENCE AND REVERENCE FOR LIFE) ಸಾಮ್ಯತೆ ಇತ್ತು. ಇಬ್ಬರೂ ಸಮಾಜದ ತೀರಾ ಕೆಳಸ್ತರದ ಜನಗಳ ಉದ್ಧಾರಕ್ಕೆ ತಮ್ಮ ಜೀವನಗಳನ್ನೇ ಮುಡಿಪಾಗಿಟ್ಟ ಮಹಾನ್ ವ್ಯಕ್ತಿಗಳು. ವಿಶ್ವದ ಆಗು-ಹೋಗುಗಳ ಬಗೆಗೂ ಒಂದೇ ತೆರನ ನಿರ್ಧಾರಕ್ಕೆ ಬಂದಿದ್ದ ಮಹಾ ಆತ್ಮಗಳೇ ಸರಿ. ಅವರ ಜೀವಿತಕಾಲದಲ್ಲಿ ಇಬ್ಬರೂ ಪರಸ್ಪರ ಭೇಟಿಯಾಗಲು ಸಾಧ್ಯವಾಗದಿದ್ದರೂ ಅವರ ಗುಣಗಳಲ್ಲಿದ್ದ ಅನೇಕ ಸಾಮ್ಯತೆಗಳು ಅಚ್ಚರಿಪಡಿಸು ವಂತವು. ಈ ಶತಮಾನದ ಸರ್ವೋತ್ಕೃಷ್ಟ ವ್ಯಕ್ತಿಗಳನ್ನು ಹೆಸರಿಸಲು ಖ್ಯಾತ ವಿಜ್ಞಾನಿ ಡಾ॥ ಆಲ್ಬರ್ಟ್ ಐನ್‌ಸ್ಟೈನ್‌ರನ್ನು ಕೇಳಿದಾಗ ಗಾಂಧಿ ಮತ್ತು ಶ್ವೈಯಿಟ್ಸರ್‌ಗಳಲ್ಲದೇ ಮತ್ತಿನ್ನಾರು ಎಂದು ಹೇಳಿದ್ದು ಅವರಿಬ್ಬರ ಶ್ರೇಷ್ಠತೆಯನ್ನು ಎತ್ತಿತೋರಿಸುತ್ತದೆ.

ಆ ವರ್ಷದ ಶರತ್ಕಾಲದಲ್ಲಿ ಶ್ವೈಯಿಟ್ಸರ್‌ನ ಸಂಗೀತ ಪ್ರತಿಭೆಯೂ ಇನ್ನೂ ಪ್ರಕಾಶವಾಗುವ ಸಂದರ್ಭ ಒದಗಿತ್ತು. ಕೊಲಂಬಿಯಾ ಗ್ರಾಮೊಫೋನ್ ಕಂಪನಿಯವರು ಅವನು ನುಡಿಸುತ್ತಿದ್ದ ಬಾಕ್ ಸಂಗೀತ-ಕೃತಿಗಳನ್ನು ಧ್ವನಿಮುದ್ರಿಸಿ ಪ್ರಚಾರಕ್ಕೆ ತಂದರು. ಅವು ತಕ್ಷಣ ಜನಪ್ರಿಯವಾದವು. ಶ್ವೈಯಿಟ್ಸರ್ ಸಂಗೀತ-ಮುದ್ರಿಕೆಗಳಿಗೆ ಬೇಡಿಕೆ ಹೆಚ್ಚಾಯಿತು. ಇನ್ನೂ ಐವತ್ತೆರಡು ಕೃತಿಗಳನ್ನು ಸ್ಟ್ರಾಸ್‌ಬರ್ಗ್‌ನಲ್ಲಿ ಅವನು ನುಡಿಸುತ್ತಿದ್ದ ಆರ್ಗನ್‌ನಲ್ಲಿಯೇ ಧ್ವನಿ-ಮುದ್ರಣ ಮಾಡಿಸಿದರು. ಅವೆಲ್ಲಾ ಅತ್ಯಂತ ಜನಪ್ರಿಯವಾಗಿದ್ದಲ್ಲದೆ ಶ್ವೈಯಿಟ್ಸರ್‌ಗೆ ಒಳ್ಳೆಯ ಸಂಪಾದನೆಯೂ ಆಯಿತು.

ಡಾ॥ ಶ್ವೈಯಿಟ್ಸರ್ ೧೯೩೭ರ ಜನವರಿಯಲ್ಲಿ ಯುರೋಪಿನಲ್ಲೇ ತನ್ನ ಹುಟ್ಟು-ಹಬ್ಬವನ್ನಾಚರಿಸಿ ಮತ್ತೆ ಲ್ಯಾಂಬರೀನೆಗೆ ಪ್ರಯಾಣ ಬೆಳೆಸಿದ. ಆಸ್ಪತ್ರೆ ಇನ್ನೂ

ಜನಪ್ರಿಯವಾಗಿ ರೋಗಿಗಳಿಂದ ತುಂಬಿ ತುಳುಕುತ್ತಿತ್ತು. ಈಗ ಆಸ್ಪತ್ರೆಯನ್ನು ಇನ್ನಷ್ಟು ವಿಸ್ತರಿಸುವುದು ಅನಿವಾರ್ಯವೆನಿಸಿತು. ಮುಂದೆ ಒಂದು ವರ್ಷವೆಲ್ಲಾ ಆಸ್ಪತ್ರೆಯ ಕಟ್ಟಡಗಳ ನಿರ್ಮಾಣ ಮುಂದುವರಿಯಿತು. ಆಹಾರ-ಬೆಳೆಗಳನ್ನು ಬೆಳೆಸುತ್ತಿದ್ದ ತೋಟವೂ ಜತೆಯಲ್ಲೇ ವಿಸ್ತಾರಗೊಂಡಿತು. ಇನ್ನೂ ಹಲವಾರು ವಿವಿಧ ಹಣ್ಣು ತರಕಾರಿಗಳ ಗಿಡ ಮರಗಳನ್ನು ಬೆಳೆಸುವ ವ್ಯವಸ್ಥೆಯಾಯಿತು. ಲ್ಯಾಂಬರೀನೆ ಈಗ ಒಂದು ಸಣ್ಣಪಟ್ಟಣವೇ ಆಯಿತೆನ್ನಬಹುದು. ಇನ್ನು ಕೆಲವೇ ದಿನಗಳಲ್ಲಿ ನಾಗರಿಕತೆಯ ಪ್ರತೀಕವೆನಿಸಿದ ಬಾನುಲಿ-ಕೇಂದ್ರವೂ ಅಲ್ಲಿ ಉದಯಿಸಿತು!

ಶ್ವೈಯಿಟ್ಸರ್ ಬರೆದ ಆತ್ಮಕತೆಯ ಎರಡೂ ಆವೃತ್ತಿಗಳೂ ಅಮೆರಿಕಾದಲ್ಲಿ ಅತ್ಯಂತ ಬಿರುಸಿನಿಂದ ಖರ್ಚಾಗಿ ಅವನ ಕೀರ್ತಿ ಗಗನಕ್ಕೇರಿತು. ಅಮೆರಿಕಾಕ್ಕೆ ಅವನು ಖುದ್ದು ಭೇಟಿ ಮಾಡಬೇಕೆಂಬ ಒತ್ತಾಯದ ಆಮಂತ್ರಣಗಳು ಬರಲಾರಂಭಿಸಿದವು. ಲ್ಯಾಂಬರೀನೆಯಲ್ಲಿನ ಕೆಲಸದ ಒತ್ತಡದಿಂದ ತಕ್ಷಣ ಅಮೆರಿಕಾಕ್ಕೆ ಹೊರಡಲಾಗಲಿಲ್ಲ. ಅವನ ಪರವಾಗಿ ಪತ್ನಿ ಹೆಲೆನ್ ಮತ್ತು ರೆನ್ನಾರನ್ನು ಅಮೆರಿಕಾಕ್ಕೆ ಕಳುಹಿಸಿದನು. ಅವರಿಗೆ ಅಮೆರಿಕಾದಲ್ಲಿ ಅದ್ಭುತ ಸ್ವಾಗತ ದೊರೆಯಿತು. ಅಮೆರಿಕಾದ ಹಲವಾರು ಪಟ್ಟಣಗಳಿಗೆ ಭೇಟಿ ನೀಡಿ ಲ್ಯಾಂಬರೀನೆಯ ಆಸ್ಪತ್ರೆ ಮತ್ತು ಡಾ|| ಶ್ವೈಯಿಟ್ಸರ್‌ನ ಕೆಲಸದ ಬಗೆಗೆ ಮಾಹಿತಿ ನೀಡಿದರು. ಹೆಚ್ಚಿನ ಯಶಸ್ಸು ಸಾಧಿಸಿದ ಅವರ ಈ ಪ್ರಯಾಣದ ಪರಿಣಾಮದಿಂದ ಮುಂದೆ ಇಡೀ ಅಮೆರಿಕಾವೇ ಆಸ್ಪತ್ರೆಯ ಉಳಿವಿಗೆ ನೆರವಾಯಿತು.

೧೯೩೯ರ ಹೊಸ ವರ್ಷದ ಹೊತ್ತಿಗೆ ಶ್ವೈಯಿಟ್ಸರ್ ವಿಶ್ರಾಂತಿಗಾಗಿ ಯುರೋಪಿಗೆ ಹಿಂದಿರುಗದೇ ಎರಡು ವರ್ಷಗಳಾಗಿತ್ತು. ದಾರಿಯಲ್ಲಿ ತಂಗುತ್ತಿದ್ದ ಬಂದರುಗಳಲ್ಲೆಲ್ಲಾ ಯುದ್ಧ-ನೌಕೆಗಳು ಸಾಲುಗಟ್ಟಿ ನಿಂತಿದ್ದವು. ಹಡಗಿನ ರೇಡಿಯೋದಲ್ಲಿ ಯುರೋಪಿನ ರಾಜಕಾರಣಿಗಳ ಯುದ್ಧದ ಕರೆ ಪ್ರತಿದಿನ ಕೇಳಿಬರುತ್ತಿದ್ದವು. ಹಿಟ್ಲರ್ ಜೆಕೊಸ್ಲೋವಾಕಿಯವನ್ನು ಕಬಳಿಸಿದ್ದರೂ, ಇನ್ನು ಹೆಚ್ಚು ನೆಲದಾಶೆ ತನಗಿಲ್ಲವೆಂಬ ಅಸಂಬದ್ಧ-ಪ್ರಲಾಪ ಮಾಡುತ್ತಲೇ ಇದ್ದ. ಆದರೆ ರಾಜಕಾರಣಿಗಳ ಕುಟಿಲ ಯೋಜನೆಗಳ ಪರಿಚಯವಿದ್ದ ಶ್ವೈಯಿಟ್ಸರ್ ಆ ಮಾತುಗಳನ್ನು ನಂಬಲಿಲ್ಲ. ಈ ಸಾರಿಯ ಯುದ್ಧ ಬಹಳಕಾಲ ಮುಂದುವರಿಯ ಬಹುದೆಂಬ ಮುಂದಾಲೋಚನೆ ಯಿದ್ದು ಯುರೋಪಿನಲ್ಲಿ ಹೆಚ್ಚು ಕಾಲ ಉಳಿದು ಅಲ್ಲೇ ಸಿಕ್ಕಿಹಾಕಿಕೊಂಡಿರಲು ಸಿದ್ಧನಿರಲಿಲ್ಲ. ಬೋರ್ಡೋ ಬಂದರಿನಲ್ಲಿ ಇಳಿದವನೇ ಆಫ್ರಿಕಾಕ್ಕೆ ಬಹು ಬೇಗ ಹಿಂದಿರುಗುವ ನಿರ್ಧಾರ ಮಾಡಿ ಅದಕ್ಕಾಗಿ ತನ್ನ ಮರು ಪ್ರಯಾಣದ ಟಿಕೆಟ್ಟನ್ನು ಕಾದಿರಿಸಿದ ನಂತರವೇ ಆಲ್‌ಸೇಶ್‌ನ ಕಡೆ ಪ್ರಯಾಣ ಮುಂದುವರಿಸಿದ್ದ.

ಗನ್ಸ್‌ಬಾಕ್‌ನ್ನು ತಲ್ಪಿದ ಶ್ವೈಯಿಟ್ಸರ್ ಈ ಸಾರಿ ಹಿಂದಿನಂತೆ ವಿವಿಧ ಕಾರ್ಯಕ್ರಮಗಳಲ್ಲಿ ತೊಡಗಲಿಲ್ಲ. ಮಗಳು ರೆನ್ನಾಳಿಗೆ ಈಗ ಇಪ್ಪತ್ತು ವರ್ಷ ತುಂಬಿದ್ದು ಅವಳ ಮದುವೆ ಕಡೆ ಗಮನ ಹರಿಸಬೇಕಾಗಿತ್ತು. ಕುಟುಂಬದವರೊಡನೆ ಸ್ವಲ್ಪ ಕಾಲ ಕಳೆದು, ಆಸ್ಪತ್ರೆಗೆ ಬೇಕಾದ ಔಷಧ, ಆಹಾರ ಸಾಮಗ್ರಿಗಳನ್ನು ಕೂಡಿಹಾಕುವ ಕಾರ್ಯದಲ್ಲಿ ತೊಡಗಿದ. ಈ ಸಾರಿ ಪೂರ್ಣ ಪ್ರಮಾಣದ ಯುದ್ಧ ನಡೆದರೆ ಆಸ್ಪತ್ರೆಯ ಉಳಿವಿಗೆ ಸಾಕಷ್ಟು ಸಾಮಗ್ರಿಗಳನ್ನು ಸಂಗ್ರಹಮಾಡಿಟ್ಟುಕೊಳ್ಳುವುದು ಅವಶ್ಯಕವಾಗಿತ್ತು. ತನ್ನ ಕೆಲಸವನ್ನು ಕೇವಲ ಹತ್ತು ದಿನಗಳಲ್ಲಿ ಮುಗಿಸಿ ಮತ್ತೆ ಲ್ಯಾಂಬರೀನೆಯತ್ತ ಪ್ರಯಾಣ ಮಾಡಿದ. ರೆನ್ನಾ ಜನಿಸಿದಾರಭ್ಯ ಲ್ಯಾಂಬರೀನೆಯನ್ನು ನೋಡುವ ಅವಕಾಶ ದೊರೆತಿರಲಿಲ್ಲ. ತನ್ನ ತಂದೆಯನ್ನು ಅಷ್ಟು ದೀರ್ಘ ಕಾಲ ಅವಳಿಂದ ದೂರ ಹಿಡಿದಿರುತ್ತಿದ್ದ ಆಸ್ಪತ್ರೆಯನ್ನು ನೋಡಲೇಬೇಕೆಂಬ ಹಂಬಲವಿದ್ದು ಈ ಸಾರಿ ಅಲ್ಲಿಗೆ ಬರುವ ಹಠ ಹಿಡಿದಳು. ತಾಯಿ-ಮಗಳ ಪ್ರಯಾಣಕ್ಕೆ ಸಿದ್ಧತೆ ಮಾಡಿ ತಾನು ಮುಂದಾಗಿ ಲ್ಯಾಂಬರೀನೆಗೆ ಹೊರಟು ಹೋದ.

ಲ್ಯಾಂಬರೀನೆಗೆ ಹಿಂದಿರುಗವಷ್ಟು ಹೊತ್ತಿಗೆ ಇನ್ನೇನು ಯುದ್ಧ ಪ್ರಾರಂಭವಾಗುತ್ತದೆಂಬುದು ಖಚಿತವಾಗಿತ್ತು. ಲ್ಯಾಂಬರೀನೆಯ ಸುತ್ತಲ ಪ್ರದೇಶದ ವರ್ತಕರು ಆಹಾರ-ವಸ್ತುಗಳನ್ನು ಹಿಂದಿಗಿಂತ ಸುಲಭ ಬೆಲೆಯಲ್ಲಿ ಮಾರಾಟ ಮಾಡುತ್ತಿದ್ದರು. ಯುದ್ಧ ಸಮಯದ ಖರ್ಚಿಗಾಗಿ ಆಹಾರ ವಸ್ತುಗಳನ್ನು ಹೆಚ್ಚು ಪ್ರಮಾಣದಲ್ಲಿ ಶೇಖರಿಸುವುದು ಒಳ್ಳೆಯದೆಂದು ಶ್ವೈಯಿಟ್ಸರ್ ಅದಷ್ಟನ್ನು ಕೊಂಡು ಶೇಖರಿಸಿದ. ಅಷ್ಟರಲ್ಲಿ ಲ್ಯಾಂಬರೀನೆಗೆ ಬಂದಿದ್ದ ಹೆಂಡತಿ ಮಗಳನ್ನು ಹೆಚ್ಚು ದಿನ ಉಳಿಸಿಕೊಳ್ಳದೇ ಯುರೋಪಿಗೆ ಹಿಂದಿರುಗಿಸಲು ಏರ್ಪಾಡು ಮಾಡಿದ. ಯುದ್ಧದ ಕಾರ್ಮೋಡಗಳು ದಟ್ಟವಾಗಿ ಚಲಿಸುತ್ತಿದ್ದುದರಿಂದ ಅವರನ್ನು ಹೆಚ್ಚಿನ ಅಪಾಯಕ್ಕೊಡ್ಡಲು ಅವನು ಸಿದ್ಧನಿರಲಿಲ್ಲ.

## ೧೭. ಎರಡನೇ ಮಹಾಯುದ್ಧ

ಸೆಪ್ಟೆಂಬರ್ ೧೯೩೯ರಲ್ಲಿ ಎರಡನೇ ಮಹಾಯುದ್ಧ ಯುರೋಪಿನಲ್ಲಿ ಆರಂಭವಾಯಿತು. ಮೊದಲ ಮಹಾಯುದ್ಧದ ಸಮಯದಲ್ಲಿ ಡಾ॥ ಶ್ವೈಯಿಟ್ಸರ್ ಅಪಾರ ಕಷ್ಟ ನಷ್ಟಗಳನ್ನನುಭವಿಸಿದ್ದರೂ, ಈ ಸಾರಿ ಆಸ್ಪತ್ರೆಯನ್ನು ನಡೆಸಿಕೊಂಡು ಹೋಗಲೇ ಬೇಕೆಂಬ ದೃಢ ನಿಶ್ಚಯ ಮಾಡಿದ್ದನು. ಯುದ್ಧದಿಂದ ಈ ಸಾರಿಯೂ ಹಲವಾರು ತೊಡಕುಗಳು ಉದ್ಭವಿಸಿದವು. ಚಳಿಗಾಲದಲ್ಲಿ ವಿಶ್ರಾಂತಿಗಾಗಿ ಯುರೋಪಿಗೆ ಹಿಂದಿರುಗಿದ್ದ ಇಬ್ಬರು ವೈದ್ಯರು ಮತ್ತು ಇಬ್ಬರು ದಾದಿಯರು ಯುದ್ಧ

ಪರಿಸ್ಥಿತಿಯಿಂದ ಲ್ಯಾಂಬರೀನೆಗೆ ಹಿಂದಿರುಗಲಾಗಲಿಲ್ಲ. ಡಾ|| ಶ್ವೆಯಿಟ್ಸರ್ ಜತೆ ಇನ್ನೊಬ್ಬ ವೈದ್ಯ ಡಾ|| ಲಾಡಿಸ್‌ಲಾಸ್ ಗೋಲ್ಡ್‌ಶ್ಮಿಡ್ ಮಾತ್ರ ಲ್ಯಾಂಬರೀನೆಯಲ್ಲಿ ಉಳಿದುಕೊಂಡಿದ್ದರು. ಡಾ|| ಅನ್ನ ವಿಲ್ಡಿಕನ್ ಯುದ್ಧ ಆರಂಭವಾದ ನಂತರ ೧೯೪೦ರ ಜನವರಿಯಲ್ಲಿ ಬಹಳ ಪ್ರಯಾಸದಿಂದ ಲ್ಯಾಂಬರೀನೆಗೆ ಬಂದು ತಲ್ಪಿದರು. ಯುರೋಪಿನಿಂದ ಆಸ್ಪತ್ರೆಗೆ ಔಷಧ ಸಾಮಗ್ರಿಗಳನ್ನು ಸಾಗಿಸುತ್ತಿದ್ದ ಹಡಗೊಂದು ಸಮುದ್ರಮಧ್ಯದಲ್ಲಿ ವೈರಿಗಳ ದಾಳಿಗೆ ತುತ್ತಾಗಿ ಮುಳುಗಿತು. ಕೇವಲ ಮೂರು ಜನ ವೈದ್ಯರು ಮತ್ತು ನಾಲ್ಕು ಜನ ದಾದಿಯರು ಯುದ್ಧ-ಕಾಲದಲ್ಲಿ ಆಸ್ಪತ್ರೆಯ ಕೆಲಸ ಕಾರ್ಯಗಳನ್ನು ನಿಭಾಯಿಸಬೇಕಾಯಿತು.

ಈ ಸಾರಿ ಯುದ್ಧ ಎಷ್ಟು ಸಮಯ ಮುಂದುವರಿಯುತ್ತದೆಂಬುದನ್ನು ಶ್ವೆಯಿಟ್ಸರ್ ಊಹಿಸಲಾಗದಿದ್ದರೂ, ಅದು ಬಹಳ ಕಾಲ ಎಳೆಯುತ್ತದೆಂಬುದರ ಬಗೆಗೆ ಅವನಿಗೆ ಸಂಶಯವಿರಲಿಲ್ಲ. ಔಷಧ ಮತ್ತು ಆಹಾರ ವಸ್ತುಗಳನ್ನು ಎಷ್ಟೇ ಪ್ರಮಾಣದಲ್ಲಿ ಶೇಖರಿಸಿಟ್ಟುಕೊಂಡಿದ್ದರೂ ಅವು ಯುದ್ಧ ಮುಗಿಯುವವರೆಗೂ ಸಾಕಾಗುವಂತಿರಲಿಲ್ಲ. ಯುರೋಪಿನಿಂದ ಆಗಾಗ್ಗೆ ಬರುತ್ತಿದ್ದ ಸಾಮಾನುಗಳು ಈಗ ಲ್ಯಾಂಬರೀನೆಯನ್ನು ತಲುಪುವುದು ದುಸ್ತರವಾಯಿತು. ಅದರಿಂದ ಕೇವಲ ತುರ್ತು-ಚಿಕಿತ್ಸೆಗಳ ಅವಶ್ಯಕತೆ ಇರುವವರನ್ನು ಆಸ್ಪತ್ರೆಯಲ್ಲಿ ಉಳಿಸಿಕೊಂಡು ಉಳಿದವರನ್ನು ಅವರ ಮನೆಗಳಿಗೆ ಕಳುಹಿಸುವ ಅತ್ಯಂತ ಬೇಸರದ ನಿರ್ಧಾರ ಮಾಡಬೇಕಾಯಿತು. ಕೆಲವೇ ದಿನಗಳಲ್ಲಿ ಆಸ್ಪತ್ರೆ ಹೆಚ್ಚೂ ಕಡಿಮೆ ಖಾಲಿಯಾಗಿದ್ದ ದೃಶ್ಯ ಅವನಿಗೆ ಅಸಹನೀಯವೆನಿಸಿತು. ಆದರೆ ಮತ್ತೆ ಸ್ವಲ್ಪ ದಿನಗಳಲ್ಲೇ ಆಸ್ಪತ್ರೆ ಮತ್ತೆ ತುಂಬಿ ತುಳುಕುವ ಪರಿಸ್ಥಿತಿ ಒದಗಿತು. ಲ್ಯಾಂಬರೀನೆಯ ಸುತ್ತ ಮುತ್ತಲ ಪ್ರದೇಶದಲ್ಲಿ ಕಾರ್ಯನಿರತರಾಗಿದ್ದ ಯುರೋಪಿಯನ್ ಕುಟುಂಬಗಳ ಹೆಂಗಸರು ಮಕ್ಕಳನ್ನು ಸುರಕ್ಷಿತವೆನಿಸಿದ ಆಸ್ಪತ್ರೆಯಲ್ಲಿಡುವುದು ಒಳಿತೆಂದು ಸರ್ಕಾರದವರು ಅವರನ್ನೆಲ್ಲಾ ಅಲ್ಲಿಗೆ ಸಾಗಿಸಿದರು.

ಯುದ್ಧ ಮುಂದುವರಿದಂತೆಲ್ಲಾ ಆಫ್ರಿಕಾದಲ್ಲಿನ ಫ್ರೆಂಚ್ ವಸಹಾತುಗಳ ಭವಿಷ್ಯ ತೂಗುಯ್ಯಾಲೆಯಾಡುವಂತಾಯಿತು. ಫ್ರಾನ್ಸ್, ಜೂನ್ ೧೯೪೦ರಲ್ಲಿ ಹಿಟ್ಲರ್‌ನ ವಶವಾದ ನಂತರ ಅವನ ವಕ್ರದೃಷ್ಟಿ ಆಫ್ರಿಕಾದ ಫ್ರೆಂಚ್ ವಸಾಹತುಗಳ ಮೇಲೂ ಬಿತ್ತು. ಈ ವಸಾಹತುಗಳ ಮೇಲೆ ಹಲವು ತೆರನ ಒತ್ತಾಯಗಳನ್ನು ತರಲಾರಂಭಿಸಿದ. ಮಧ್ಯ ಆಫ್ರಿಕಾದ ಚಾಡ್ ಮತ್ತು ಗೇಬನ್‌ಗಳನ್ನುಳಿದು ಇನ್ನುಳಿದ ಫ್ರೆಂಚ್ ವಸಾಹತುಗಳ ಆಡಳಿತಾಧಿಕಾರಿಗಳು ಜರ್ಮನ್ನರಿಗೆ ಶರಣಾದರು. ಗೇಬನ್ ಮೇಲೆ ಒತ್ತಾಯ ಹೇರಲು ಜರ್ಮನ್ ಜಲಾಂತರ್ಗಾಮಿ ನೌಕೆಗಳು ಅದರ ತೀರ ಪ್ರದೇಶಗಳಲ್ಲಿ ಬೀಡುಬಿಟ್ಟಿದ್ದವು. ಇನ್ನೇನು ಗೇಬನ್ ಸಹಾ ಶರಣಾಗುವ ಸ್ಥಿತಿಗೆ ಬಂದಿತ್ತು.

ಅಷ್ಟರಲ್ಲೇ ಫ್ರೆಂಚ್ ವಸಾಹತುಗಳಾಗಿದ್ದ ಕಾಂಗೋ, ಕ್ಯಾಮರೂನ್ಸ್ ಮತ್ತು ಲುಬಂಜಿ ಸಾರಿಗಳು ಹಿಟ್ಲರ್‌ನ ಒತ್ತಡವನ್ನು ಧಿಕ್ಕರಿಸಿ ಫ್ರಾನ್ಸ್‌ನ ಚಾರ್ಲ್ಸ್ ಡಿ' ಗಾಲೆಗೆ ಬೆಂಬಲ ಸಾರಿದವು. ಗೇಬನ್ ಅತ್ಯಂತ ಆಯಕಟ್ಟಿನ ಪ್ರದೇಶದಲ್ಲಿದ್ದು ಅದನ್ನು ವಶಪಡಿಸಿ ಕೊಂಡವರು ಯುದ್ಧದಲ್ಲಿ ಗೆಲ್ಲುವಹಾಗಿತ್ತು. ಗೇಬನ್ ಪ್ರಾಂತ್ಯವನ್ನು ಸೀಳಿಕೊಂಡು ಹರಿದು ಸಮುದ್ರ ಸೇರುವ ಓಗಾವೆ ನದಿ ಇಡೀ ಮಧ್ಯ-ಆಫ್ರಿಕಾಕ್ಕೆ ಹೆದ್ದಾರಿ ಯಂತಿದ್ದುದೇ ಅದರ ಪ್ರಾಮುಖ್ಯತೆಗೆ ಕಾರಣ. ಇದನ್ನರಿತ ಡಿ'ಗಾಲೆಯ ಸೈನ್ಯ, ಗೇಬನ್ ಪ್ರಾಂತ್ಯಕ್ಕೆ ಮೂರು ಕಡೆಯಿಂದ ಸೈನ್ಯ-ಜಮಾವಣೆ ಮಾಡಿ ಮುನ್ನುಗ್ಗುತ್ತಿದ್ದ ಜರ್ಮನ್ ಪಡೆಗಳೊಡನೆ ಭೀಕರ ಕಾಳಗ ಆರಂಭಿಸಿತು. ಲ್ಯಾಂಬರೀನೆಯ ಸುತ್ತ ಮುತ್ತಲೂ ಭೀಕರ ಕಾಳಗ ನಡೆಯುತ್ತಲಿತ್ತು. ಆಸ್ಪತ್ರೆಗೆ ಬಾಂಬು ಹಾಕಿ ನಾಶಪಡಿಸ ಬಾರದೆಂದು ಎರಡೂ ಕಡೆಯವರೂ ಒಪ್ಪಿಕೊಂಡ್ದರೂ, ಆಸ್ಪತ್ರೆಯ ಕಟ್ಟಡಗಳಿಗೆ ಆಗಾಗ್ಗೆ ಗುಂಡುಗಳು ತಗಲದಿರುತ್ತಿರಲಿಲ್ಲ. ಆಸ್ಪತ್ರೆಯ ಕಿಟಕಿ ಬಾಗಿಲುಗಳು ಸದಾ ಮುಚ್ಚಿರಬೇಕಾಯಿತು. ಆಸ್ಪತ್ರೆಯ ವಸಾಹತನ್ನು ಸುರಕ್ಷಿತವಾಗಿಡಲು ಶ್ವೈಯಿಟ್ಸರ್ ಬಹಳಷ್ಟು ಶ್ರಮವಹಿಸಿದ.

ನವೆಂಬರ್ ತಿಂಗಳಲ್ಲಿ ಜರ್ಮನ್ ಸೈನ್ಯ ಗೇಬನ್‌ನಿಂದ ಹಿಂದೆ ಸರಿದು ಅಲ್ಲಿ ಮತ್ತೆ ಫ್ರೆಂಚ್ ಸಾರ್ವಭೌಮತ್ವ ಏರ್ಪಟ್ಟಿತು. ಶ್ವೈಯಿಟ್ಸರ್ ಈಗ ನಿರಾಳವಾಗಿ ಉಸಿರಾಡುವಂತಾದರೆ ಆಸ್ಪತ್ರೆಯನ್ನು ಸುಸೂತ್ರವಾಗಿ ನಡೆಸುವಲ್ಲಿನ ತೊಂದರೆಗಳು ಪರಿಹಾರವಾಗಲಿಲ್ಲ. ಫ್ರಾನ್ಸ್ ಮತ್ತು ಮೆಡಿಟರೇನಿಯನ್ ಪ್ರದೇಶಗಳು ಜರ್ಮನ್ನರ ವಶದಲ್ಲಿದ್ದುದರಿಂದ ಯುರೋಪಿನ ಸಂಪರ್ಕ ಕಳಚಿಬಿತ್ತು. ಆಕಡೆಯಿಂದ ಬರುತ್ತಿದ್ದ ಆಹಾರ ಮತ್ತು ಔಷಧ-ಸಾಮಗ್ರಿಗಳ ಸರಬರಾಜು ಸ್ಥಗಿತವಾಯಿತು. ಇಂಗ್ಲೆಂಡ್ ಮತ್ತು ಅಮೆರಿಕಾದ ಮಾರ್ಗಗಳು ಇನ್ನೂ ತೆರೆದಿದ್ದುದರಿಂದ ಆ ದೇಶಗಳಿಂದ ಸಹಾಯ ದೊರೆಯುವ ಭರವಸೆಗಳು ಬರಲಾರಂಭಿಸಿದವು. ಅಮೆರಿಕಾದಲ್ಲಿ ಶ್ವೈಯಿಟ್ಸರ್‌ನ ಪರಿಚಯದವರಾದ ಡಾ॥ ಎಡ್ವರ್ಡ್ ಹೂಮ್ ಮತ್ತು ಪ್ರೊ॥ ಇವರೆಟ್ ಸ್ಕಿಲ್ಲಿಂಗ್ಸ್ ಎಂಬಿಬ್ಬರು ಆಸ್ಪತ್ರೆಗೆ ಬೇಕಾದ ಸಾಧನ ಸಲಕರಣೆಗಳನ್ನು ಕಳುಹಿಸುವ ಭರವಸೆ ನೀಡಿ ಪತ್ರಬರೆದಿದ್ದರು. ಅವುಗಳನ್ನು ಒಟ್ಟುಮಾಡಿ ಲ್ಯಾಂಬರೀನೆಗೆ ಕಳುಹಿಸುವಲ್ಲಿ ಅವರಿಗೆ ಒಂದು ವರ್ಷವೇ ಹಿಡಿಯಿತು. ಲ್ಯಾಂಬರೀನೆಯಲ್ಲಿ ಶೇಖರಿಸಿದ್ದ ಔಷಧ ಮತ್ತು ಆಹಾರ-ವಸ್ತುಗಳು ಸಂಪೂರ್ಣ ಖಾಲಿಯಾಗುವಷ್ಟರಲ್ಲೇ ಅವು ತಲ್ಪಿದ್ದರಿಂದ ಆಸ್ಪತ್ರೆಯ ಸಿಬ್ಬಂದಿಗಳ ಆತಂಕ ಕೊನೆಗೊಂಡಿತು.

ಅಮೆರಿಕಾದಲ್ಲಿ ಡಾ॥ ಶ್ವೈಯಿಟ್ಸರ್‌ಗೆ ನಿರಾಯಾಸವಾಗಿ ಸಹಾಯ ಬರುತ್ತಿದ್ದುದಕ್ಕೆ ಅಲ್ಲಿ ಅವನ ಪರವಾಗಿ ನಡೆಯುತ್ತಿದ್ದ ವೈಯಕ್ತಿಕ ಪ್ರಚಾರಗಳೇ ಕಾರಣವೆಂದು

ಅವನನ್ನು ಟೀಕಿಸುವವರೂ ಇದ್ದರು. ಸಂಗೀತ-ಕಲೆಯಲ್ಲಿ ಪ್ರಾವೀಣ್ಯತೆ ಪಡೆದು ಅವನು ನುಡಿಸಿದ ಸಂಗೀತದ ಧ್ವನಿ-ಮುದ್ರಿಕೆಗಳು ಅಲ್ಲಿ ಎಲ್ಲರ ಮೆಚ್ಚಿಗೆ ಗಳಿಸಿದ್ದವು; ಧಾರ್ಮಿಕ ಹಾಗೂ ತಾತ್ವಿಕ ವಿಷಯಗಳಲ್ಲಿ ಅವನು ತಳೆಯುತ್ತಿದ್ದ ನಿಲುವು ಮತ್ತು ಆ ದಿಸೆಯಲ್ಲಿ ಅವನ ಬರೆಹದ ಸಾಹಿತ್ಯ ಅಲ್ಲಿ ಬಹುಮಂದಿಗೆ ಹಿಡಿಸಿದ್ದವು; ಜೀವನದ ಎಲ್ಲಾ ಸೌಕರ್ಯಗಳನ್ನು ಕಡೆಗಣಿಸಿ ಆಫ್ರಿಕಾದ ಕಾಡಿನಲ್ಲಿ ಅನಾಗರಿಕರ ಸೇವೆಯಲ್ಲಿ ತನ್ನ ಜೀವವನ್ನೇ ಸವೆಸುತ್ತಿದ್ದವನು; ಇಂಥ ಮಹಾನುಭಾವನಿಗೆ ಮತ್ತು ಅವನು ಕೈಕೊಂಡಿದ್ದ ಪವಿತ್ರ ಕಾರ್ಯಗಳಿಗೆ ಧಾರ್ಮಿಕ ಪ್ರವೃತ್ತಿಯ ಜನ ಮುಂದೆ ಬಂದರೆ ಅದನ್ನು ವೈಯಕ್ತಿಕ ಪ್ರಚಾರದಿಂದ ಎಂದು ಹೇಳಲಾಗದು.

ಈ ಸಮಯದಲ್ಲೇ ಯುದ್ಧದ ಕಷ್ಟ ಕೋಟಲೆಗಳ ನಡುವೆ ಅತ್ಯಂತ ರೋಮಾಂಚಕಾರಿ ಸನ್ನಿವೇಶದಲ್ಲಿ ಹೆಲೆನ್ ಯುರೋಪಿನಿಂದ ಹೊರಟು ಒಬ್ಬಂಟಿಯಾಗಿ ಲ್ಯಾಂಬರೀನೆಗೆ ಬಂದು ಸೇರಿದಳು. ಜಿನೀವಾದ ರೆಡ್‌ಕ್ರಾಸ್ ಸಂಸ್ಥೆಯ ನೆರವಿನಿಂದ ಬ್ರಿಟಿಷ್ ಪರವಾನಿಗಿಯನ್ನು ಪಡೆದುಕೊಂಡಿದ್ದಳು. ಕೆಲವು ತಟಸ್ಥ ದೇಶಗಳ ಮೂಲಕ ಆಫ್ರಿಕಾದ ಕಾಡುದಾರಿಗಳಲ್ಲಿ ಮೂರು ತಿಂಗಳು ಪ್ರಯಾಣ ಮಾಡಿದ್ದಳು. ಹಲವು ವರ್ಷಗಳಿಂದ ಕಾಯಿಲೆಯಿಂದ ನರಳಿ ಕೃಶಳಾದ ೬೩ ವರ್ಷದ ಹೆಲೆನ್ ಪರದಾಡಿ ಲ್ಯಾಂಬರೀನೆಯನ್ನು ತಲ್ಪಿದ್ದನ್ನು ನಂಬುವುದು ಅಸಾಧ್ಯವೇ ಸರಿ. ಆಸ್ಪತ್ರೆಯಲ್ಲಿ ಸಿಬ್ಬಂದಿಗಳ ಕೊರತೆಯಿಂದ ತೊಳಲಾಡುತ್ತಿದ್ದ ಸಮಯದಲ್ಲೇ ಹೆಲೆನ್ ಆಗಸ್ಟ್ ೧೯೪೧ರಲ್ಲಿ ಬಂದು ತಲ್ಪಿದಾಗ ಶ್ವೈಯಿಟ್ಸರ್‌ಗೆ ಆದ ಸಂತೋಷ ಅಷ್ಟಿಷ್ಟಲ್ಲ. ಈ ಸಾರಿ ಅವಳ ಆರೋಗ್ಯ ಹಿಂದಿನಂತೆ ಹದಗೆಡಲಿಲ್ಲ. ದಾದಿಯರಿಗೆ ಬಿಡುವು ಕೊಟ್ಟಾಗ ಅವರ ಕೆಲಸವನ್ನು ನಿರ್ವಹಿಸಲು ಆಸ್ಪತ್ರೆಯಲ್ಲಿ ನೆರವಾಗುತ್ತಿದ್ದಳು. ಆಸ್ಪತ್ರೆಯ ಆಡಳಿತದ ವಿಚಾರಗಳು ಮತ್ತು ಪತ್ರ ವ್ಯವಹಾರ ಗಳಿಗೂ ಡಾ॥ ಶ್ವೈಯಿಟ್ಸರ್‌ಗೆ ಸಹಾಯ ಮಾಡುತ್ತಿದ್ದಳು. ಯುದ್ಧ ಕೊನೆಗೊಳ್ಳುವ ವರೆಗೂ ಹೆಲೆನ್ ಲ್ಯಾಂಬರೀನೆಯಿಂದ ಕದಲಲಿಲ್ಲ.

ಮರದ ದಿಣ್ಣೆಗಳನ್ನು ಸಾಗಿಸುವ ಕೆಲಸ ಯುದ್ಧ ಕಾಲದಲ್ಲಿ ಸ್ಥಗಿತಗೊಂಡಿದ್ದರಿಂದ ಕಡಿಮೆ ದರದಲ್ಲಿ ಕೂಲಿಜನರು ಸಿಗುವ ಅವಕಾಶವಿತ್ತು. ತರಕಾರಿ ಮತ್ತು ಹಣ್ಣಿನ ತೋಟಗಳ ವಿಸ್ತರಣೆ, ಆಸ್ಪತ್ರೆ ಕಟ್ಟಡಗಳ ದುರಸ್ತಿಕಾರ್ಯ, ಚರಂಡಿ, ಬೀದಿಗಳನ್ನು ಸರಿಪಡಿಸುವ ಕಾರ್ಯ ಮುಂತಾದ ಕೆಲಸಗಳಲ್ಲಿ ತೊಡಗಿಸಿದ. ಅವರಿಗೂ ಜೀವನ ನಡೆಸುವುದಕ್ಕೆ ಸಹಾಯವಾದಂತಾಯಿತು. ಡಾ॥ ಗೋಲ್ಡ್‌ಶ್ಮಿಡ್ ವಿಶ್ರಾಂತಿಗಾಗಿ ಬೆಲ್ಜಿಯನ್ ಕಾಂಗೋಗೆ ತೆರಳಿದಾಗ ಆಸ್ಪತ್ರೆಯ ಪೂರ್ಣ ಜವಾಬ್ದಾರಿ ಶ್ವೈಯಿಟ್ಸರ್‌ನ ಮೇಲೆ ಬಿತ್ತು. ವಾರದಲ್ಲಿ ಮೂರು ದಿನಗಳನ್ನು ಶಸ್ತ್ರಚಿಕಿತ್ಸೆಗಾಗಿ ಮೀಸಲಿಡ ಬೇಕಾಯಿತು. ಸದಾ ಒಂದಲ್ಲ ಒಂದು ಕೆಲಸದಲ್ಲಿ ನಿರತನಾಗಿರುವುದೇ ತಾನು

ಆರೋಗ್ಯದಿಂದಿರುವದರ ಗುಟ್ಟು ಎಂದು ಶ್ವೈಯಿಟ್ಸರ್ ಆಗಾಗ್ಗೆ ಹೇಳುತ್ತಿದ್ದುದರಲ್ಲಿ ಸತ್ಯವಿದೆಯೆನಿಸದಿರಲಾರದು.

ಯುದ್ಧ ಸಮಯದಲ್ಲೂ ಆಫ್ರಿಕಾದಲ್ಲಿ ಕೆಲವು ಅಭಿವೃದ್ಧಿಯ ಕಾರ್ಯಗಳು ನಡೆಯುತ್ತಲೇ ಇದ್ದವು. ಊರಿಂದೂರಿಗೆ ಸಂಪರ್ಕವನ್ನು ಉತ್ತಮಪಡಿಸಲು ಆಫ್ರಿಕಾದ ಉದ್ದಗಲವನ್ನು ಸೀಳಿಕೊಂಡು ರಸ್ತೆಗಳಾಗುತ್ತಿದ್ದವು. ಆಲ್ಜೀರಿಯಾದಿಂದ ಕೇಪ್‌ಟೌನ್‌ಗೆ ಹೋಗುವ ಹೆದ್ದಾರಿ ಲ್ಯಾಂಬರೀನೆಯ ಮೂಲಕವೇ ಹಾದು ಹೋಯಿತು. ಲ್ಯಾಂಬರೀನೆಗೆ ಸಂಚಾರ-ಸಂಪರ್ಕ ಇನ್ನೂ ಸುಲಭವಾಯಿತು.

ಆ ಸಮಯದಲ್ಲಾದ ರಾಜಕೀಯ ಬದಲಾವಣೆಗಳು ತುಂಬಾ ಗಮನಾರ್ಹ ವಾದುವು. ಚಾರ್ಲ್ಸ್ ಡಿಗಾಲೆ ೧೯೪೪ರಲ್ಲಿ ಆಫ್ರಿಕಾದ ಫ್ರೆಂಚ್ ವಸಾಹತುಗಳ ಮೂಲ ನಿವಾಸಿಗಳಿಗೆ ಫ್ರಾನ್ಸ್‌ನ ನಾಗರಿಕ ಮತ್ತು ಮತದಾನಗಳ ಹಕ್ಕನ್ನು ನೀಡಿ ಎಲ್ಲರನ್ನೂ ಬೆರಗುಗೊಳಿಸಿದನು. ಇದರ ಹಿಂದೆ ಇದ್ದ ರಾಜಕೀಯ ದುರುದ್ದೇಶ ಗಳನ್ನರಿತ ಡಾ॥ ಶ್ವೈಯಿಟ್ಸರ್‌ಗೆ ಈ ಕ್ರಮ ಸರಿಯೆನಿಸಲಿಲ್ಲ. ಅನಕ್ಷರಸ್ಥರೂ, ಅನಾಗರಿಕರೂ ಮತ್ತು ಮತದಾನದ ಮಹತ್ವವನ್ನರಿಯದ ಆಫ್ರಿಕನ್ನರ ಸ್ವಭಾವದ ಅರಿವು ಅವನಿಗಿತ್ತು. ಅವರನ್ನು ಈ ದಿಸೆಯಲ್ಲಿ ತಯಾರುಮಾಡದೇ ಇಂಥ ಗುರುತರ ಜವಾಬ್ದಾರಿಗಳನ್ನು ಈ ಸಮಯದಲ್ಲಿ ನೀಡುವುದರಿಂದ ಅವರಿಗೆ ಉಪಕಾರ ಮಾಡಿದಂತಾಗುವುದಿಲ್ಲ; ಮೂಲಭೂತವಾಗಿ ಅವರಿಗೆ ದೊರೆಯಬೇಕಾಗಿದ್ದು ವ್ಯಾಪಕವಾದ ಅಕ್ಷರ, ಜ್ಞಾನ, ವಿದ್ಯಾಭ್ಯಾಸ, ಕೃಷಿ ಮತ್ತಿತರ ಉದ್ಯೋಗಗಳಲ್ಲಿ ತರಬೇತಿ; ಅವರಲ್ಲಿ ನೆಲಸಿದ್ದ ಸೋಮಾರಿತನದಿಂದ ಎಚ್ಚರವಾದ ನಂತರವೇ ಅವರ ಉದ್ಧಾರ ಸಾಧ್ಯವೆಂಬುದು ಅವನ ಖಚಿತಾಭಿಪ್ರಾಯವಾಗಿತ್ತು. ಮುಂದೆ ಆಫ್ರಿಕಾದ ಹಲವು ಪ್ರಾಂತ್ಯಗಳಿಗೆ ಸಂಪೂರ್ಣ ಸ್ವಾತಂತ್ರ್ಯ ನೀಡುವ ಬಗೆಗೆ ಮಾತುಕತೆಗಳಾ ಗುತ್ತಿದ್ದುದ್ದಾಗಲೂ ಅವನ್ನೂ ಕಟುವಾಗಿ ಟೀಕಿಸಿದವರಲ್ಲಿ ಅವನೇ ಮೊದಲಿಗ. ಯುರೋಪಿಯನ್ನರು ಸಾಕಷ್ಟು ಕಾಲ ಆಫ್ರಿಕನ್ನರನ್ನು ನಿರ್ಬಂಧದಲ್ಲಿರಿಸಿ, ಅಲ್ಲಿನ ಸಂಪತ್ತನ್ನು ದೋಚಿ, ಆ ಜನಾಂಗದವರಿಗೆ ಹಾನಿಯುಂಟುಮಾಡಿದ್ದಾರೆ. ಅವರು ತಮ್ಮನ್ನು ತಾವೇ ಆಳಿಕೊಳ್ಳುವಷ್ಟು ಚತುರರನ್ನಾಗಿ ಮಾಡಲು ವಸಾಹತು ಶಾಹಿಗಳು ಪ್ರಯತ್ನಮಾಡಿಲ್ಲ. ಅಂಥವರಿಗೆ ರಾಜ್ಯಭಾರದ ಹೊಣೆಯನ್ನು ಏಕಾಏಕಿ ಬಿಟ್ಟುಕೊಟ್ಟು ಬಿಳಿಯರು ಕಾಲ್ತೆಗೆದರೆ ವಿನಾಶಕಾರಿ ಶಕ್ತಿಗಳು ತಲೆಯೆತ್ತಿ ಅಲ್ಲಿ ಅನಾಯಕತ್ವ ತಲೆದೋರದಿರಲಾರದು. ಅಲ್ಲಿನ ವಿವಿಧ ಪಂಗಡಗಳ ನಡುವೆ ಮೊದಲೇ ಹೊಡೆದಾಟಗಳಾಗುತ್ತಿದ್ದು, ಇನ್ನೂ ವಿಪರೀತಕ್ಕೆ ಹೋಗಿ ತಮ್ಮ ವಿನಾಶಕ್ಕೆ ಅವರೇ ಕಾರಣರಾಗಬಹುದೆಂಬುದು ಶ್ವೈಯಿಟ್ಸರ್‌ನಿಗಿದ್ದ ಭಯ. ಅವರನ್ನು ನಾಗರಿಕ ಹಾಗೂ ಜವಾಬ್ದಾರಿಯುತ ಜೀವನಕ್ಕೆ ಹಂತಹಂತವಾಗಿ ತಯಾರುಮಾಡಿ ನಂತರ

ಸಂಪೂರ್ಣ ಸ್ವಾತಂತ್ರ್ಯ ನೀಡುವುದು ಸರಿಯಾದ ಮಾರ್ಗವೆಂಬುದು ಅವನ ಅಭಿಪ್ರಾಯ. ಆದರೆ ಈ ಅಭಿಪ್ರಾಯಕ್ಕೆ ಪುರಸ್ಕಾರ ನೀಡುವವರಾರೂ ಆಗ ಇರಲಿಲ್ಲ. ಬದಲಾಗಿ ಶ್ವೈಯಿಟ್ಸರ್‌ನ ಇಂಥ ''ಪ್ರಗತಿ-ವಿರೋಧಿ'' ಧೋರಣೆ ಕಟುವಾದ ಟೀಕೆಗೊಳಗಾಯಿತು. ಕೆಲವು ಆಫ್ರಿಕಾದ ಮುಂದಾಳುಗಳ ಕೋಪಕ್ಕೊಳಗಾಗಿ, ಅವನ ಜನಪ್ರಿಯತೆಯೂ ಸ್ವಲ್ಪ ಮಟ್ಟಿಗೆ ಇಳಿಮುಖವಾಯಿತು.

ಬಹಳ ಕಾಲದಿಂದ ಎಳೆಯುತ್ತಿದ್ದ ಯುದ್ಧ ೧೯೪೫ರ ಆದಿಯಲ್ಲಿ ಒಂದು ನಿರ್ಣಾಯಕ ಘಟ್ಟದತ್ತ ಸಾಗುವಂತಿತ್ತು. ಫ್ರಾನ್ಸ್ ಮತ್ತು ಜರ್ಮನಿಗಳೆರಡೂ ಆಲ್‌ಸೇಶ್‌ನ ಸುತ್ತ ಹಿಂಗಾಪು ಕದನದಲ್ಲಿ ತೊಡಗಿದ್ದವು. ಬ್ರಿಟನ್ನಿನ ಹಲವು ನಗರಗಳ ಮೇಲೆ ಹಿಟ್ಲರ್‌ನ ಬಾಂಬ್‌ದಾಳಿ ಅವ್ಯಾಹತವಾಗಿ ನಡೆಯುತ್ತಲಿದ್ದು, ಕಷ್ಟಕೋಟಲೆಗಳ ನಡುವೆ ಇಂಗ್ಲೆಂಡ್ ಸಿಲುಕಿತ್ತು. ಆದರೂ ಬ್ರಿಟನ್ ಡಾ॥ ಶ್ವೈಯಿಟ್ಸರ್‌ನ ೭೦ನೇ ಜನ್ಮದಿನವನ್ನು ಮರೆಯಲಿಲ್ಲ. ಲಂಡನ್ನಿನ ಪ್ರಮುಖ ವೃತ್ತಪತ್ರಿಕೆಗಳು ಅವನ ಬಗೆಗೆ ಹಲವಾರು ಲೇಖಗಳನ್ನು ಪ್ರಕಟಿಸಿದವು. ಅವನೊಬ್ಬ ಸಹೋದರತ್ವ-ಧರ್ಮದ ರೂವಾರಿ, ಇಪ್ಪತ್ತನೇ ಶತಮಾನದ ಸಂತಶ್ರೇಷ್ಠ ಎಂದೆಲ್ಲಾ ಹಾಡಿ ಹೊಗಳಿದವು. ಬ್ರಿಟನ್ನಿನ ಬಾನುಲಿ-ಬಿಬಿಸಿ, ವಿಶೇಷ ಕಾರ್ಯಕ್ರಮವನ್ನು ಏರ್ಪಡಿಸಿ ಶ್ವೈಯಿಟ್ಸರ್‌ನ ಸಂಗೀತದ ಮುದ್ರಿಕೆಗಳನ್ನು ಬಿತ್ತರಿಸಿ ಧಾರ್ಮಿಕ ತಾತ್ವಿಕ ನಂಬಿಕೆ ಮತ್ತು ಬರೆದ ಗ್ರಂಥಗಳ ಬಗೆಗೆ ಭಾಷಣ ಬಿತ್ತರಿಸಿತು. ಆಫ್ರಿಕಾದ ಅರಣ್ಯದಲ್ಲಿ ನಡುರಾತ್ರಿ ಎಚ್ಚರವಾಗೇ ಇದ್ದ ಡಾ॥ ಶ್ವೈಯಿಟ್ಸರ್‌ಗೆ ಜನ್ಮದಿನ ಶುಭಾಶಯ ಕಳುಹಿಸಿತು. ತನ್ನ ಬಗೆಗೆ ದೂರದ ಲಂಡನ್ನಿನಿಂದ ಬಿತ್ತರವಾದ ಹೊಗಳಿಕೆಯ ಕಾರ್ಯಕ್ರಮವನ್ನು ರೇಡಿಯೋದಲ್ಲಿ ಕೇಳಿ ಪುಲಕಿತನಾದರೂ, ತನ್ನ ಜೀವಮಾನದ ಏಳು ದಶಕಗಳು ಹೇಗೆ ಕಳೆದವೆಂಬುದರ ಅರಿವೇ ಅವನಿಗಿರಲಿಲ್ಲವಂತೆ. ಸಾಕಷ್ಟು ಸಾಧಿಸಿದ್ದರೂ ಇನ್ನೂ ಸಾಧಿಸುವುದು ಬೇಕಾದಷ್ಟಿದೆಯೆಂಬ ಉದ್ಗಾರದ ಜತೆಗೆ, ಮರುದಿನ ಮುಂಜಾನೆಯ ತುರ್ತು ಕೆಲಸದ ಜ್ಞಾಪಕವಾಗಿ ಬೇಗ ಮಲಗಿದ, ನಡುರಾತ್ರಿಯ ನಂತರ !. ಯುರೋಪಿಗೆ ತುರ್ತಾಗಿ ಕಳುಹಿಸಬೇಕಾದ ಪತ್ರಗಳನ್ನು ಬರೆದು ಮುಗಿಸಲು ಡಾ॥ ಶ್ವೈಯಿಟ್ಸರ್ ೧೯೪೫ರ ಮೇ ತಿಂಗಳ ಏಳರಂದು ಮಧ್ಯಾಹ್ನ ತನ್ನ ಕುಟೀರದಲ್ಲಿ ಕಾರ್ಯನಿರತನಾಗಿದ್ದ. ಕೈಯಲ್ಲಿ ರೇಡಿಯೋ ಹಿಡಿದ ಬಿಳೀ ರೋಗಿಯೊಬ್ಬ ಅವನಿದ್ದಲ್ಲಿಗೆ ಓಡಿಬಂದು, ಯುರೋಪಿನಲ್ಲಿ ಯುದ್ಧ ಸ್ಥಗಿತವಾದ ಸುದ್ದಿ ಬಿತ್ತರ ವಾಯಿತೆಂದು ಕೂಗಿ ಹೇಳಿದ. ಅತ್ಯಂತ ಹರ್ಷ ತರುವಂಥ ಸುದ್ದಿ ಅದಾಗಿದ್ದರೂ ಪತ್ರಗಳನ್ನು ಬರೆದು ಮುಗಿಸುವವರೆಗೂ ಅವನಿಗಾಗಬೇಕಿದ್ದ ಸಂತಸ ವ್ಯಕ್ತವಾಗಲೇ ಇಲ್ಲ. ಸ್ವಲ್ಪ ಸಮಯದಲ್ಲೇ ಆಸ್ಪತ್ರೆಯ ದೊಡ್ಡ ಘಂಟಾನಾದ ಎಲ್ಲ ಕಡೆ ಮೊಳಗಿತು. ಆಸ್ಪತ್ರೆಯ ಸಿಬ್ಬಂದಿಗಳು, ರೋಗಿಗಳೇ ಅಲ್ಲದೆ ಆ

ವಸಾಹತಿನಲ್ಲಿದ್ದವರೆಲ್ಲರೂ ಅಲ್ಲಿ ನೆರೆದರು. ಕೆಲಸದ ಗುಂಗಿನಲ್ಲೇ ಇದ್ದ ಶ್ವೈಯಿಟ್ಸರ್ ಕೇವಲ ಯಾಂತ್ರಿಕವಾಗಿ ಯುದ್ಧ ಕೊನೆಗೊಂಡ ವಿಷಯ ಪ್ರಕಟಪಡಿಸಿದ. ಮಿಕ್ಕವರೆಲ್ಲಾ ಸಂತಸಗೊಂಡಂತೆ ಕಂಡರೂ ಅವನು ಹರ್ಷಿತನಾದ ಹಾಗೆ ಕಾಣಲಿಲ್ಲ. ಬಳಲಿದ ಕಾಲುಗಳನ್ನು ಎಳೆದುಕೊಂಡು ತರಕಾರಿಯ ತೋಟದಲ್ಲಿ ತುರ್ತಾಗಿ ಆಗಲೇಬೇಕಾಗಿದ್ದ ಕೆಲಸಗಳನ್ನು ಮುಗಿಸಲು ಆ ಕಡೆ ಹೋದ.

ದಿನದ ಕೆಲಸ ಮುಗಿದು ಸಾಯಂಕಾಲ ತನ್ನ ಕುಟೀರಕ್ಕೆ ಹಿಂದಿರುಗಿದ ನಂತರವೇ ಯುದ್ಧ ಮುಗಿದುದರ ಪರಿಣಾಮಗಳನ್ನು ಯೋಚಿಸಲು ಪುರುಸೊತ್ತಾದುದು, ಮತ್ತೆ ಅದರ ಆನಂದವನ್ನು ಅನುಭವಿಸಿದ್ದು. ಮುಂದೆ ಆಗಸ್ಟ್ ಆರರಂದು ಜಪಾನಿನ ಹಿರೋಷಿಮಾ, ಮತ್ತೆರಡು ದಿನಗಳ ನಂತರ ನಾಗಾಸಾಕಿಯ ಮೇಲೆ ಮಾನವ ನಿರ್ಮಿತ ಅತ್ಯಂತ ವಿನಾಶಕಾರಿ ಅಣು-ಬಾಂಬುಗಳು ಉರುಳಿದವು. ಯುದ್ಧ ಮುಗಿದಾಗಿನ ಆನಂದ ಈಗ ಅವನನ್ನು ದುಃಖಸಾಗರದಲ್ಲಿ ಮುಳುಗಿಸಿತು. ದೈವ ನಿಯಾಮಿತ ಸಕಲ ಜೀವ ಜಂತುಗಳನ್ನೂ ಗೌರವ ಆದರಗಳಿಂದ ನೋಡಬೇಕೆಂದು ಅವನೇ ನಿರೂಪಿಸಿದ್ದ ಜೀವೋಪಾಸನಾ-ತತ್ವಕ್ಕೆ ಅವನ ಜೀವಿತಕಾಲದಲ್ಲೇ ಮಾನವನೊಡ್ಡಿದ ಸವಾಲು ದಿಗ್ಭ್ರಮೆಗೊಳಿಸಿತು, ಅವನು ಪರಿತಾಪವನ್ನು ಹೊರಗೆಡಹಲಾರದ ಮೂಕನಂತಾದ.

ಬಹಳ ದಿನಗಳಿಂದ ನಿರೀಕ್ಷಿಸುತ್ತಿದ್ದ ಯುದ್ಧ ಕೊನೆಗೊಂಡಿದ್ದು ಲ್ಯಾಂಬರೀನೆಯ ವಾಸಿಗಳಿಗೆ ಹರ್ಷವನ್ನುಂಟುಮಾಡಿತು. ಹಾಗೇ ಲ್ಯಾಂಬರೀನೆಗೆ ಬಂದು ಸೇವೆ ಸಲ್ಲಿಸಲು ಕಾತುರದಿಂದ ಯುರೋಪಿನಲ್ಲಿ ಕಾಯುತ್ತಿದ್ದ ಸಿಬ್ಬಂದಿ-ವರ್ಗದವರಿಗೂ ಹರ್ಷವನ್ನುಂಟುಮಾಡಿತು. ಒಂದು ಕಡೆಯಿಂದ ಇನ್ನೊಂದು ಕಡೆಗೆ ಪ್ರಯಾಣ ಮಾಡಲು ಪರವಾನಿಗೆಗಳು ಸಿಗುವುದು ಕಷ್ಟಕರವಾಗಿದ್ದರೂ, ಮೊದಲು ಲ್ಯಾಂಬರೀನೆಯಲ್ಲಿ ಕೆಲಸ ಮಾಡಿದ್ದ ಕೆಲವರು ದಾದಿಯರು ಕೂಡಲೇ ಧಾವಿಸಿಬಂದರು. ಆದರೆ ಕೆಲವು ವೈದ್ಯರಿಗೆ ಪರವಾನಗಿ. ಸಿಗದೆ ಅವರೆಲ್ಲ ಬರಲಾಗಲಿಲ್ಲ. ಯುದ್ಧ ಸಮಯದ ನಾಲ್ಕುವರೆ ವರ್ಷಗಳು ಲ್ಯಾಂಬರೀನೆ ಯಲ್ಲಿದ್ದುಕೊಂಡ. ಸಹಾಯ ಮಾಡುತ್ತಿದ್ದ ಹೆಲೆನ್‌ಗೆ ಈಗ ಯುರೋಪಿಗೆ ಹಿಂದಿರುಗಲು ಸಾಧ್ಯವಾಯಿತು. ಆದರೆ ಆಫ್ರಿಕಾದ ಉರಿಸೆಕೆಯ ವಾತಾವರಣದಲ್ಲಿ ಎಂಟು ವರ್ಷಗಳನ್ನು ಕಳೆದ ಡಾ॥ ಶ್ವೈಯಿಟ್ಸರ್‌ಗೆ ಮಾತ್ರ ಕೆಲಸದ ಒತ್ತಡ ಮತ್ತು ವೈದ್ಯರ ಕೊರತೆಯಿಂದ ಅವಕಾಶ ಒದಗಿಬರಲಿಲ್ಲ. ಅದಕ್ಕಾಗಿ ಇನ್ನೂ ಒಂದು ವರ್ಷ ಕಾಯಬೇಕಾಯಿತು.

ಯುದ್ಧಾನಂತರ ಆಸ್ಪತ್ರೆಯ ಕೆಲಸಕಾರ್ಯಗಳು ಸುಗಮವಾಗಬಹುದೆಂಬ ಶ್ವೈಯಿಟ್ಸರ್‌ನ ನಿರೀಕ್ಷೆ ಹುಸಿಯಾಯಿತು. ಸಂಪನ್ಮೂಲಗಳ ಕೊರತೆಯಿಂದ

ರೋಗಿಗಳ ಔಷಧೋಪಚಾರಗಳ ಖರ್ಚು-ವೆಚ್ಚಗಳನ್ನು ನಿಭಾಯಿಸುವುದು ಇನ್ನೂ ಕಷ್ಟವೆನಿಸಿತು. ಅಲ್ಲಿಯ ರಾಜಕೀಯ ಪರಿಸ್ಥಿತಿಯು ಬದಲಾಗಿ ಗೇಬನ್‌ಗೆ ಸ್ವಯಂ ಆಡಳಿತದ ಅವಕಾಶ ದೊರೆಯಿತು. ಈಗ ಅವರೆಲ್ಲಾ ಸಂಪೂರ್ಣ ಫ್ರೆಂಚ್ ನಾಗರಿಕರೆಂದು ಪರಿಗಣಿಸಲ್ಪಟ್ಟರು. ತಮ್ಮ ಪ್ರತಿನಿಧಿಗಳನ್ನು ತಾವೇ ಆರಿಸಿಕೊಂಡು ಸರ್ಕಾರ ರಚನೆ ಮಾಡಿದರು. ಹಲವು ವರ್ಷಗಳಿಂದ ಶೋಷಣೆ, ದಬ್ಬಾಳಿಕೆ ಮತ್ತು ಗುಲಾಮಗಿರಿಯಿಂದ ಬೇಸತ್ತ ಆಫ್ರಿಕನ್ನರ ಮುಂದಾಳುಗಳಲ್ಲಿ ಕೆಲವರು, ಬಿಳಿಯರೆಲ್ಲಾ ಆಫ್ರಿಕಾವನ್ನು ಬಿಟ್ಟು ಹೊರಡಬೇಕೆಂಬ ನಿಲುವು ತಾಳಿದ್ದರು. ಬಹುಪಾಲು ಬಿಳಿಯರು ಅಲ್ಲಿ ಮುಂದುವರಿದು ಜೀವಿಸುವುದು ದುಸ್ತರವೆನಿಸಿದರೂ, ಡಾ॥ ಶ್ವೈಯಿಟ್ಸರ್ ಅಲ್ಲಿದ್ದುಕೊಂಡು ತನ್ನ ಸೇವೆಯನ್ನು ಮುಂದುವರಿಸಿಕೊಂಡು ಹೋಗುವುದರಲ್ಲಿ ಅವರ ಅಭ್ಯಂತರವಿರಲಿಲ್ಲ. ಇತರೆಯವರು ಹೊರಡದಿದ್ದರೆ ಅವರ ಗಂಟಲು ಸೀಳುವುದಾಗಿ ಬೆದರಿಕೆ ಹಾಕುವವರೂ ಇದ್ದರಂತೆ! ಆಫ್ರಿಕನ್ನರು ರಾಜಕೀಯ ಆಡಳಿತ ಜವಾಬ್ದಾರಿಯನ್ನು ನಿರ್ವಹಿಸಲು ಪರಿಪಕ್ವವಾಗಿ ರೂಪುಗೊಂಡಿಲ್ಲವೆಂದು ಡಾ॥ ಶ್ವೈಯಿಟ್ಸರ್ ಆಗಾಗ್ಗೆ ಹೇಳುತ್ತಿದ್ದುದಕ್ಕೆ ಇದಕ್ಕಿಂತ ಉತ್ತಮ ನಿದರ್ಶನವಿದ್ದಿರಲಾರದು.

ಗೇಬನ್‌ಗೆ ಸ್ವಯಂ ಆಡಳಿತಾಧಿಕಾರ ಪ್ರಾಪ್ತವಾಗುತ್ತಿದ್ದಂತೆ ಸ್ಥಳೀಯ ಕಾನೂನುಗಳು ರೂಪುಗೊಂಡವು. ಈ ಕಾನೂನುಗಳನ್ವಯವಾಗಿ ಆಸ್ಪತ್ರೆಯ ಪ್ರತಿಯೊಂದು ಕಾರ್ಯಕ್ರಮ ಮತ್ತು ಆಗುಹೋಗುಗಳಿಗೆ ಸರಿಯಾದ ಲೆಕ್ಕಪತ್ರ, ಮತ್ತು ದಾಖಲಾತಿಗಳನ್ನು ಇಡುವುದು ಕಡ್ಡಾಯವಾಯಿತು. ಮಿತವ್ಯಯದ ದೃಷ್ಟಿಯಿಂದ ಶ್ವೈಯಿಟ್ಸರ್ ಆಸ್ಪತ್ರೆಯ ದಾಖಲಾತಿ, ಲೆಕ್ಕ ಪತ್ರಗಳನ್ನು ಯಾವುದೋ ನಿರ್ದಿಷ್ಟ ನಮೂನೆಯ ಕಾಗದ ಅಥವಾ ಪುಸ್ತಕಗಳಲ್ಲಿಡುತ್ತಿರಲಿಲ್ಲ. ಸಿಕ್ಕಿದ ಚೂರುಪಾರು ಕಾಗದಗಳಲ್ಲೇ ದಾಖಲೆ ಬರೆಯುವುದು ವಾಡಿಕೆಯಾಗಿತ್ತು. ಈಗ ಅವುಗಳನ್ನು ನಿಗದಿ ಪಡಿಸಿದ ನಮೂನೆಯ ಫಾರಂ ಮತ್ತು ಪುಸ್ತಕಗಳಲ್ಲಿ ಬರೆದಿಟ್ಟು ಸರ್ಕಾರದವರು ಇಚ್ಛಿಸಿದಾಗ ತೋರಿಸಬೇಕೆಂಬ ನಿಯಮವೇರ್ಪಟ್ಟಿತು. ಆಸ್ಪತ್ರೆಯ ನಿತ್ಯದ ಕೆಲಸಗಳ ಜತೆಗೆ ಶ್ವೈಯಿಟ್ಸರ್ ಈಗ ಇಂಥ ಬರವಣಿಗೆಯ ಕಡೆಗೂ ಅವನೇ ಸ್ವತಃ ಗಮನ ಕೊಡಬೇಕಾಯಿತು. ಹೊಸ ಸರ್ಕಾರದ ನಿಯಮಗಳ ಪ್ರಕಾರ ಲ್ಯಾಂಬರೀನೆಯಲ್ಲಿ ಆಸ್ಪತ್ರೆಯನ್ನು ಮುಂದುವರಿಸಿಕೊಂಡು ಹೋಗಬೇಕಾದರೆ ಈ ಕ್ರಮಗಳನ್ನು ಸರಿಯಾದ ರೀತಿಯಲ್ಲಿ ಜರುಗಿಸಲೇಬೇಕಾಗಿತ್ತು. ಬಹುಪಾಲು ಆಡಳಿತಗಾರರು ಮತ್ತು ಅಧಿಕಾರಿಗಳಿಗೆ ಡಾ॥ ಶ್ವೈಯಿಟ್ಸರ್ ಮತ್ತು ಅವನ ಆಸ್ಪತ್ರೆಯ ಬಗೆಗೆ ಒಳ್ಳೆಯ ಅಭಿಪ್ರಾಯವಿತ್ತಾದರೂ, ಸ್ವಪ್ರತಿಷ್ಠೆಯಿಂದ ಮೆರೆಯುತ್ತಿದ್ದ ಕೆಲವರ ಬೆದರಿಕೆ ತಪ್ಪಿರಲಿಲ್ಲ.

ಯುದ್ಧ ಮುಗಿದ ನಂತರ ಆಸ್ಪತ್ರೆಯ ಭವಿಷ್ಯ ಡೋಲಾಯಮಾನ ಸ್ಥಿತಿಗೆ ಬರಲು ಆಗಿನ ಆರ್ಥಿಕ ಪರಿಸ್ಥಿತಿಯೂ ಪ್ರಮುಖ ಕಾರಣ. ಯುದ್ಧ ಸಮಯದಲ್ಲಿ ದೊರೆಯುತ್ತಿದ್ದ ಹೊರಗಿನ ಸಹಾಯ ಬಹಳಷ್ಟು ಕಡಿಮೆಯಾಗಿದ್ದುದರಿಂದ ಶ್ವೈಟ್ಸರ್ ಬ್ಯಾಂಕುಗಳಲ್ಲಿ ಸಾಲಮಾಡಿದ್ದನು. ಯುರೋಪಿನಿಂದ ಬರುತ್ತಿದ್ದ ಸಹಾಯ ಸಂಪೂರ್ಣವಾಗಿ ನಿಂತುಹೋಗಿತ್ತು. ಅಮೆರಿಕಾದಲ್ಲಿ ''ಆಲ್ಬರ್ಟ್ ಶ್ವೈಟ್ಸರ್ ಸ್ನೇಹಕೂಟ'' (ALBERT SCHWEITZER FELLOWSHIP) ಎಂಬ ಸಂಸ್ಥೆಯೊಂದು ಸ್ಥಾಪನೆಯಾಗಿತ್ತು. ಅಮೆರಿಕಾದ್ಯಂತ ವಂತಿಗೆಯನ್ನು ಎತ್ತಿ ಲ್ಯಾಂಬರೀನೆಗೆ ಸಹಾಯ ಒದಗಿಸಲು ಅವರು ಪ್ರಯತ್ನಿಸುತ್ತಿದ್ದರು. ಸ್ನೇಹ-ಕೂಟದ ಅಧ್ವರ್ಯುಗಳಾದ ಎಮೆರಿ ರಾಸ್ ಎಂಬ ಮಾಜಿ ಮಿಷನರಿಯವರಿಗೂ ಶ್ವೈಟ್ಸರ್‌ನ ಸ್ವತಃ ಪರಿಚಯವಿರಲಿಲ್ಲ. ಅಮೆರಿಕಾದ ಜನಸಾಮಾನ್ಯರಲ್ಲೂ ಶ್ವೈಟ್ಸರ್‌ನ ಮಾನವೀಯ ಕಾರ್ಯಗಳ ಬಗೆಗೆ ಆಗಿನ್ನೂ ಹೆಚ್ಚಿನ ಪ್ರಚಾರವಿರದಿದ್ದುದರಿಂದ, ಹೆಚ್ಚು ಧನಸಹಾಯ ಮಾಡಲು ಮುಂದೆಬರುವವರೂ ಅಷ್ಟಿರಲಿಲ್ಲ. ಯುದ್ಧ ಮುಗಿದ ನಂತರ ಶ್ವೈಟ್ಸರ್‌ನ ಸೇವಾ ಕಾರ್ಯಗಳನ್ನು ಪರಿಚಯ ಮಾಡಿಕೊಳ್ಳಲು ಎಲ್ಲರಿಗಿಂತ ಮೊದಲು ಲ್ಯಾಂಬರೀನೆಗೆ ಧಾವಿಸಿದವರೆಂದರೆ ಎಮೆರಿ ರಾಸ್ ಮತ್ತು ಅವರ ಪತ್ನಿ.

ರಾಸ್ ದಂಪತಿಗಳು ಲ್ಯಾಂಬರೀನೆಯಲ್ಲಿ ಕೆಲ ಸಮಯ ತಂಗಿದ್ದು ಅಲ್ಲಿ ಡಾ॥ ಶ್ವೈಟ್ಸರ್ ನಡೆಸುತ್ತಿದ್ದ ಮಾನವೀಯ ಸೇವೆಯ ಪ್ರತ್ಯಕ್ಷದರ್ಶನ ಮಾಡಿಕೊಂಡರು. ಅವರು ಅಮೆರಿಕೆಗೆ ಹಿಂದಿರುಗಿದ ನಂತರ ವ್ಯಾಪಕ ಪ್ರಚಾರ ನಡೆಸಿ ಮೊದಲಿಗಿಂತ ಹೆಚ್ಚಿನ ಸಹಾಯವನ್ನು ಕಳುಹಿಸುವುದರಲ್ಲಿ ಯಶಸ್ವಿಯಾದರು. ಆದರೆ ಯುದ್ಧಾನಂತರದ ಬೆಲೆ ಏರಿಕೆ ಆಸ್ಪತ್ರೆಯ ಖರ್ಚು-ವೆಚ್ಚಗಳನ್ನು ಇನ್ನೂ ಗಗನಕ್ಕೇರಿಸಿತು. ಶ್ವೈಟ್ಸರ್ ಮತ್ತೆ ಸಾಲ ಮಾಡಬೇಕಾಯಿತು. ೧೯೪೭ರ ಬೇಸಿಗೆಯ ಸಮಯಕ್ಕೆ ಬ್ಯಾಂಕಿನಿಂದ ಪ್ರತಿ ತಿಂಗಳು ಸಾವಿರಗಟ್ಟಲೆ ಫ್ರಾಂಕುಗಳನ್ನು ಎರವಲು ಪಡೆಯಬೇಕಾಗುತ್ತಿತ್ತು. ಬಹುಶಃ ಆಸ್ಪತ್ರೆಯನ್ನು ಮುಂದುವರಿಸಿಕೊಂಡು ಹೋಗುವುದು ಅಸಾಧ್ಯವೆಂಬ ನಿರ್ಧಾರಕ್ಕೆ ಶ್ವೈಟ್ಸರ್ ಬರಲೇಬೇಕಾಯಿತು. ಬ್ಯಾಂಕಿನ ಸಾಲವನ್ನು ತೀರಿಸುವ ವಿಧಿ-ವಿಧಾನ ಚರ್ಚಿಸಲು ಒಂದು ದಿನ ತನ್ನ ದಾಖಲೆಗಳ ಸಮೇತ ಹೊರಡುವುದರಲ್ಲಿದ್ದ. ಆ ದಿನವೇ ಅಮೆರಿಕೆಯಿಂದ ಡಾ॥ ಚಾರ್ಲ್ಸ್ ಜಾಯ್ ಮತ್ತು ಮೆಲ್ವಿನ್ ಅರ್ನಾಲ್ಡ್ ಎಂಬ ಪತ್ರಿಕಾ-ಪ್ರತಿನಿಧಿಗಳು ಲ್ಯಾಂಬರೀನೆಗೆ ಬಂದರು. ಅಮೆರಿಕಾದಲ್ಲಿ ''ಯುನಿಟೇರಿಯನ್ ಸರ್ವಿಸ್ ಕಮಿಟಿ'' ಎಂಬ ಧಾರ್ಮಿಕ ಸಂಸ್ಥೆಯವರು ಹೊರಡಿಸುತ್ತಿದ್ದ ''ಕ್ರಿಶ್ಚಿಯನ್ ರಿಜಿಸ್ಟರ್'' ಎಂಬ ಪತ್ರಿಕೆಯ ಪ್ರತಿನಿಧಿಗಳಾಗಿದ್ದವರು, ಜತೆಯಲ್ಲಿ ತಂದಿದ್ದ ನಾಲ್ಕು

ಸಾವಿರ ಡಾಲರುಗಳ ಚೆಕ್ಕನ್ನು ಶ್ವೈಯಿಟ್ಸರ್‌ಗೆ ಆ ದಿನವೇ ನೀಡಿ ಅವನು ನೆಮ್ಮದಿಯಿಂದ ಉಸಿರಾಡುವಂತೆ ಮಾಡಿದರು. ಆಸ್ಪತ್ರೆಗೆ ಮಾಡಿದ್ದ ಸಾಲವನ್ನು ತೀರಿಸಲು ಆ ಮೊಬಲಗು ಸಾಕಾಗುತ್ತಿದ್ದುದಲ್ಲದೆ, ಆಸ್ಪತ್ರೆಯನ್ನು ಕೆಲವು ಸಮಯ ಮುಂದುವರಿಸಲೂ ಸಾಕಾಗುವಷ್ಟಿತ್ತು.

ಡಾ॥ ಜಾಯ್ ಮತ್ತು ಆರ್ನಾಲ್ಡ್‌ರ ಭೇಟಿಯಿಂದ ಆಸ್ಪತ್ರೆ ಮತ್ತೆ ಚೇತರಿಸಿ ಕೊಳ್ಳುವುದಕ್ಕೆ ಬಹಳಷ್ಟು ಸಹಕಾರಿಯಾಯಿತು. ಅವರಿಬ್ಬರೂ ಆಸ್ಪತ್ರೆಯ ಇತಿಹಾಸ ಬೆಳವಣಿಗೆ, ಅದರಿಂದ ಆಫ್ರಿಕಾದ ನಿರ್ಗತಿಕ ಹಾಗೂ ಮುಗ್ಧ ನೀಗ್ರೋಗಳಿಗಾದ ಉಪಕಾರಗಳ ವಿವರಗಳನ್ನು ಸಂಗ್ರಹಿಸಿದರು. ಜತೆಗೆ ಡಾ॥ ಶ್ವೈಯಿಟ್ಸರ್‌ನ ಜೀವನ, ಧಾರ್ಮಿಕ, ಮತ್ತು ಸಂಗೀತದ ಕ್ಷೇತ್ರಗಳಲ್ಲಿನ ವಿದ್ವತ್ತು ಹಾಗೂ ಮಾಡುತ್ತಿದ್ದ ನಿಸ್ವಾರ್ಥ ಮಾನವೀಯ ಸೇವೆಯ ಪ್ರತ್ಯಕ್ಷ ದರ್ಶನವೂ ಆಯಿತು. ಬೋಸ್ಟನ್ನಿಗೆ ಹಿಂದಿರುಗಿದ ನಂತರ ''ಕ್ರಿಶ್ಚಿಯನ್ ರಿಜಿಸ್ಟರ್'' ಪತ್ರಿಕೆಯ ವಿಶೇಷ ಸಂಚಿಕೆಯನ್ನು ಸೆಪ್ಟೆಂಬರ್ ೧೯೪೭ರಲ್ಲಿ ಹೊರತಂದರು. ಅದರಲ್ಲಿ ಲ್ಯಾಂಬರೀನೆಯಲ್ಲಿ ಡಾ॥ ಶ್ವೈಯಿಟ್ಸರ್ ನಡೆಸುತ್ತಿದ್ದ ''ಪವಾಡ''ವನ್ನು ಹೊರ ಜಗತ್ತಿಗೆ ಪರಿಚಯಿಸಿದ್ದರು. ಇದರಿಂದ ಶ್ವೈಯಿಟ್ಸರ್‌ನ ಕೀರ್ತಿ ಅಮೆರಿಕಾದ್ಯಂತ ಹರಡಲು ಅನುಕೂಲವಾಯಿತು. ಇದಕ್ಕೂ ಮೊದಲೇ ಕ್ಯಾಥೋಲಿಕ್ ಪಂಗಡದ ಪಾದ್ರಿಯೊಬ್ಬರು ಈ ಮಹಾನ್ ಪ್ರಾಟೆಸ್ಟೆಂಟ್‌ನ ಸಾಧನೆಗಳನ್ನು ಪ್ರತಿಷ್ಠಿತ ರೀಡರ್ಸ್ ಡೈಜೆಸ್ಟ್ ಮಾಸ ಪತ್ರಿಕೆಯಲ್ಲಿ - ''ದೇವರ ಉತ್ಸಾಹೀ ಹುಚ್ಚ!'' - ಕ್ಯಾಥೋಲಿಕ್ ಪುರೋಹಿತ ಹೇಳಿದ ಮಹಾನ್ ಪ್ರೊಟೆಸ್ಟೆಂಟ್‌ನೊಬ್ಬನ ಕತೆ - (GODS EAGER FOOL - THE STORY OF A GREAT PROTESTENT, TOLD BY A CATHOLIC PRIEST) ಎಂಬ ಲೇಖನ ಸಾದರಪಡಿಸಿದ್ದರು. ಇನ್ನೊಬ್ಬ ಧರ್ಮಗುರು ''ಆಲ್ಬರ್ಟ್ ಶ್ವೈಯಿಟ್ಸರ್, ಕ್ರೈಸ್ತ ಜಗತ್ತಿನ ಮಹಾನ್ ಆತ್ಮ'' ಎಂದು ಬಣ್ಣಿಸಿದ್ದರು. ಯುರೋಪಿನಲ್ಲಿ ಆ ಸಮಯದಲ್ಲಿ ನಡೆದ ಜನಾಭಿಪ್ರಾಯ ಸಂಗ್ರಹಣೆಯೊಂದರಲ್ಲಿ ಆಲ್ಬರ್ಟ್ ಶ್ವೈಯಿಟ್ಸರರು ಗಯಟೆ ಮತ್ತು ಲಿಯೊನಾರ್ಡೊ ಡವಿಂಚಿಯಂಥವರ ಸರಿಸಮಾನ ವ್ಯಕ್ತಿಯೆಂಬ ಅಭಿಪ್ರಾಯ ಮೂಡಿಬಂದಿತ್ತು. ಅತ್ಯಂತ ಜನಪ್ರಿಯ ಹಾಗೂ ಅಧಿಕ ಪ್ರಸಾರವಿದ್ದ ಅಮೆರಿಕಾದ 'ಲೈಫ್' ಪತ್ರಿಕೆ ಅಕ್ಟೋಬರ್ ೧೯೪೭ರ ಸಂಚಿಕೆಯಲ್ಲಿ ''ಪ್ರಪಂಚದ ಮಹೋನ್ನತ ವ್ಯಕ್ತಿ'' (THE GREATEST MAN IN THE WORLD- THAT IS WHAT SOME PEOPLE CALL ALBERT SCHWEITZER) ಎಂದು ವಿಶೇಷ ಲೇಖನ ಪ್ರಕಟಿಸಿ ಹಾಡಿ ಹೊಗಳಿತು. ಇಲ್ಲಿಂದ ಮುಂದೆ ಡಾ॥ ಶ್ವೈಯಿಟ್ಜರ್‌ನ ಹೊಗಳಿಕೆ ಮತ್ತು ಪ್ರಚಾರದ ಹೊಳೆಯು ಪ್ರವಾಹ ಉಕ್ಕಿ ಹರಿಯಿತು. ಜೀವಮಾನವನ್ನೆಲ್ಲಾ ಲ್ಯಾಂಬರೀನೆಯ ಕಾಡಿನಲ್ಲಿ ಕಳೆದು ಸುಕ್ಕುಗಟ್ಟಿದ

ಮುಖ ಮತ್ತು ಒರಟು ಬಿಳೀ ತಲೆ-ಕೂದಲಿನ ಮುದುಕನ ಚಿತ್ರ ಪ್ರಪಂಚಾದ್ಯಂತ ಗುರುತಿಸಲ್ಪಡುವಂತಾಯಿತು. ಇಂತಹ ಸಂತನೊಬ್ಬನ ಉಗಮವನ್ನು ಇಡೀ ಅಮೆರಿಕಾ ಕಾಯುತ್ತಿದ್ದಿರಬೇಕು. ಅಮೆರಿಕೆಯ ಜನ ಅವನ ಬಗೆಗೆ ಹುಚ್ಚರಂತಾದರು! ಈ ತರಹದ ಹೊಗಳಿಕೆ ಮತ್ತು ಪ್ರಚಾರ ಸ್ವತಃ ಡಾ॥ ಶ್ವೆಯಿಟ್ಸರ್ ಬಯಸಿದ್ದಿಲ್ಲ. ಆದರೆ ಇದರಿಂದ ಲ್ಯಾಂಬರೀನೆಯ ಆಸ್ಪತ್ರೆಗೆ ಆಗಬಹುದಾದ ಉಪಕಾರವನ್ನು ಕಡೆಗಣಿಸುವಂತಿರಲಿಲ್ಲ. ಮುಂದೆ ಲ್ಯಾಂಬರೀನೆಗೆ ಹಣದ ಹೊಳೆಯೇ ಹರಿಯಿತೆನ್ನಬಹುದು.

ಡಾ॥ ಶ್ವೆಯಿಟ್ಸರ್ ಅಮೆರಿಕಾಕ್ಕೆ ಖುದ್ದು ಭೇಟಿ ನೀಡಬೇಕೆಂದು ಒತ್ತಾಸೆಗಳು ಮೊದಲಿನಿಂದಲೂ ಬರುತ್ತಿದ್ದವು. ತಾನು ಹೋಗಲಾರದೆ ಒಂದು ಸಾರಿ ಪತ್ನಿ ಮತ್ತು ಮಗಳನ್ನು ಕಳುಹಿಸಿದ್ದ. ಆದರೆ ಈಗ ಅಮೆರಿಕಾದ ಹಲವಾರು ವಿಶ್ವವಿದ್ಯಾಲಯಗಳೇ ಅಲ್ಲದೆ ಹಲವಾರು ಸಂಘ-ಸಂಸ್ಥೆಗಳು ಮತ್ತು ನಗರಗಳ ಪ್ರಮುಖರಿಂದ ಆಹ್ವಾನಗಳು ಬರಲಾರಂಭಿಸಿದವು. ಈಗಲೂ ಕೆಲಸದ ಒತ್ತಡದಿಂದ ಕೂಡಲೇ ಅಮೆರಿಕಾ ಪ್ರಯಾಣ ಮಾಡಲು ಸಾಧ್ಯವಾಗುತ್ತಿಲ್ಲವೆಂದು ಡಾ॥ ಶ್ವೆಯಿಟ್ಸರ್ ಹೆಸರಾಂತ ವಿಜ್ಞಾನಿ ಡಾ॥ ಆಲ್ಬರ್ಟ್ ಐನ್‌ಸ್ಟೀನ್‌ರಿಗೆ ಬರೆದ ಪತ್ರ ಉಲ್ಲೇಖಾರ್ಹ. ಅದರಲ್ಲಿ ಲ್ಯಾಂಬರೀನೆಯ ಆಸ್ಪತ್ರೆಯ ಕೆಲಸ-ಕಾರ್ಯಗಳ ವಿವರ, ಅದನ್ನು ನಡೆಸುವಲ್ಲಿ ಅವನಿಗಿರುವ ಅಡೆತಡೆಗಳು, ಹಣಕಾಸಿನ ಮುಗ್ಗಟ್ಟುಗಳನ್ನು ತೋಡಿಕೊಂಡಿದ್ದ. ತಾನು ಬರೆಯುತ್ತಿರುವ ಧಾರ್ಮಿಕ ಮತ್ತು ತಾತ್ವಿಕ ಗ್ರಂಥಗಳ ಪ್ರಗತಿ ತನ್ನನ್ನು ಬಾಧಿಸುತ್ತಿರುವ "ಬರಹಗಾರನ ಕೈಸೆಡೆತ"ದಿಂದ ಬರವಣಿಗೆ ಕುಂಠಿತವಾಗುತ್ತಿರುವ ವಿಷಯ ಹಾಗೂ ತಾನು ನಿರೂಪಿಸುತ್ತಿರುವ ಜೀವೋಪಾಸನ ತತ್ವದ ವಿವರಣೆಗಳನ್ನಿತ್ತಿದ್ದಾನೆ. ತನಗಿರುವ ಗುರುತರ ಜವಾಬ್ದಾರಿಯಿಂದ ಸದ್ಯಕ್ಕೆ ಅಮೆರಿಕಾದಲ್ಲಿ ಅವರನ್ನು ಭೇಟಿಯಾಗಲು ಸಾಧ್ಯವಾಗದಿರುವುದರಿಂದ ಸ್ವತಃ ಐನ್‌ಸ್ಟೀನರೇ ಆಗಾಗ್ಗೆ ಕೈಗೊಳ್ಳುವ ಪ್ರಪಂಚ ಪರ್ಯಟನ ಸಮಯದಲ್ಲಿ ಲ್ಯಾಂಬರೀನೆಗೂ ಬರಬೇಕೆಂದೂ ಪ್ರಾರ್ಥಿಸಿಕೊಂಡಿದ್ದ!

ಡಾ॥ ಐನ್‌ಸ್ಟೀನರು ಬರೆದ ಪತ್ರದಲ್ಲಿ ಶ್ವೆಯಿಟ್ಸರ್‌ನ ಕೆಲಸಗಳನ್ನು ಮೆಚ್ಚಿಕೊಂಡಿದ್ದಲ್ಲದೆ ಅವನಂಥವರು ಈ ಜಗತ್ತಿನಲ್ಲಿ ಇನ್ನು ಕೆಲವರಿದ್ದುದಾದರೆ, ಪ್ರಪಂಚ ಎಷ್ಟು ಸುಖಕರವಾಗಿರುತ್ತಿತ್ತು ಎಂಬ ಆಶಾಭಾವನೆ ವ್ಯಕ್ತಪಡಿಸಿದ್ದರು.

# ೧೮. ಅಮೆರಿಕಾ ಪ್ರಯಾಣ

ಡಾ॥ ಶ್ವೆಯಿಟ್ಸರ್‌ಗೆ ಯುರೋಪಿಗೆ ಹಿಂದಿರುಗಲು ಬಿಡುವಾದದ್ದು ೧೯೪೮ರ ಸೆಪ್ಟೆಂಬರ್‌ನಲ್ಲಿ. ಸರಳ ಜೀವನದ ಪಣತೊಟ್ಟಿದ್ದ ಶ್ವೆಯಿಟ್ಸರ್ ಲ್ಯಾಂಬರೀನೆಯಿಂದ ಈಗ ಯುರೋಪಿಗೆ ಪ್ರಯಾಣ ಮಾಡಲು ವಿಮಾನಯಾನದ ಸೌಲಭ್ಯವಿದ್ದರೂ, ಸಮುದ್ರಯಾನವನ್ನೇ ಮಾಡಿದ.

ಹುಟ್ಟೂರಾದ ಗನ್ಸ್‌ಬಾಕ್‌ಗೆ ೧೯೩೯ರ ನೀಡಿದ ಆತುರದ ಭೇಟಿಯನ್ನು ಬಿಟ್ಟರೆ ಮತ್ತೆ ಅಲ್ಲಿಗೆ ಹೋಗಲಾಗಿರಲಿಲ್ಲ. ವಿಶ್ವಾದ್ಯಂತ ಪ್ರಖ್ಯಾತಿಯನ್ನು ಪಡೆದು ಹೆಸರುವಾಸಿಯಾಗಿದ್ದ ತಮ್ಮವನೇ ಆದ ಆಲ್ಬರ್ಟ್ ಶ್ವೆಯಿಟ್ಸರ್ ಈ ಸಾರಿ ಆಲ್‌ಸೇಶ್ ಪ್ರದೇಶಕ್ಕೆ ಬರುತ್ತಿರುವುದು ಅಲ್ಲಿಯವರಿಗೆಲ್ಲಾ ಅತ್ಯಂತ ಸಂತೋಷದ ಸುದ್ದಿಯಾಯಿತು. ಆಲ್‌ಸೇಶ್ ಮತ್ತು ಗನ್ಸ್‌ಬಾಕ್ ಪ್ರದೇಶಗಳ ಜನರು ಅವನನ್ನು ಸ್ವಾಗತಿಸಲು ವಿಶೇಷ ಸಿದ್ಧತೆಗಳನ್ನು ಮಾಡಿಕೊಂಡಿದ್ದರು. ಊರು-ಕೇರಿಗಳನ್ನು ಸಿಂಗರಿಸಿದ್ದರು. ಗನ್ಸ್‌ಬಾಕ್‌ಗೆ ಬರುವ ರಸ್ತೆಯ ಇಕ್ಕೆಲಗಳಲ್ಲಿ ಕಿಕ್ಕಿರಿದು ನೆರೆದ ಜನಸ್ತೋಮ ಜಯಕಾರ ಮಾಡಿ ಸ್ವಾಗತಿಸಿದರು. ಎಪ್ಪತ್ತಮೂರು ವಸಂತಗಳನ್ನು ದಾಟಿ ತಲೆಯಲ್ಲಿ ಕೂದಲು ವಿರಳವಾಗಿ, ಮುಖ ಸುಕ್ಕುಗಟ್ಟಿದ್ದರೂ ಅವರೆಲ್ಲರ ಪರಿಚಿತ ಆಲ್ಬರ್ಟನ ಬೆನ್ನು ಬಾಗದಿರುವುದು ಅಚ್ಚರಿಗೊಳಿಸಿತು. ಅವನ ಮಂದಸ್ಮಿತದ ದರ್ಶನ ಅವರಿಗೆ ಅಮಿತಾನಂದ ಉಂಟುಮಾಡಿತು. ಜನ್ಮತಾಳಿದ ಕೇಸರ್ಸ್‌ಬರ್ಗ್, ವಿದ್ಯಾಭ್ಯಾಸ ನಡೆಸಿದ ಕೋಲ್ಮಾರ್, ಮುಲ್‌ಹೌಸ್, ಮತ್ತು ಸ್ಟ್ರಾಸ್‌ಬರ್ಗ್‌ಗಳಿಗೆ ಹೋದಾಗಲೂ ಇದೇ ರೀತಿಯ ಸ್ವಾಗತ ಸನ್ಮಾನಗಳಾದವು. ಕೆಲ ದಿನ ಗನ್ಸ್‌ಬಾಕ್‌ನಲ್ಲಿ ಕಳೆದು, ನಂತರ ಸ್ವಿಟ್ಸರ್‌ಲೇಂಡ್‌ನಲ್ಲಿದ್ದ ಮಗಳ ಸಂಸಾರವನ್ನು ನೋಡುವ ಕಾತುರತೆಯಿಂದ ಅಲ್ಲಿಗೆ ತೆರಳಿದ. ಅವನಿಗೀಗ ಇದ್ದ ನಾಲ್ಕು ಮೊಮ್ಮಕ್ಕಳು ತಾತನ ಮೊದಲ ದರ್ಶನಕ್ಕಾಗಿ ಅಲ್ಲಿ ಕಾದುಕೊಂಡಿದ್ದರು!

ಸ್ವಿಟ್ಸರ್‌ಲೇಂಡಿನಲ್ಲಿ ಮಗಳ ಸಂಸಾರದ ಜತೆ ಸ್ವಲ್ಪ ಕಾಲಕಳೆದ ಶ್ವೆಯಿಟ್ಸರ್ ಗನ್ಸ್‌ಬಾಕ್‌ಗೆ ಹಿಂದಿರುಗಿ ತನ್ನ ಕೆಲಸದಲ್ಲಿ ಮುಳುಗಿಹೋದ. ಗ್ರಂಥರಚನೆ, ಸಂಗೀತ-ಕಛೇರಿ, ಭಾಷಣ, ಅತಿಥಿ-ಸತ್ಕಾರ, ಸಂಜೆ-ತಿರುಗಾಟಗಳು ಮತ್ತೆ ಅವ್ಯಾಹತವಾಗಿ ನಡೆಯುತ್ತಿದ್ದವು. ಅಮೆರಿಕಾದಿಂದ ಇಲ್ಲಿಗೂ ಆಹ್ವಾನಗಳು ಬರಲಾರಂಭಿಸಿದ್ದು ಆ ಬಗೆಗೆ ಒಂದು ನಿರ್ಧಾರ ತೆಗೆದುಕೊಳ್ಳಬೇಕಾಗಿತ್ತು. ಯುದ್ಧ ಸಮಯದಲ್ಲಿ ಆಸ್ಪತ್ರೆಯ ಉಳಿವಿಗೆ ಸಹಾಯ ಮಾಡಿದ ಅಮೆರಿಕಾದ ಜನತೆಗೆ ಕೃತಜ್ಞತೆ ತಿಳಿಸುವ ಕಾತುರತೆ ಈ ದಿಶೆಯಲ್ಲಿ ಕೆಲಸ ಮಾಡುತ್ತಿತ್ತು.

ಎರಡನೇ ಮಹಾಯುದ್ಧ ಮುಗಿದಾಗಿನಿಂದ ಡಾ|| ಶ್ವೈಯಿಟ್ಸರ್ ಕೀರ್ತಿ ವಿಶ್ವದೆಲ್ಲಡೆ ಗಗನಕ್ಕೇರಿತ್ತು. ಅದರಲ್ಲೂ ಅಮೆರಿಕಾದಲ್ಲಿ ಅವನೊಬ್ಬ ಯುಗಪುರಷನೆಂದು ಪರಿಗಣಿಸಲ್ಪಟ್ಟು ಶ್ವೈಯಿಟ್ಸರ್-ದರ್ಶನದ ಅವಕಾಶಕ್ಕಾಗಿ ಜನ ಹಾತೊರೆಯುತ್ತಿದ್ದರು. ಯೇಲ್, ಪ್ರಿನ್ಸ್‌ಟನ್, ಹಾರ್‌ವಾರ್ಡ್ ಮೊದಲಾದ ವಿಶ್ವವಿದ್ಯಾನಿಲಯದವರು ಆಗಿಂದಾಗ್ಗೆ ಆಹ್ವಾನ ಕಳುಹಿಸುತ್ತಲೇ ಇದ್ದರು. ಆಹ್ವಾನಗಳನ್ನು ಕೆಲಸದ ಒತ್ತಡದಿಂದ ನಿರಾಕರಿಸುವುದು ಅನಿವಾರ್ಯವಾಗಿತ್ತು. ಕೊಲೆರೆಡೋ ಪ್ರಾಂತ್ಯದ ಏಸ್ಪೆನ್ ನಗರದಿಂದ ಬಂದ ವಿಶೇಷ ಆಹ್ವಾನವನ್ನು ಅವನೀಗ ನಿರಾಕರಿಸದಂತಾದ. ಅವನಿಗೆ ಅತ್ಯಂತ ಪ್ರಿಯನೆನಿಸಿದ್ದ ಕವಿ, ವಿಜ್ಞಾನಿ, ಗಯಟೆ ಜನಿಸಿದ ದ್ವಿ-ಶತಮಾನೋತ್ಸವವನ್ನು ಅಲ್ಲಿಯ ಪ್ರಮುಖರು ಏರ್ಪಡಿಸಿದ್ದರು. ಗಯಟೆಯ ವಿಷಯದಲ್ಲಿ ಅತಿ ಹೆಚ್ಚಿನ ಪರಿಜ್ಞಾನವಿರುವ ಡಾ|| ಶ್ವೈಯಿಟ್ಸರ್‌ನೇ ಮುಖ್ಯ ಅತಿಥಿಯಾಗಿ ಭಾಗವಹಿಸಬೇಕೆಂದು ಸಮಾರಂಭದ ಮುಂದಾಳುಗಳು ದುಂಬಾಲು ಬಿದ್ದರು. ಜತೆಗೆ ಲ್ಯಾಂಬರೀನೆಯ ಆಸ್ಪತ್ರೆಯ ನೆರವಿಗೆ ಏಳು ಸಾವಿರ ಡಾಲರುಗಳ ಸಂಭಾವನೆಯನ್ನು ಕೊಡುವ ಭರವಸೆಯಿತ್ತು ಆಹ್ವಾನ ಕಳುಹಿಸಿದ್ದರು. ಆಹ್ವಾನ ೭೪ನೇ ಜನ್ಮದಿನಕ್ಕೆ ಸ್ವಲ್ಪ ಮೊದಲೇ ಬಂದಿತ್ತು.

ಡಾ|| ಶ್ವೈಯಿಟ್ಸರ್ ಮತ್ತು ಹೆಲೆನ್‌ರು ಅಮೆರಿಕಾಕ್ಕೆ ಹೊರಟು ಪ್ರಯಾಣ ಬೆಳೆಸಿದ್ದು ಹಡಗಿನಲ್ಲೇ. ಹಡಗಿನಲ್ಲಿದ್ದ ಇತರ ಪ್ರಯಾಣಿಕರೊಡನೆ ತಾನೂ ಒಬ್ಬ ಸಹ ಪ್ರಯಾಣಿಕನಂತೆ ವರ್ತಿಸಿದನೇ ಹೊರತು ತಾನೊಬ್ಬ ಪ್ರಖ್ಯಾತ ವ್ಯಕ್ತಿಯೆಂಬ ಸುಳುಹು ಯಾರಿಗೂ ದೊರೆಯದಂತೆ ವರ್ತಿಸುತ್ತಿದ್ದ. ಅವರೆಲ್ಲರ ಜೊತೆ ಪಿಯಾನೋ ನುಡಿಸಿ, ತಮಾಷೆ ಮಾಡುತ್ತಾ ನಲಿದಾಡಿಕೊಂಡೇ ಇದ್ದ. ಅವನೊಬ್ಬ ಪ್ರತಿಷ್ಠಿತ ಮಹಾ ವ್ಯಕ್ತಿಯೆಂಬುದರ ಅರಿವು ಹಡಗಿನಲ್ಲಿದ್ದ ಇತರರಿಗಾದದ್ದು ೧೯೪೯ರ ಜೂನ್ ೨೮ರಂದು, ಹಡಗು ನ್ಯೂಯಾರ್ಕ್ ಬಂದರಿನಲ್ಲಿ ಲಂಗರು ಹಾಕಿದಾಗಲೇ! ಸುಕ್ಕುಗಟ್ಟಿದ ಮುಖದ ಕೆದರು-ಕೂದಲಿನ ಹಳೇ ನಿಲುವಂಗಿ ಮತ್ತು ಕಂಠವಸ್ತ್ರ ಧರಿಸಿದ ಹಳ್ಳಿಗಾಡಿನ ಮುದುಕನನ್ನು ಸ್ವಾಗತಿಸಲು ಅಲ್ಲಿ ಸಾವಿರಾರು ಜನ ಸೇರಿದ್ದರು. ಜಯಜಯಕಾರ ಹರ್ಷೋದ್ಗಾರಗಳು ಮೊಳಗುತ್ತಿದ್ದವು. ಸಹಪ್ರಯಾಣಿಕರಲ್ಲನೇಕರು ಜೊತೆ ಪ್ರಯಾಣಿಸುವಾಗ ಅವನ ಮಹತ್ವವನ್ನರಿಯಲಾಗದಿದ್ದುದಕ್ಕೆ ಪರಿತಾಪಪಟ್ಟು ಕ್ಷಮೆ ಯಾಚಿಸಿದರು. ಆದರೂ ಶ್ವೈಯಿಟ್ಸರ್ ತಾನೊಬ್ಬ ಮಹಾಪುರುಷನೆಂದು ಬೀಗಿಕೊಳ್ಳಲಿಲ್ಲ.

ಅಮೆರಿಕಾ ನೆಲದಲ್ಲಿ ಡಾ|| ಶ್ವೈಯಿಟ್ಸರ್ ಕಾಲಿಡುತ್ತಲೇ ನೂರಾರು ಪತ್ರಕರ್ತರು, ಛಾಯಾಚಿತ್ರಗ್ರಾಹಕರು ಅವನನ್ನು ಸುತ್ತುವರಿದು ಪ್ರಶ್ನೆಗಳ ಸುರಿಮಳೆಗರೆದರು. ವಿವಿಧ ಕೋನಗಳಿಂದ ಚಿತ್ರೀಕರಿಸಿಕೊಂಡರು. ಆಫ್ರಿಕಾದಂಥ ಗೊಂಡಾರಣ್ಯದಲ್ಲಿ

ಅವನು ಸೇವೆಗೈಯಲು ಆದ ಪ್ರೇರಣೆಗಳೇನೆಂದು ಪತ್ರಕರ್ತನೊಬ್ಬ ಕೇಳಿದ ಪ್ರಶ್ನೆಗೆ-''ಮನುಷ್ಯ-ಮಾತ್ರದವನೊಬ್ಬ ತನ್ನ ಭ್ರಾತೃಗಳಿಗೆ ಮಾಡಬಹುದಾದ ಸಹಜ ಕರ್ತವ್ಯವೇ ವಿನಾ ಅಲ್ಲಿ ನಾನು ಯಾವ ವಿಶೇಷ ಸೇವೆ ಮಾಡುತ್ತಿಲ್ಲ. ಅಂಥ ಅವಕಾಶ ದೊರಕಿಸಿಕೊಟ್ಟ ಅವರಿಗೆ ನಾನು ಕೃತಜ್ಞ'' ಎಂಬ ಅತ್ಯಂತ ದೈನ್ಯ ಭಾವದ ಉತ್ತರ. ಆಗಿನ ನವೀನ ನಾಗರಿಕತೆ ರೀತಿ-ನೀತಿಗಳ ಬಗೆಗೆ ಅವನ ಅಭಿಪ್ರಾಯ ಕೇಳಿದಾಗ ''ಗೊಂಡಾರಣ್ಯದ ನಡುವೆ ಅನಾಗರಿಕರೆನಿಸಿದವರ ನಡುವೆ ಜೀವಮಾನವನ್ನೆಲ್ಲಾ ಕಳೆದ ನನ್ನನ್ನೇನು ಕೇಳುವಿರಿ? ಇಲ್ಲೇ ಸದಾ ಕಾಲ ಹಾಕುವ ನೀವೇ ಹೇಳಬೇಕಲ್ಲವೇ? ಜೀವನ ಎಲ್ಲಾ ಸ್ತರಗಳಲ್ಲೂ ಯಾಂತ್ರಿಕತೆ ತಾಂಡವವಾಡುತ್ತಿದೆಯೆಂಬುದು ಎದ್ದುಕಾಣುತ್ತದಲ್ಲವೇ?'' ಎಂಬ ಅವನ ಮರು ಪ್ರಶ್ನೆಗಳು ಅವರನ್ನು ಚಕಿತಗೊಳಿಸಿದವು.

ಡಾ|| ಶ್ವೈಯಿಟ್ಸರ್ ಅಮೆರಿಕಾದ ಉದ್ದಗಲ ಪ್ರಯಾಣ ಮಾಡುವಾಗ ಜರುಗಿದ ಪ್ರಸಂಗಗಳು ಅವನ ಅಂತರಾತ್ಮವನ್ನು ತೆರೆದಿಡಲು ಸಹಕಾರಿಯಾದವು. ನಮಗೆ ಕೆಡಕು ಮಾಡಿದವರನ್ನು ಕ್ಷಮಿಸಬೇಕೆ? ''ರೀಡರ್ಸ್ ಡೈಜೆಸ್ಟ್'' ಪತ್ರಿಕೆಯ ಸಂದರ್ಶನದಲ್ಲಿ ಕೇಳಿದ ಪ್ರಶ್ನೆಗೆ ಬಂದ ಉತ್ತರ-''ಹೌದು, ಅವನು ಕ್ಷಮೆ ಕೇಳುವ ಮೊದಲೇ ನಾವೇ ಕ್ಷಮಿಸಿಬಿಡಬೇಕು.'' ಅದಕ್ಕೊಂದು ಅಮೆರಿಕಾದಲ್ಲೇ ಅವನಿಗಾದ ಅನುಭವದ ಉಲ್ಲೇಖ: ರೈಲ್ವೇ ನಿಲ್ದಾಣವೊಂದರಲ್ಲಿ ಶ್ವೈಯಿಟ್ಸರ್ ಮತ್ತು ಸಂಗಡಿಗರು ಮುಂದಿನ ರೈಲಿಗಾಗಿ ಕಾಯುತ್ತಿದ್ದ ಸಂದರ್ಭ. ಅಲ್ಲೊಬ್ಬ ಜಾಡಮಾಲಿ ಪ್ಲಾಟ್ ಫಾರಂನಲ್ಲಿ ಜನರು ಸತತವಾಗಿ ಬೀಳಿಸುತ್ತಿದ್ದ ಕಾಗದದ ಚೂರುಗಳು, ಕಸಕಡ್ಡಿ, ಸಿಗರೇಟಿನ ತುಂಡುಗಳನ್ನು ಗುಡಿಸುವ ಕೆಲಸದಲ್ಲಿ ನಿರತನಾಗಿದ್ದ. ಒಂದು ಜಾಗವನ್ನು ಗುಡಿಸಿ ಸ್ವಚ್ಛಮಾಡಿ ಹಿಂದಿರುಗಿ ನೋಡುವಷ್ಟರಲ್ಲೇ ಮತ್ತೆ ಅಷ್ಟೇ ಕಸ ಬೀಳಿಸು ತ್ತಿದ್ದರು. ಅವನೇನು ಅವರ ಮೇಲೆ ಸಿಡಿಮಿಡಿಗೊಳ್ಳಲಿಲ್ಲ; ಮುಖ ಸಿಂಡರಿಸಿ ಕೊಳ್ಳಲಿಲ್ಲ. ಮತ್ತೆ ಅದೇ ಜಾಗವನ್ನು ಗುಡಿಸಿದ, ಮತ್ತೆ ಮತ್ತೆ ಗುಡಿಸುತ್ತಲೇ ಇದ್ದ. ಗುಡಿಸುವುದೇ ಅವನ ಕರ್ತವ್ಯವೆಂಬ ಅರಿವು ಅವನಲ್ಲಿ ಮೂಡಿತ್ತೆಂಬುದರಲ್ಲಿ ಸಂಶಯ ವಿರಲಿಲ್ಲ. ಕ್ಷಮಿಸುವ ವಿಷಯದಲ್ಲಿ ಈ ತತ್ವದ ಆಚರಣೆಯಾಗಬೇಕು ಎಂಬುದನ್ನು ಶ್ವೈಯಿಟ್ಸರ್ ಇದನ್ನು ಪ್ರತ್ಯಕ್ಷ ಜೀವಂತ ಉದಾಹರಣೆಯಾಗಿ ಉಲ್ಲೇಖಿಸಿದ.

ಮತ್ತೊಂದು ಸಾರಿ ಶ್ವೈಯಿಟ್ಸರ್ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ಮಹಿಳೆಯರ ಗುಂಪೊಂದು ಅವನನ್ನು ಖ್ಯಾತ ವಿಜ್ಞಾನಿ ಡಾ|| ಆಲ್ಬರ್ಟ್ ಐನ್‌ಸ್ಟೀನ್‌ನೆಂದು ಗ್ರಹಿಸಿ ಹಸ್ತಾಕ್ಷರ ನೀಡಲು ಕೇಳಿಕೊಂಡರು. ಅವರ ತಪ್ಪು ಗ್ರಹಿಕೆಯನ್ನು ಅರ್ಥಮಾಡಿಕೊಂಡು, ''ಆಲ್ಬರ್ಟ್ ಐನ್‌ಸ್ಟೀನ್-ಅವರ ಸ್ನೇಹಿತ

ಆಲ್ಬರ್ಟ್ ಶ್ವೆಯಿಟ್ಸರ್ ಮುಖಾಂತರ''- ಎಂದು ರುಜುಮಾಡಿ ಅವರನ್ನು ಅಚ್ಚರಿಗೊಳಿಸಿದ.

ಅಮೆರಿಕಾದಲ್ಲಿ ಶ್ವೆಯಿಟ್ಸರ್‌ನ ಪ್ರಮುಖ ಕಾರ್ಯಕ್ರಮವಿದ್ದ ಏಸ್ಪೆನ್, ೮೦೦೦ ಅಡಿ ಎತ್ತರದ ಬೆಟ್ಟ-ಪ್ರದೇಶ. ಭಾರೀ ಹಿಮಪಾತವಾಗುತ್ತಿದ್ದುದರಿಂದ ಶ್ವೆಯಿಟ್ಸರ್ ದಂಪತಿಗಳು ಸಂಚರಿಸುತ್ತಿದ್ದ ಊರನ್ನು ರಾತ್ರಿ ಬಹಳ ತಡವಾಗಿ ಸೇರಿದರು. ಆದರೂ ಆ ದಂಪತಿಗಳು ಆತಿಥೇಯರ ಮನೆಯಲ್ಲಿ ಬೆಳಗಿನ ಎಂಟು ಗಂಟೆಗೇ ಹಾಜರಾಗಿ ಕರೆ-ಗಂಟೆ ಬಾರಿಸಿದರು. ಆತಿಥೇಯರೇ ಅವರನ್ನು ಸ್ವಾಗತಿಸಲು ತಯಾರಿರಲಿಲ್ಲ!

ಗಯಟೆಯ ದ್ವಿ-ಶತಮಾನೋತ್ಸವದ ಆಚರಣೆಗಾಗಿ ಏಸ್ಪೆನ್‌ನಲ್ಲಿ ಎರಡು ಕಾರ್ಯಕ್ರಮ ಏರ್ಪಟ್ಟಿದ್ದವು. ಒಂದರಲ್ಲಿ ಫ್ರೆಂಚ್ ಇನ್ನೊಂದರಲ್ಲಿ ಜರ್ಮನ್ ಭಾಷೆಯಲ್ಲಿ ಮಾತನಾಡಿದ. ಅಮೆರಿಕಾದ ಹಲವು ಗಣ್ಯ ವ್ಯಕ್ತಿಗಳು, ಧಾರ್ಮಿಕ ಮುಖಂಡರು ತತ್ವಶಾಸ್ತ್ರಜ್ಞರು ಅವನ ಭಾಷಣಗಳನ್ನು ಆಲಿಸಲು ಈ ಸಭೆಗಳಲ್ಲಿ ಹಾಜರಿರುತ್ತಿದ್ದರು. ಸಭಾಂಗಣಗಳು ಜನರಿಂದ ಕಿಕ್ಕಿರಿದು ತುಂಬಿರುತ್ತಿದ್ದವು. ಎಂದಿನಂತೆ ಹಳೆಯ ನಿಲುವಂಗಿ, ಗರಿಗೆದರಿದ ಕೂದಲು, ಬಿಲ್ಲಾಕಾರದ ಕಂಠವಸ್ತ್ರಧಾರಿ ವಯೋವೃದ್ಧ ಎದ್ದುನಿಂತು, ಎರಡೂ ಕೈಜೋಡಿಸಿ ಎಳೆಯ ಮಗುವಿನ ಮಾತಿನಂತೆ ಕಿರುದನಿಯಲ್ಲಿ ಭಾಷಣ ಆರಂಭಿಸಿದ. ಮುಂದೆ ದನಿ ಏರಲಾರಂಭಿಸಿತು. ಗಯಟೆಯ ನಿರ್ಲಿಪ್ತ ಭಾವನೆ, ಸರಳತನ, ಅಪಾರ ವಿವೇಕ ಮತ್ತು ತಿಳುವಳಿಕೆ, ಪ್ರತಿಯೊಂದರ ಸೂಕ್ಷ್ಮ ವೀಕ್ಷಣೆ, ಸದಾ ಏನಾದರೊಂದು ಚಟುವಟಿಕೆಯಲ್ಲಿ ನಿರತನಾಗಿರುವ ಸ್ವಭಾವ, ಎಲ್ಲಕ್ಕಿಂತ ಮಿಗಿಲಾಗಿ ಅವನ ಪ್ರಕೃತಿಯ ಆರಾಧನೆಗಳನ್ನು ಮನ ಮುಟ್ಟುವಂತೆ ವಿವರಿಸಿದ. ಎಂದೂ ತೂಕವಿಲ್ಲದೆ ಮಾತನಾಡದ, ಅತಿ ಬುದ್ಧಿವಂತಿಕೆಯ ಸೋಗು ಹಾಕದ ಗಯಟೆಯ ವ್ಯಕ್ತಿತ್ವವನ್ನು ಅವರಿಗೆ ಪರಿಚಯಿಸಿದ. ಗಯಟೆ ಹೇಗೆ ಆಸುರೀ ಶಕ್ತಿಗಳ ವಿರುದ್ಧ ಜಯಗಳಿಸಲು ಮಾರ್ಗದರ್ಶಕನಾದ; ದ್ವೇಷವಿದ್ದಲ್ಲಿ ಪ್ರೀತಿಯ ಬೀಜ ಬಿತ್ತಿದ; ದುಃಖವಿದ್ದಲ್ಲಿ ಸಂತಸದ ದಾರಿ ತೋರಿದ; ನಿರಾಶೆಯಿದ್ದಲ್ಲಿ ಆಶಾಭಾವನೆ ಮೂಡಿಸಿದ; ಏನೂ ಇಲ್ಲದಿದ್ದಲ್ಲಿ ಏನಾದರೂ ಒಂದಿಷ್ಟು ಬರುವಂತೆ ಮಾಡಿದನೆಂದು ಶ್ವೆಯಿಟ್ಸರ್ ಮಾಡಿದ ಸರಳಶೈಲಿಯ ಭಾಷಣ ಹೃದಯಸ್ಪರ್ಶಿಯಾಗಿತ್ತು.

ಏಸ್ಪೆನ್‌ನಲ್ಲಿ ನಡೆದ ಪತ್ರಿಕಾಗೋಷ್ಠಿಯಲ್ಲಿ ವರದಿಗಾರರು ಅವನ ಜೀವೋಪಾಸನಾ ತತ್ವಗಳ ಬಗೆಗೆ ಕೆಣಕುವ ಪ್ರಶ್ನೆಗಳನ್ನು ಹಾಕಿದರು. ಜೀವೋಪಾಸನಾ-ತತ್ವಗಳನ್ನು ವರದಿಗಾರರು ಅನುಸರಿಸಲು ತಯಾರಿರುವರೋ ಅಥವಾ ಅದರ ಅರ್ಥ ವಿವರಣೆ ಬೇಕಾಗಿರುವುದೋ ಎಂದು ಅವರಿಗೇ ಮರು ಪ್ರಶ್ನೆ, ಅದರ ತತ್ವಗಳನ್ನು ವಿವರಿಸಿದರೆ ಅನುಸರಿಸಲು ಪ್ರಯತ್ನಿಸುವುದಾಗಿ ಅವರ

ಉತ್ತರ. ಕಾಯುತ್ತಿರುವ ಬಿಸಿಬಿಸಿಯಾದ ಭೋಜನ ಮಾಡಲು ಅವರೀಗಲೇ ಅವನನ್ನು ಬಿಡುಗಡೆ ಮಾಡಿದರೆ ಅದೇ ಜೀವೋಪಾಸನಾ ತತ್ವದ ಆಚರಣೆ ಮಾಡಿದಂತಾಗುತ್ತದೆಂದಾಗ, ಅದು ತಮಗೆ ಅರ್ಥವಾದಂತೆ ಅವರೆಲ್ಲಾ ತಲೆದೂಗಿದರಂತೆ!

ಮುಂದೆ ಚಿಕಾಗೋ, ಬೋಸ್ಟನ್ ಮುಂತಾದ ನಗರಗಳಲ್ಲಿ ಅದ್ದೂರಿಯ ಸನ್ಮಾನ ಸಮಾರಂಭಗಳಾದವು. ಚಿಕಾಗೋ ವಿಶ್ವವಿದ್ಯಾನಿಲಯ ಗೌರವ ಡಾಕ್ಟೋರೇಟ್ ಪದವಿಯನ್ನಿತ್ತು ಗೌರವಿಸಿತು. ಚಿಕಾಗೋದ ಹಲವು ಮಹಿಳಾ ಸಂಘ ಸಂಸ್ಥೆಗಳು ಒಂದುಗೂಡಿ ಸ್ಟೀವನ್ಸ್ ಹೋಟೆಲಿನ ಗ್ರ್ಯಾಂಡ್‌ಬಾಲ್ ರೂಂನಲ್ಲಿ ಏರ್ಪಡಿಸಿದ ಭೋಜನ-ಸಮಾರಂಭ ಮಿಕ್ಕೆಲ್ಲಕ್ಕಿಂತ ವರ್ಣರಂಜಿತವಾಗಿತ್ತು. ೧೭೦೦ ಜನ ಒಮ್ಮೆಲೆ ಕುಳಿತು ಭೋಜನ ಮಾಡಬಹುದಾದ ಆ ಸಮಾರಂಭಕ್ಕೆ ಹಾಜರಾಗಲು ಪ್ರತಿ ಟಿಕೆಟ್ಟಿಗೆ ನಾಲ್ಕು ಡಾಲರು. ಹಲವಾರು ಪ್ರತಿಷ್ಠಿತ ವ್ಯಕ್ತಿಗಳು ಅಲ್ಲಿ ಹಾಜರಿದ್ದರು. ಚಿಕಾಗೋದ ರಾಜ್ಯಪಾಲ ಅಡಲಾಯಿ ಸ್ಟೀವನ್‌ಸನ್‌ರು ಆ ದಿನ ಪ್ರಮುಖ ಭಾಷಣಕಾರರಾಗಿದ್ದರು. ಡಾ|| ಶ್ವೈಯಿಟ್ಸರ್‌ನ ಅಪಾರ ವಿದ್ವತ್ತು, ನಿಸ್ವಾರ್ಥ ಸೇವಾ ಮನೋಭಾವಗಳನ್ನು ಅವರೆಲ್ಲ ಕೊಂಡಾಡಿದರು.

ಅಮೆರಿಕಾದ ಪತ್ರಿಕಾ ಪ್ರಪಂಚ ಶ್ವೈಯಿಟ್ಸರ್‌ನ ಪ್ರಚಾರ ಮತ್ತು ಹೊಗಳಿಕೆಯಲ್ಲಿ ಪ್ರಮುಖ ಪಾತ್ರವಹಿಸಿತ್ತು. ಪ್ರತಿಷ್ಠಿತ 'ಟೈಮ್ಸ್' ಪತ್ರಿಕೆ ಮತ್ತೊಮ್ಮೆ ಮುಖಪುಟದ ಚಿತ್ರ ಸಹಿತ ವಿಶೇಷ ಲೇಖನಗಳನ್ನು ಪ್ರಕಟಿಸಿತು. ರೀಡರ್ಸ್-ಡೈಜೆಸ್ಟ್ ಸಹಾ ಇನ್ನೊಂದು ಲೇಖನ ಸಾದರಪಡಿಸಿತು. ಅವನು ಹೋದೆಡೆಗಳಲೆಲ್ಲಾ ಅವನ ಚಿತ್ರಗಳಿರದ ಪತ್ರಿಕೆಗಳಿರದಿರುತ್ತಿರಲಿಲ್ಲ. ಹಿರಿಯ ಗಾತ್ರದ ಪೋಸ್ಟರುಗಳು ಎಲ್ಲಾ ಕಡೆ ರಾರಾಜಿಸುತ್ತಿದ್ದವು. ಆಗ ನಡೆಯುತ್ತಿದ್ದ ಜನಾಭಿಪ್ರಾಯ ಸಂಗ್ರಹಣೆಗಳಲ್ಲಿ ಅತಿ ಹೆಚ್ಚಿನ ಜನರು ಅವನನ್ನು ಮೆಚ್ಚುತ್ತಿದ್ದರೆಂಬ ಭಾವನೆ ವ್ಯಕ್ತವಾಗುತ್ತಿದ್ದವು, ಅವನೊಬ್ಬ ಪ್ರಪಂಚದ ಅತ್ಯಂತ ಜನಪ್ರಿಯ ಮಹಾನುಭಾವ (GREATEST MAN OF THE WORLD) ಆಗಿರುತ್ತಿದ್ದ.

ಅಮೆರಿಕಾದಲ್ಲಿ ಡಾ|| ಶ್ವೈಯಿಟ್ಸರ್‌ನ ಕೀರ್ತಿ ಕಾಳ್ಗಿಚ್ಚಿನಂತೆ ಹರಡುತ್ತಿದ್ದುದನ್ನು ಸಹಿಸದವರೂ ಇದ್ದರು. ಕೆಲವು ಪತ್ರಿಕಾಕರ್ತರಂತೂ ಅವನ ಜೀವನದ ಹಲವು ಘಟ್ಟಗಳಲ್ಲಿ ನಡೆದುಕೊಂಡ ರೀತಿಯನ್ನು ಕೆದಕಿ ನೋಡುವ ಚಟದವರಾಗಿದ್ದರು. ಕೆಲವರು ಅವನ ಬಾಲ್ಯ-ಜೀವನದ ರೀತಿ-ನೀತಿಗಳನ್ನು ಹೊರಗೆಡಹಲು ಪ್ರಯತ್ನಿಸುತ್ತಿದ್ದರು ಮತ್ತೆ ಕೆಲವರು ಮಧ್ಯದಲ್ಲೇ ಜೀವನದ ಪಥವನ್ನು ಬದಲಾಯಿಸಿದರ ಬಗೆಗೆ ಪ್ರಶ್ನಿಸಿದರೆ, ಇನ್ನೂ ಕೆಲವರು ಅವನು ಈಗ ತಲುಪಿರುವ ಮಟ್ಟದ ರಹಸ್ಯದ ಬಗೆಗೆ ಕೆಣಕುವ ಪ್ರಶ್ನೆಗಳನ್ನು ಹಾಕುತ್ತಿದ್ದರು. ಅವಕ್ಕೆಲ್ಲಾ ಶ್ವೈಯಿಟ್ಸರ್‌ನ ಉತ್ತರ ''-ಆ

ಸಮಯದಲ್ಲಿ ನನಗಾವ ಪ್ರೇರಣೆಗಳೂ ಇದ್ದಂತಿರಲಿಲ್ಲ. ಹಲವಾರು ಕಾರ್ಯಗಳಲ್ಲಿ ತೊಡಗಿಸಿಕೊಂಡು ನಾನು ಅವುಗಳಲ್ಲೇ ಮುಳುಗಿಹೋಗಿರುತ್ತಿದ್ದೆ. ಕೆಲಸಾರಿ ನನ್ನ ಆಗು ಹೋಗುಗಳ ಬಗೆಗೆ ಯೋಚಿಸುವುದಕ್ಕೆ ಸಮಯವೇ ಇರುತ್ತಿರಲಿಲ್ಲ. ಸೇಂಟ್ ಥಾಮಸ್ ಚರ್ಚ್‌ನ ನೆರಳಿನಲ್ಲೇ ನನ್ನ ಜೀವನ ಸದಾ ಸಾಗುತ್ತಿತ್ತು. ಕೆಲ ಸಾರಿ ಕೆಲಸದ ಒತ್ತಡದಿಂದ ಬಹಳ ಆಯಾಸವೂ ಆಗುತ್ತಿತ್ತು. ಅಂಥ ಸಮಯದಲ್ಲಿ ರಾತ್ರಿ ಯಾದರೂ ಚರ್ಚ್‌ಗೆ ಹೋಗಿ ಆರ್ಗನ್ ನುಡಿಸಿ ಆನಂದಪಡುವುದು ನನ್ನ ಹವ್ಯಾಸವಾಗಿತ್ತು. ನಾನೇನೂ ಅತಿಮಾನವನಾಗಿರಲಿಲ್ಲ. ಬಳಕೆಯಾಗಿದ್ದ ಜನರೂ ಸಹಾ ನನ್ನನ್ನು ಅಷ್ಟೇನೂ ಹೆಚ್ಚಿನವನೆಂದೇ ಪರಿಗಣಿಸಿರಲಿಲ್ಲ. ಆಗ ನಾನು ಬರೆದ ಧಾರ್ಮಿಕ ಗ್ರಂಥಗಳ ಬಗೆಗೆ ಕ್ಯಾಥೊಲಿಕ್ ಮತಗುರುಗಳು ಯಾವ ಪ್ರಾಶಸ್ತ್ಯವನ್ನೂ ಕೊಟ್ಟಿರಲಿಲ್ಲ. ನಾನೊಬ್ಬ ಪ್ರತಿಭಾಶಾಲಿಯೆನಿಸಿದ ಸಾಮಾನ್ಯ ತರುಣನಾಗಿದ್ದೆ. ಪ್ರಚಂಡ ಬುದ್ಧಿವಂತನೂ ಆಗಿರಲಿಲ್ಲ. ಶ್ರೇಷ್ಠ ಮಟ್ಟದ ಗುರುಗಳು ದೊರೆತಿದ್ದುದು ಹಾಗೂ ಮೈ ಬಗ್ಗಿಸಿ ಕೆಲಸಮಾಡುವ ಅಭ್ಯಾಸ ನನ್ನಲ್ಲಿದ್ದುದು ಅದೃಷ್ಟವೆನ್ನಬೇಕಷ್ಟೆ. ಅದರಿಂದ ಇತರರಲ್ಲಿರದ ಅಪೂರ್ವ ಪ್ರೇರಣೆಗಳಾಗಲೀ, ಗುಣಗಳಾಗಲೀ ನನ್ನಲ್ಲಿರಲಿಲ್ಲ.'' ಶ್ವೆಯಿಟ್ಸರ್ ಹೀಗೆ ತನ್ನ ಬಗೆಗೆ ತಳೆಯುತ್ತಿದ್ದ ಸಾತ್ವಿಕ ಅಭಿಪ್ರಾಯ, ಅವನೀಗ ತಲ್ಪಿದ ಅತಿಮಾನವ ಅಥವಾ ಮಹೋನ್ನತ-ವ್ಯಕ್ತಿ-ಸ್ಥಿತಿಯಿಂದ ಕೆಲ ಜನರು ಅವನ ಬಾಲ್ಯ ಮತ್ತು ನಂತರದ ಜೀವನದ ಬಗೆಗೆ ಕೆಲಸಾರಿ ಬಣ್ಣ ಬಳಿದು ವಿವರಿಸುತ್ತಿದ್ದರೆ, ಮತ್ತೆ ಕೆಲವರು ಈ ಕಾರಣಗಳಿಂದಲೇ ಅವನನ್ನು ಸಿಕ್ಕಾಪಟ್ಟೆ ಹಳಿಯುತ್ತಿದ್ದರು.

ಕಗ್ಗತ್ತಲೆಯ ಖಂಡದ ಬಡ ಅನಾಗರಿಕರ ನಡುವೆ ತನ್ನ ಜೀವಮಾನದ ಬಹು ಭಾಗವನ್ನು ಕಳೆದಿದ್ದ ಶ್ವೆಯಿಟ್ಸರ್‌ಗೆ ಅಮೆರಿಕಾದ ಥಳಕಿನ, ಯಾಂತ್ರಿಕ ಜೀವನಶೈಲಿ, ಇಂದ್ರವೈಭವ, ದಿನಗಳುರುಳಿದಂತೆಲ್ಲಾ ಬೇಸರವನ್ನುಂಟುಮಾಡಲಾರಂಭಿಸಿದವು. ಅಲ್ಲಿನ ಜನರ ಶ್ರೀಮಂತಿಕೆಯ ಜೀವನಶೈಲಿ ಲ್ಯಾಂಬರೀನೆಯ ನತದೃಷ್ಟರು ಪಡುತ್ತಿರುವ ಹೇಯಪಾಡನ್ನು ಜ್ಞಾಪಕಕ್ಕೆ ತರುವಂತಾಯಿತು. ಲ್ಯಾಂಬರೀನೆಗೆ ಹಿಂದಿರುಗುವ ಒತ್ತಾಸೆ ಅವನಲ್ಲಿ ದಿನೇ ದಿನೇ ಹೆಚ್ಚಾಗುತ್ತಿತ್ತು. ಅಮೆರಿಕಾದಲ್ಲಿ ತನಗೆ ಸಹಾಯ ಮಾಡಿದ ವ್ಯಕ್ತಿಗಳು, ಸಂಘ-ಸಂಸ್ಥೆಗಳು, ಔಷಧ ಕಂಪನಿಗಳವರನ್ನೆಲ್ಲಾ ಆದಷ್ಟು ಬೇಗ ಭೇಟಿ ಮಾಡಿ ತನ್ನ ಕೃತಜ್ಞತೆ ಸಲ್ಲಿಸಿ, ಯುರೋಪಿನತ್ತ ಪ್ರಯಾಣ ಬೆಳೆಸಿದ. ಅಮೆರಿಕೆಯ ಈ ಭೇಟಿಯಿಂದ ಅವನಿಗೆ ತೃಪ್ತಿಯಾಗುವಷ್ಟು ಧನಸಹಾಯ ಔಷಧ, ಉಪಕರಣಗಳ ಸಂಗ್ರಹ ದೊರಕಿದ್ದಲ್ಲದೆ, ಮುಂದೆಯೂ ಲ್ಯಾಂಬರೀನೆಗೆ ಖಾಯಂ ಸಹಾಯ ಮಾಡುವ ಭರವಸೆ ಹಲವಾರು ಮೂಲಗಳಿಂದ ದೊರೆತದ್ದು ಅವನಿಗೆ ಅತ್ಯಾನಂದವನ್ನುಂಟುಮಾಡಿತು.

ಯುರೋಪಿಗೆ ಹಿಂದಿರುಗಿದನಂತರ ಅಲ್ಲಿ ಶೇಖರವಾಗಿದ್ದ ಔಷಧ ಮತ್ತಿತರ

ಸಾಮಗ್ರಿಗಳನ್ನು ಒಂದೆಡೆ ಕಲೆಹಾಕಿ ಗಂಟುಮೂಟೆ ಕಟ್ಟುವುದಕ್ಕೆ ಎರಡು ತಿಂಗಳು ಬೇಕಾದವು. ನಂತರ ಹೆಲೆನ್ ಜೊತೆ ಶ್ವೆಯಿಟ್ಸರ್ ಲ್ಯಾಂಬರೀನೆಗೆ ಪ್ರಯಾಣ ಮಾಡಿದ.

ಡಾ|| ಶ್ವೆಯಿಟ್ಸರ್ ಈ ಸಾರಿ ಲ್ಯಾಂಬರೀನೆಗೆ ಹಿಂದಿರುಗುವಷ್ಟರಲ್ಲಿ ಆಸ್ಪತ್ರೆ ಮತ್ತು ಅಲ್ಲಿನ ವಸಾಹತುಗಳು ಯುದ್ಧದ ಪರಿಣಾಮಗಳಿಂದ ಸಂಪೂರ್ಣವಾಗಿ ಚೇತರಿಸಿ ಕೊಂಡಿದ್ದವು. ಆಫ್ರಿಕಾದ ಪೊದೆಗಳ ನಡುವೆ ಚಿಕಿತ್ಸಾ-ಕೇಂದ್ರವನ್ನು ಸ್ಥಾಪಿಸುವ ಉದ್ದೇಶದಿಂದ ಮೊದಲು ಒಂದು ಕೋಳಿಯ ಗೂಡಿನಂತೆ ಮುರುಕು ಗುಡಿಸಿಲಿನಲ್ಲಿ ಆರಂಭವಾದಂಥ ವ್ಯವಸ್ಥೆಗೂ, ಪ್ರಸ್ತುತ ಸ್ಥಿತಿಗೂ ಯಾವ ಹೋಲಿಕೆಯೂ ಇರಲಿಲ್ಲ. ಅರಣ್ಯದ ಮರಗಿಡಗಳು ತೆರವಾದ ಜಾಗ ಒಂದರಲ್ಲಿ ಈಗ ४೦-४೫ ಕಟ್ಟಡಗಳು ತಲೆಯೆತ್ತಿ ನಿಂತಿದ್ದವು. ಸುಮಾರು ೫೦೦ ಜನ ರೋಗಿಗಳ ಶುಶ್ರೂಷೆ ಮಾಡುವ ಸೌಲಭ್ಯಗಳಿದ್ದವು. ಪ್ರಪಂಚದ ವಿವಿಧ ಭಾಗಗಳಿಂದ ನಿಸ್ವಾರ್ಥ ಸೇವೆಗಾಗಿ ಸ್ವ-ಪ್ರೇರಣೆಯಿಂದ ಬಂದ ಪರಿಣಿತ ವೈದ್ಯರು, ಮತ್ತು ದಾದಿಯರಿದ್ದರು. ಅವರೆಲ್ಲಾ ಲ್ಯಾಂಬರೀನೆಯಲ್ಲಿ ಡಾ|| ಶ್ವೆಯಿಟ್ಸರ್‌ನಂಥ ಮಹಾಪುರುಷನ ಸಹೋದ್ಯೋಗಿ ಗಳಿಗಾಗಿ ಕೆಲಸ ಮಾಡುವ ಅವಕಾಶ ದೊರೆಯುವುದೇ ಒಂದು ಭಾಗ್ಯವೆಂದು ಭಾವಿಸಿದವರು. ನಾಗರಿಕ ಜಗತ್ತಿನ ದೊಡ್ಡ ನಗರಗಳ ಆಸ್ಪತ್ರೆಗಳಲ್ಲಿ ಸಿಗುವಂತಹ ವಿಶೇಷ ತರಹೆಯ ಚಿಕಿತ್ಸಾ ವಿಧಾನಗಳು ಅಲ್ಲಿ ಲಭ್ಯವಿದ್ದವು. ಆರ್ಥಿಕವಾಗಿಯೂ ಈಗ ಆಸ್ಪತ್ರೆಯ ಪರಿಸ್ಥಿತಿ ತೃಪ್ತಿಕರವಾಗಿತ್ತು. ಆಸ್ಪತ್ರೆ ಮತ್ತು ಅಲ್ಲಿನ ವಸಾಹತಿನವರಿಗೆ ಬೇಕಾಗುವ ತರಕಾರಿ, ಹಣ್ಣು-ಹಂಪಲು ಕಾಫಿ, ಕೋಕೋಗಳನ್ನು ಬೆಳೆಯುವ ತೋಟಗಳ ಸಾಲುಗಳಿದ್ದವು. ಲ್ಯಾಂಬರೀನೆ ಈಗ ಸ್ವ-ಪರಿಪೂರ್ಣತೆಯನ್ನು ಸಾಧಿಸಿದ ಒಂದು ಸಣ್ಣ ಪಟ್ಟಣವಾಗಿ ಮಾರ್ಪಟ್ಟಿತ್ತು.

ಜೀವನದಲ್ಲಿ ಮುಕ್ಕಾಲು ಶತಮಾನವನ್ನು ಕಳೆದ ಡಾ|| ಶ್ವೆಯಿಟ್ಸರ್‌ನ ಆರೋಗ್ಯ ಇನ್ನೂ ಚೆನ್ನಾಗಿಯೇ ಇತ್ತೆನ್ನಬಹುದು. ಆಸ್ಪತ್ರೆಯ ಪ್ರಗತಿ ತೃಪ್ತಿಯನ್ನುಂಟುಮಾಡು ವಂತಿದ್ದರೂ ಅದು ಹೇಗೆ ಮುಂದುವರಿಯಬಹುದೆಂಬ ಯೋಚನೆ ಒಂದೊಂದು ಸಾರಿ ಅವನನ್ನಾವರಿಸುತ್ತಿತ್ತು. ಈ ತನಕ ಆಸ್ಪತ್ರೆ ಅವನ ಕನಸಿನ ಕೂಸು; ಅವನ ಆದರ್ಶಗಳ ಪ್ರಯೋಗಾಲಯ; ಹಾಗೂ ಕಾರ್ಯಕ್ಷೇತ್ರ. ಅವನ ಜೀವನಶೈಲಿ ಅಲ್ಲಿ ಆವಿರ್ಭವಿಸಿತ್ತು. ಆಸ್ಪತ್ರೆ ಮತ್ತು ಅವನ ಜೀವನ ಹಾಸುಹೊಕ್ಕಾಗಿತ್ತು. ಅವನಿಲ್ಲದೆ ಆಸ್ಪತ್ರೆಯಿಲ್ಲ, ಆಸ್ಪತ್ರೆಯಿಲ್ಲದೆ ಅವನಿಲ್ಲ ಎಂಬ ಸ್ಥಿತಿಯುಂಟಾಗಿತ್ತು.

ಈಗ ಇಡೀ ಪ್ರಪಂಚದ ದೃಷ್ಟಿ ಡಾ|| ಶ್ವೆಯಿಟ್ಸರ್ ಮತ್ತು ಲ್ಯಾಂಬರೀನೆಯತ್ತ ಕೇಂದ್ರೀಕೃತವಾಗಿತ್ತು. ಅವನ ನಡೆ-ನುಡಿ ಮತ್ತು ಕಾರ್ಯವಿಧಾನಗಳಲ್ಲಿ ಸ್ವಲ್ಪ ಬದಲಾವಣೆ ಕಂಡುಬಂದರೂ ಪ್ರತಿಕೂಲ ಪ್ರತಿಕ್ರಿಯೆಗಳಾಗುತ್ತಿದ್ದವು. ಆದರಿಂದ

ಶ್ವೈಯಿಟ್ಸರ್ ಆಸ್ಪತ್ರೆಯ ವಿಷಯದಲ್ಲಿ ಬಹಳ ಯೋಚಿಸಿ ನಿರ್ಣಯ ತೆಗೆದುಕೊಳ್ಳ ಬೇಕಾಗಿತ್ತು. ಆಸ್ಪತ್ರೆ ಮತ್ತು ಡಾ॥ ಶ್ವೈಯಿಟ್ಸರ್‌ನ ಅಮಿತ ಯಶಸ್ಸನ್ನು ಸ್ವಂತ ಲಾಭಕ್ಕೆ ಬಳಸಿಕೊಳ್ಳಲು ಕೆಲವು ವ್ಯಾಪಾರೀ ಮನೋಭಾವದ ಸಂಘ-ಸಂಸ್ಥೆಗಳು, ಔಷಧಿ ಕಂಪನಿಗಳವರು ಅದಕ್ಕೆ ನೆರವಾಗುವ ಸೋಗಿನಲ್ಲಿ ಮುಂದೆ ಬರುತ್ತಿದ್ದರು. ಆಸ್ಪತ್ರೆಯ ಪೂರ್ಣ ಖರ್ಚನ್ನು ವಹಿಸಿಕೊಳ್ಳಲು ಅಮೆರಿಕಾದಲ್ಲಿದ್ದಾಗ ಹಲವರು ತಯಾರಿರು ವುದಾಗಿ ಅವನನ್ನು ಕೇಳಿಕೊಂಡಿದ್ದರು. ಶ್ವೈಯಿಟ್ಸರ್ ಇಷ್ಟಪಟ್ಟಿದ್ದರೆ, ಅಲ್ಲಿದ್ದ ಕುಟೀರ ಗಳೆಲ್ಲಾ ಮಾಯವಾಗಿ ಕಾಂಕ್ರೀಟ್ ಕಟ್ಟಡಗಳು ಮೇಲೇಳಲು ಸಾಧ್ಯವಿತ್ತು. ಆಸ್ಪತ್ರೆ ಹವಾನಿಯಂತ್ರಣಕ್ಕೊಳಪಟ್ಟು ನಗರಗಳಲ್ಲಿನ ಆಸ್ಪತ್ರೆಗಳಂತೆ ಶುಚಿತ್ವದ ಆಗರವಾಗ ಬಹುದಿತ್ತು. ಅತ್ಯಾಧುನಿಕ ಯಂತ್ರೋಪಕರಣಗಳ ಜೋಡಣೆಯಾಗಿ, ಯಾಂತ್ರಿಕತೆಯ ತಾಂಡವವನ್ನು ನೋಡಬಹುದಿತ್ತು. ಇಂಥ ಬದಲಾವಣೆಗಳು ಆಧುನಿಕ ದೃಷ್ಟಿಕೋನದಿಂದ ವೀಕ್ಷಿಸಿದಾಗ ಆಕರ್ಷಕವಾಗಿ ಕಾಣುವುದರಲ್ಲಿ ಸಂದೇಹ ವಿರಲಿಲ್ಲ. ಆದರೆ ಆಫ್ರಿಕಾದ ಜನರ ಜೀವನಶೈಲಿಯ ದೃಷ್ಟಿಯಿಂದ ಆಗುತ್ತಿದ್ದ ಪರಿಣಾಮಗಳೇ ಬೇರೆ. ಮೊದಲನೆಯದಾಗಿ ಆಸ್ಪತ್ರೆಯ ಆಗುಹೋಗುಗಳು ಡಾ॥ ಶ್ವೈಯಿಟ್ಸರ್‌ನ ನಿಯಂತ್ರಣದಿಂದ ಸಂಪೂರ್ಣವಾಗಿ ಕೈತಪ್ಪಿಹೋಗುತ್ತಿದ್ದವು. ಆ ಆಸ್ಪತ್ರೆ ಯಾರ ಉಪಯೋಗಕ್ಕಾಗಿ ರೂಪುಗೊಂಡಿತ್ತೋ ಅವರಿಗೆ ಎಟಕುತ್ತಿರಲಿಲ್ಲ. ಅಂಥ ಆಧುನಿಕ ಪರಿಸರದಲ್ಲಿ ಅಲ್ಲಿನ ಜನ ಚಿಕಿತ್ಸೆಗೆ ಬರುವುದೂ ಅನುಮಾನವೇ. ಅವರ ಪರಿಸರವನ್ನು ಹೋಲುವ ವಾತಾವರಣವಿರದಿರುವಲ್ಲಿ ನೀಗ್ರೋಗಳು ತಂಗಲು ಇಷ್ಟಪಡುತ್ತಿರಲಿಲ್ಲ. ಎಷ್ಟೇ ಆಧುನಿಕ ಯಂತ್ರಗಳನ್ನು ಅಳವಡಿಸಿ ನವೀನ ಮಾದರಿಯ ಚಿಕಿತ್ಸೆಗಳನ್ನು ನೀಡಬಹುದಾದರೂ, ಚಿಕಿತ್ಸೆಗೊಳ ಗಾಗುವವರಿಗೆ ಮಾನಸಿಕ ತೃಪ್ತಿ ದೊರೆಯದಿದ್ದಲ್ಲಿ ಅವು ಹೆಚ್ಚಿನ ಪರಿಣಾಮ ಬೀರಲಾರವು. ಲ್ಯಾಂಬರೀನೆಯ ಆಸ್ಪತ್ರೆಯಲ್ಲಿ ಕಾಯಿಲೆ-ಕಸಾಲೆ, ನೋವು, ಬಾಧೆ ಗಳಿದ್ದಂತೆ ಸುಖ-ಸಂತೋಷದ ವಾತಾವರಣವೂ ಮನೆಮಾಡಿತ್ತು. ಜೀವನ್ಮರಣದ ವೃತ್ತಗಳು ಅಲ್ಲಿ ಒಂದುಗೂಡಿದ್ದವು. ಯುರೋಪು ಅಮೆರಿಕಾಗಳ ಯಾವುದೇ ಆಸ್ಪತ್ರೆ ಗಳಲ್ಲಿರದ ಅದರದೇ ಆದ ವೈಶಿಷ್ಟತೆಗಳಿಂದ ಕೂಡಿತ್ತು. ಒಂದು ವಿಧದಲ್ಲಿ ರೋಗಿಗಳಿಗೆ ಬೋಧಕ-ಆಸ್ಪತ್ರೆಯಾಗಿತ್ತೆಂದರೂ ಅತಿಶಯೋಕ್ತಿಯಲ್ಲ. ಅಂಥ ವಾತಾವರಣ ಶ್ವೈಯಿಟ್ಸರ್‌ನಂಥ ಆದರ್ಶವಾದಿ ಹಾಗೂ ನಿಸ್ವಾರ್ಥ-ಸೇವಾ-ಮನೋಭಾವದವರಿಂದ ಮಾತ್ರ ಮೂಡಿಬರಲು ಸಾಧ್ಯ. ಆ ತೆರನ ಆಸ್ಪತ್ರೆ ಅವನಂಥವರ ಚೈತನ್ಯ ಮತ್ತು ಕಾರ್ಯವಿಧಾನಗಳಿಂದ ಬೆಳೆಯಬಹುದೇ ಹೊರತು ವಾಣಿಜ್ಯೋದ್ಯಮಿಗಳಿಗೆ ವಹಿಸಿಕೊಡುವುದರಿಂದಲ್ಲ. ಅಮೆರಿಕಾದಲ್ಲಿದ್ದಾಗ ಹಲವು ಮೂಲಗಳಿಂದ ಈ ತರಹೆಯ ಸಲಹೆಗಳು ಬಂದಾಗ ಅವನ್ನೆಲ್ಲಾ ನಿರಾಕರಿಸಿದ್ದ.

ಆಸ್ಪತ್ರೆಯನ್ನು ಅತ್ಯಾಧುನಿಕ ರೀತಿಯಲ್ಲಿ ಸಜ್ಜುಗೊಳಿಸಲು ಈಗ ಸಾಧನ-ಸಂಪತ್ತು ಗಳಿದ್ದರೂ, ಅದಕ್ಕೆ ಒಪ್ಪದ ಶ್ವೈಯಿಟ್ಸರ್‌ನ ಹಠಮಾರಿತನ ಅವನ ಸಹೋದ್ಯೋಗಿ ಗಳಿಗೇ ಬೇಸರ ತರುತ್ತಿತ್ತು. ಆಫ್ರಿಕದ ಪರಿಸರ ಮತ್ತು ಅಲ್ಲಿನ ಜನರ ಮನೋಭಾವಕ್ಕೆ ತಾನು ಮಾಡುತ್ತಿರುವುದೇ ಸರಿಯೆಂಬುದು ಅವನ ವಾದವಾಗಿತ್ತು. ಈ ಬಗೆಗೆ ಇತರರ ಟೀಕೆಗಳನ್ನು ಸಹಿಸುವ ಸ್ವಭಾವ ಅವನದಾಗಿರಲಿಲ್ಲ. ಬಹುಶಃ ಅವನು ಆಫ್ರಿಕಾಕ್ಕೆ ಬರುವ ಮೊದಲ ನಿರ್ಧಾರದ ಆಂತರ್ಯವನ್ನು ಅರಿತವರಿಗೆ ಮಾತ್ರ ಅವನ ಉದ್ದೇಶಗಳ ಅರ್ಥವಾಗುತ್ತಿದ್ದವೇನೋ.

ಒಂದು ವರ್ಷದಿಂದ ಆಫ್ರಿಕಾದಲ್ಲಿದ್ದ ಹೆಲೆನ್‌ಳ ಆರೋಗ್ಯ ಸ್ವಲ್ಪ ಕೆಡಲಾರಂಭಿಸಿತು. ಅವಳನ್ನು ೧೯೫೦ರ ಜುಲೈ ತಿಂಗಳಲ್ಲಿ ಯುರೋಪಿಗೆ ಕಳುಹಿಸಿದ.

# ೧೯. ಚಲನಚಿತ್ರ ನಿರ್ಮಾಣ

ಡಾ|| ಶ್ವೈಯಿಟ್ಸರ್‌ನ ಬಗೆಗೆ ಹಲವಾರು ಭಾಷೆಗಳಲ್ಲಿ ಸಾವಿರಾರು ಲೇಖನಗಳು ಪ್ರಕಟವಾಗಿದ್ದವು. ಕೆಲವು ಗ್ರಂಥಗಳೂ ರಚನೆಯಾಗಿದ್ದವು. ಆತ್ಮಕತೆಯನ್ನು ಪ್ರಕಟಿಸಿ ಕಾಲು ಶತಮಾನವೇ ಆಗಿತ್ತು. ಇವುಗಳಲ್ಲೆಲ್ಲಾ ಅವನ ಜೀವನ-ಶೈಲಿ, ದೃಷ್ಟಿಕೋನಗಳು, ನಂಬಿಕೆಗಳು, ವಿದ್ವತ್ತು, ನಿಸ್ವಾರ್ಥ ಸೇವೆ, ಆಸ್ಪತ್ರೆಯ ವೈಶಿಷ್ಟ್ಯತೆ ಇತ್ಯಾದಿಗಳು ಮೂಡಿಬಂದಿದ್ದವು. ಅವನಲ್ಲಿದೆಯೆನ್ನಲಾದ ಸರ್ವಾಧಿಕಾರಿ ಮನೋಭಾವ, ಆಸ್ಪತ್ರೆಯನ್ನು ನಡೆಸುವಲ್ಲಿ ಹಳೇ ಸಂಪ್ರದಾಯಗಳಿಗೆ ಒತ್ತು ಕೊಡುವ ಸ್ವಭಾವ, ಆಫ್ರಿಕನ್ನರನ್ನು ನಡೆಸಿಕೊಳ್ಳುತ್ತಿದ್ದ ರೀತಿ, ಇತ್ಯಾದಿಗಳನ್ನು ಕಟುವಾಗಿ ಟೀಕಿಸುವ ಲೇಖನಗಳೂ ಆಗಾಗ್ಗೆ ಪ್ರಕಟವಾಗುತ್ತಲೂ ಇದ್ದವು. ಆದರೆ ಶ್ವೈಯಿಟ್ಸರ್‌ನ ನಿಜವಾದ ಉದ್ದೇಶ ಮತ್ತು ರೂಢಿಸಿಕೊಂಡ ರೀತಿ-ನೀತಿಗಳ ಹಿಂದಿನ ಅಂತರ್ಯವನ್ನು ಸರಿಯಾಗಿ ಅರ್ಥೈಸಿಕೊಂಡವರು ವಿರಳ.

ಶ್ವೈಯಿಟ್ಸರ್‌ನ ಬಹುಮುಖಪ್ರತಿಭೆ ಮತ್ತು ಕಾರ್ಯಕ್ಷೇತ್ರವನ್ನು ಬೆಳ್ಳಿ-ತೆರೆಯ ಮೇಲೆ ಸೆರೆಹಿಡಿದು ಪ್ರಪಂಚಕ್ಕೆ ತೋರಿಸಬೇಕೆಂದು ಕೆಲವರು ಆಗಾಗ್ಗೆ ಪ್ರಯತ್ನಿಸುತ್ತಿದ್ದುದುಂಟು. ಹಾಲಿವುಡ್‌ನ ನಿರ್ಮಾಪಕರು ಅಮೆರಿಕಾದಲ್ಲಿದ್ದಾಗ ಇದಕ್ಕಾಗಿ ಅವನ ಬೆನ್ನುಹತ್ತಿದ್ದರು. ಅದೊಂದು ವ್ಯಾಪಾರೀ ಉದ್ಯೋಗವಾಗಬಹುದೆಂಬ ಶಂಕೆಯಿಂದ ನಿರಾಕರಿಸಿದ್ದ. ಶ್ವೈಯಿಟ್ಸರ್‌ನ ಬಗೆಗೆ ಚಲನಚಿತ್ರ ತಯಾರಿಸಲೇಬೇಕೆಂಬ ಉತ್ಕಟಾಕಾಂಕ್ಷೆ ಇದ್ದವರಲ್ಲಿ ಶ್ರೀಮತಿ ಎರಿಕಾ ಆಂಡರ್‌ಸನ್ ಎಂಬ ಮಹಿಳೆ ಪ್ರಮುಖಳು. ಶ್ವೈಯಿಟ್ಸರ್‌ನ ನಿಸ್ವಾರ್ಥಸೇವಾ ಕಾರ್ಯಗಳಿಗೆ ಮಾರುಹೋಗಿ ಅವನಿಗೆ ಪರೋಕ್ಷವಾಗಿ ಸಹಾಯಮಾಡುತ್ತಿದ್ದರೂ, ಅವನನ್ನು ಪ್ರತ್ಯಕ್ಷವಾಗಿ

ಭೇಟಿಯಾದವಳಲ್ಲ. ಚಲನಚಿತ್ರದ ಬಗೆಗೆ ಶ್ವೈಯಿಟ್ಸರ್‌ನ ಅಭಿಪ್ರಾಯ ಅವಳಿಗೂ ಸ್ಪಷ್ಟವಾಗಿ ತಿಳಿದಿದ್ದರಿಂದ ಈ ವಿಷಯವನ್ನು ಪ್ರಸ್ತಾಪಿಸಲು ಅಂಜಿಕೊಂಡಿದ್ದಳು. ತನಗೆ ಪರಿಚಯವಿದ್ದ ಹಾಗೂ ಶ್ವೈಯಿಟ್ಸರ್‌ನ ಕೆಲಸ ಕಾರ್ಯಗಳಲ್ಲಿ ಬಹಳ ಸಮಯದಿಂದ ಸಹಕರಿಸುತ್ತಿದ್ದ ಸಿರಿವಂತ ಮಹಿಳೆ ಕ್ಲಾರಾ ಉರ್ಕ್ಹಾರ್ಟ್‌ಳಿಗೆ ತನ್ನ ಇಚ್ಛೆಯನ್ನು ತಿಳಿಸಿದ್ದಳು. ಕ್ಲಾರಾ ವಿಷಯವನ್ನು ಶ್ವೈಯಿಟ್ಸರ್‌ನ ಮುಂದಿಟ್ಟಾಗ ಸುಟ್ಟು ಬೂದಿಯಾಗಿ ನರಕದಲ್ಲಿ ಬಿದ್ದರೂ ತನ್ನ ಬಗೆಗೆ ಚಲನಚಿತ್ರವನ್ನು ಸಹಿಸಲಾರನೆಂದು ನಿರಾಕರಿಸಿದ್ದನಂತೆ. ಮುಂದೆ ಎರಿಕಾ ಲ್ಯಾಂಬರೀನೆಗೆ ಬಂದು ಹೋಗಲು ಅವನ ಸಲಹೆ ಕೇಳಿದಾಗ, ಆಕೆಯ ಆಗಮನವನ್ನು ಸ್ವಾಗತಿಸುವುದಾದರೂ, ಚಲನಚಿತ್ರ ತೆಗೆಯುವ ಸಿದ್ಧತೆಗಳಿಂದ ಬರಬಾರದೆಂದು ತಿಳಿಸಿದ್ದ. ಆದರೂ ಎರಿಕಾ ಲ್ಯಾಂಬರೀನೆಗೆ ಬಂದಾಗ ತನ್ನ ಕ್ಯಾಮರಾಗಳನ್ನು ತಂದೇ ಇದ್ದಳು-ಆಫ್ರಿಕಾದ ಕಲಾಕೃತಿಗಳ ಸಂಗ್ರಾಹಕನೊಬ್ಬನಿಗೆ ಕೆಲವು ಚಿತ್ರಗಳನ್ನು ತೆಗೆದುಕೊಡುವ ನೆವದಿಂದ ! ಜತೆಗೆ ಲ್ಯಾಂಬರೀನೆಗೆ ಹೋದ ನಂತರ ಶ್ವೈಯಿಟ್ಸರ್‌ನ ಮನ ಪರಿವರ್ತನೆ ಮಾಡಲು ಸಾಧ್ಯವಾಗಬಹುದೆಂಬ ಕುರುಡು-ನಂಬಿಕೆ ಅವಳಲ್ಲಿ ಇದ್ದೇ ಇತ್ತು.

ಎರಿಕಾ ಆಂಡರ್‌ಸನ್ ಲ್ಯಾಂಬರೀನೆಗೆ ಬಂದು ಅಲ್ಲಿನ ಕಾರ್ಯಕ್ರಮಗಳನ್ನು ಕೆಲ ದಿನ ವೀಕ್ಷಿಸಿದಳು. ಅವಳಿಗೀಗ ಡಾ॥ ಶ್ವೈಯಿಟ್ಸರ್ ಚಲನಚಿತ್ರದ ಬಗೆಗೆ ವಿರೋಧ ಮಾಡುತ್ತಿದ್ದುದರ ಕಾರಣಗಳು- ಚಿತ್ರ ತೆಗೆಯುವ ಸಂದರ್ಭಗಳಲ್ಲಿ ಆಸ್ಪತ್ರೆ ಕೆಲಸ ಕಾರ್ಯಗಳಿಗೆ ಅಡಚಣೆಯಾಗುತ್ತದೆ. ಮತ್ತು ಆಹಾರದ ಖರ್ಚಿಗೆ ಇನ್ನೂ ಕೆಲ ಜನ ಹೆಚ್ಚಾಗುತ್ತಾರೆ-ಎಂಬುದು ಸರಿಯೆನಿಸಿತ್ತಂತೆ. ಅದರಿಂದ ಆಕೆ ಚಲನಚಿತ್ರ ತೆಗೆಯುವ ತನ್ನ ಅಭಿಪ್ರಾಯವನ್ನು ಕೈಬಿಡುವುದರಲ್ಲಿದ್ದಳು. ಈ ವಿಷಯ ಶ್ವೈಯಿಟ್ಸರ್‌ನ ಕಿವಿಗೂ ಬಿದ್ದು, ಅವನು ಆತನಕ ವಿರೋಧಿಸುತ್ತಿದ್ದ ಚಲನಚಿತ್ರ ತೆಗೆಯುವುದರ ಬಗೆಗೂ ತನ್ನ ಅಭಿಪ್ರಾಯವನ್ನು ಬದಲಿಸಿದನಂತೆ. ಅದೂ ಎರಡು ಷರತ್ತುಗಳ ಮೇಲೆ- ಆ ಚಲನಚಿತ್ರಕ್ಕೆ ಯಾವ ಪ್ರಚಾರವನ್ನೂ ಮಾಡಕೂಡದು, ಮತ್ತು ಅವನು ಸಾಯುವವರೆಗೂ ಅದನ್ನು ಪ್ರದರ್ಶನಕ್ಕೆ ಬಿಡುಗಡೆ ಮಾಡಬಾರದು!

ಶ್ವೈಯಿಟ್ಸರ್‌ನ ನಿರ್ಧಾರದಿಂದ ಸಂತಸಗೊಂಡ ಎರಿಕಾ ಮತ್ತೆ ಅಲ್ಲಿನ ಕಾರ್ಯ ವಿಧಾನಗಳನ್ನೂ ಇನ್ನೂ ವಿವರವಾಗಿ ಅಭ್ಯಸಿಸಿದಳು. ಡಾ॥ ಶ್ವೈಯಿಟ್ಸರ್‌ನ ನಡೆವಳಿಕೆಗಳನ್ನು ಹತ್ತಿರದಿಂದ ನೋಡಿ ಅರಿತುಕೊಂಡಳು. ಸಿಬ್ಬಂದಿಗಳ ಜತೆ ಚರ್ಚಿಸಿದಳು. ಶ್ವೈಯಿಟ್ಸರ್‌ನಲ್ಲಿದ್ದ ಉಲ್ಲಾಸ ಮತ್ತು ಸಹಜತೆಗಳ ಜತೆಗೇ ಅಧಿಕಾರಯುತ ಭಾವನೆಗಳು ಉದ್ಭವವಾಗುವದಕ್ಕೆ, ಆಸ್ಪತ್ರೆಯ ಬಹುಮುಖ ಜವಾಬ್ದಾರಿಗಳೇ ಕಾರಣವೆಂಬುದು ಅವಳಿಗೆ ಮನದಟ್ಟಾಯಿತು. ಅವನ ಸರ್ವಾಧಿಕಾರಿ ನಡೆವಳಿಕೆ [illegible]ನವೆಂಬುದನ್ನು ಯಾರಾದರೂ ಅರಿಯಬಹುದಾಗಿತ್ತು. ಮುಂದೆ

ಆಸ್ಪತ್ರೆಯ ಕಾರ್ಯವಿಧಾನಗಳು ಸಹಜವಾಗಿ ಮೂಡಿಬರುವಂತೆ ಹಲವಾರು ದಿನ ಚಿತ್ರೀಕರಣ ನಡೆಯಿತು. ಆದರೆ ಶ್ವೈಯಿಟ್ಸರ್‌ನ ಹಾಗೂ ಆಸ್ಪತ್ರೆಯ ದಿನನಿತ್ಯದ ಕಾರ್ಯ ಕಲಾಪಗಳಿಗೆ ಅಡ್ಡಿಯಾಗದಂತೆ ಬಹಳ ಎಚ್ಚರಿಕೆವಹಿಸುತ್ತಿದ್ದಳು. ಚಿತ್ರೀಕರಣ ಮುಗಿದ ನಂತರ, ಅವುಗಳನ್ನು ಪರಿಷ್ಕರಿಸಲು ಅಮೆರಿಕೆಗೆ ಧಾವಿಸಿದಳು.

ವಯಸ್ಸಿನ ಭಾರ ಮತ್ತು ಕೆಲಸದ ಒತ್ತಡಗಳಿಂದ ಬಳಲಿದ್ದ ಶ್ವೈಯಿಟ್ಸರ್ ೧೯೫೯ರ ಮೇ ತಿಂಗಳಲ್ಲಿ ವಿಶ್ರಾಂತಿಗಾಗಿ ಆಲ್‌ಸೇಶ್‌ಗೆ ಪ್ರಯಾಣ ಮಾಡಿದ. ಈ ಸಾರಿ ಯುರೋಪಿನಲ್ಲಿದ್ದ ಆರು ತಿಂಗಳ ಸಮಯದಲ್ಲಿ ಹಿಂದಿನಂತೆ ಎಡೆಬಿಡದೆ ತಿರುಗಾಟ ಮಾಡಲಿಲ್ಲ. ಹಾಲೆಂಡ್ ಸ್ಕಾಂಡಿನೇವಿಯ ಮತ್ತು ಇಂಗ್ಲೆಂಡುಗಳಿಗೆ ಕೆಲ ದಿನಗಳ ವೈಯಕ್ತಿಕ ಭೇಟಿಗಳಿಗಾಗಿ ಹೋಗಿಬಂದ. ಉಳಿದ ಸಮಯದಲ್ಲಿ ಮನೆಯಲ್ಲೇ ಇದ್ದುಕೊಂಡು ಗ್ರಂಥರಚನೆ, ಚರ್ಚ್‌ಗಳಲ್ಲಿ ಸಂಗೀತ-ಕಛೇರಿ, ಹಳೆಯ ಸ್ನೇಹಿತರ ಭೇಟಿಗಳಲ್ಲಿ ಕಾಲ ಕಳೆಯುತ್ತಿದ್ದ. ಹೆಲೆನ್ ಸತತ ಕಾಯಿಲೆ ಮತ್ತು ವಯಸ್ಸಿನಿಂದ ಗಂಡನಿಗಿಂತಲೂ ಹೆಚ್ಚು ಬಳಲಿದ್ದಳು. ಮಗಳು ರೆನ್ನಾ ತನ್ನ ಮಕ್ಕಳೊಡನೆ ಗನ್ಸ್‌ಬಾಕ್‌ಗೆ ಬಂದು ಕೆಲದಿನ ಇದ್ದು ಹೋಗುತ್ತಿದ್ದಳು. ಬೆಲ್ಜಿಯಂ ದೇಶದ ಮಹಾರಾಣಿ ಗನ್ಸ್‌ಬಾಕ್‌ನ ಮನೆಗೇ ಭೇಟಿಯಿತ್ತು ಶ್ವೈಯಿಟ್ಸರ್‌ನನ್ನು ಸನ್ಮಾನಿಸಿದಳು.

ಡಾ॥ ಶ್ವೈಯಿಟ್ಸರ್ ಈ ಸಾರಿ ಗನ್ಸ್‌ಬಾಕ್‌ನಲ್ಲಿರುವಾಗ ಚಿತ್ರನಿರ್ಮಾಣವನ್ನು ಮುಂದುವರಿಸಲು ಎರಿಕಾ ಆಂಡರ್‌ಸನ್ ಗನ್ಸ್‌ಬಾಕ್‌ಗೆ ಬಂದಳು. ಜೊತೆಗೆ ಈ ಚಿತ್ರ ನಿರ್ಮಾಣದ ಆರ್ಥಿಕ ಜವಾಬ್ದಾರಿಯನ್ನು ವಹಿಸಿಕೊಂಡಿದ್ದ ಇನ್ನೊಬ್ಬ ಶ್ವೈಯಿಟ್ಸರ್ ಆರಾಧಕ ಜೆರೋಮ್‌ಹಿಲ್ (ರೈಲ್ವೇ ಕಂಪನಿಗಳ ಮಾಲೀಕ ಹಾಗೂ ಮಿಲಿಯಾಧೀಶ್ವರ) ಆಕೆಯ ಜತೆಯಲ್ಲಿ ಬಂದಿದ್ದ. ಆಲ್ಬರ್ಟ್ ಶ್ವೈಯಿಟ್ಸರ್‌ಗೆ ಬಾಲ್ಯದಲ್ಲಿ ಸ್ಫೂರ್ತಿ ನೀಡಿದ ಸ್ಥಳಗಳು ಮತ್ತು ಸನ್ನಿವೇಶಗಳ ಚಿತ್ರೀಕರಣ ಈ ಸಾರಿ ನಡೆಯಿತು.

ವಿಶ್ರಾಂತಿಗಾಗಿಯೇ ಗನ್ಸ್‌ಬಾಕ್‌ಗೆ ಈ ಸಾರಿ ಬಂದಿದ್ದ ಶ್ವೈಯಿಟ್ಸರ್ ಹೆಚ್ಚು ತಿರುಗಾಡಲು ಇಚ್ಛಿಸಿರಲಿಲ್ಲ. ಆದರೆ ಅವನನ್ನು ಗೌರವಿಸಲು ಹಲವು ದೇಶಗಳ ಸರ್ಕಾರಗಳು, ಮತ್ತು ಸಂಘ-ಸಂಸ್ಥೆಗಳು ಆಹ್ವಾನ ಕಳುಹಿಸುತ್ತಲೇ ಇದ್ದವು. ಪಶ್ಚಿಮ-ಜರ್ಮನಿಯ ಪುಸ್ತಕ-ಪ್ರಕಾಶಕರ ಸಂಘದವರು ಹತ್ತು ಸಾವಿರ ಡಾಲರುಗಳ ಬಹುಮಾನವನ್ನಿತ್ತು ಗೌರವಿಸಿದರು. ಪಶ್ಚಿಮ ಜರ್ಮನಿಯ ರಾಷ್ಟ್ರಾಧ್ಯಕ್ಷ ಹಾಗೂ ಶ್ವೈಯಿಟ್ಸರ್‌ನ ಹಳೆಯ ಸ್ನೇಹಿತರಾದ ಥಿಯೋಡರ್ ಹ್ಯೂಸ್ ಫ್ರಾಂಕ್‌ಫರ್ಟ್‌ನಲ್ಲಿ ಖುದ್ದು ಹಾಜರಾಗಿ ಈ ಬಹುಮಾನ ವಿತರಿಸಿದರು. ದೂರದ ಸಂಬಂಧಿ ಹಾಗೂ ಸ್ನೇಹಿತಳಾಗಿದ್ದ ಶ್ರೀಮತಿ ನ್ಯಾಪ್‌ಳನ್ನು ೧೯೦೮ರಲ್ಲಿ ಹ್ಯೂಸ್‌ಗೆ ವಿವಾಹ ಮಾಡಿಸುವಲ್ಲಿ ಶ್ವೈಯಿಟ್ಸರ್ ಪ್ರಮುಖಪಾತ್ರವಹಿಸಿದ್ದ. ಅವರ ಮದುವೆಯ

ಸಂದರ್ಭದಲ್ಲೂ ಧರಿಸಿದ ಕಪ್ಪು ಬಣ್ಣದ ಫ್ರಾಕ್ ನಿಲುವಂಗಿಯನ್ನೇ ಈ ಸಮಾರಂಭದಲ್ಲೂ ಹಾಕಿ ಕೊಂಡಿದ್ದನ್ನು ಅಧ್ಯಕ್ಷ ಹ್ಯೂಸ್ ಜ್ಞಾಪಿಸಿಕೊಂಡ. ಅದನ್ನು ಹೊಲಿದ ಗನ್ಸ್‌ಬಾಕ್‌ನ ಚಿಪ್ಪಿಗನ ಕಾರ್ಯಕುಶಲತೆಯನ್ನು ಹೊಗಳಿ ಹಾಸ್ಯಚಟಾಕಿ ಹಾರಿಸಿದರಂತೆ! ಈ ಬಹುಮಾನದ ಬಹಳಷ್ಟು ಹಣವನ್ನು ಯುದ್ಧಕಾಲದ ಜರ್ಮನಿಯ ನಿರಾಶ್ರಿತರಿಗೂ, ಮತ್ತು ಕೆಲವು ನಿರ್ಗತಿಕ ಬರಹಗಾರರಿಗೂ, ಶ್ವೈಯಿಟ್ಸರ್ ದೇಣಿಗೆ ನೀಡಿದ. ಶ್ವೈಯಿಟ್ಸರ್‌ನ ಕೆಲಸ-ಕಾರ್ಯಗಳಿಗೆ ಸಹಾಯ ಒದಗಿಸಲು ಇಂಗ್ಲೆಂಡಿನಲ್ಲಿ ಸ್ಥಾಪನೆ ಯಾಗಿದ್ದ ಸಂಘ-ಸಂಸ್ಥೆಗಳವರು ಹತ್ತು ಸಾವಿರ ಪೌಂಡುಗಳ ಧನಸಹಾಯವನ್ನು ಈ ಸಮಯದಲ್ಲೇ ಕಳುಹಿಸಿದರು. ಈ ಮೊಬಲಗಿನ ಮುಕ್ಕಾಲು ಪಾಲು ಹಣವನ್ನು ಅವನ ಸಹಾಯಕರಾಗಿ ಬಹಳ ಕಾಲದಿಂದಲೂ ಕೆಲಸ ಮಾಡುತ್ತಿದ್ದವರ ನಿವೃತ್ತಿ-ವೇತನದ ಸಲುವಾಗಿ ತೆಗೆದಿರಿಸಿ, ಉಳಿದ ಮೊಬಲಗನ್ನು ಆಸ್ಪತ್ರೆಯ ಖರ್ಚಿಗಾಗಿ ಕಳಿಸಿಕೊಟ್ಟ. ಸ್ವಿಡನ್‌ನ ರೆಡ್‌ಕ್ರಾಸ್ ಸೊಸೈಟಿಯವರ ಮಹೋನ್ನತ ಪ್ರಶಸ್ತಿ-ಪದಕ (GRAND-MEDAL) ಮತ್ತು ಸ್ವೀಡನ್ನಿನ ರಾಯಲ್-ಅಕಾಡೆಮಿ ಆಫ್ ಮ್ಯೂಸಿಕ್ ಸಂಸ್ಥೆಯ ಗೌರವ-ಸದಸ್ಯತ್ವ ಸಹಾ ಈ ಸಾರಿ ಲಭಿಸಿದವು.

ಅಕ್ಟೋಬರ್ ಸಮಯಕ್ಕೆ ಚಿತ್ರೀಕರಣ ಮುಗಿದು ಧ್ವನಿ-ಮುದ್ರಣ ಆರಂಭ ವಾಯಿತು. ಅದರ ಬಹುಪಾಲು ವ್ಯಾಖ್ಯಾನವನ್ನು ಶ್ವೈಯಿಟ್ಸರ್‌ನೇ ಮಾಡಿದ್ದು, ಅವನ ಧ್ವನಿಯಲ್ಲೇ ಮುದ್ರಣವಾದದ್ದೊಂದು ವೈಶಿಷ್ಟ್ಯ.

ಯಾವುದೇ ವಿಧದ ಆಧುನಿಕ ಯಾಂತ್ರೀಕರಣದ ಬಗೆಗೆ ಶ್ವೈಯಿಟ್ಸರ್‌ನ ವಿರೋಧವಿತ್ತೆಂಬ ಭಾವನೆ ಆಗ ಜನಜನಿತವಾಗಿತ್ತು. ಕಾರುಗಳನ್ನು ಉಪಯೋಗಿಸುವ ವಿಷಯದಲ್ಲೂ ಅದೇ ಅಭಿಪ್ರಾಯವಿದ್ದರೂ, ಕೆಲ ಸಾರಿ ಅವುಗಳಲ್ಲಿ ಪ್ರಯಾಣ ಮಾಡುವುದು ಅವನಿಗೇ ಅನಿವಾರ್ಯವಾಗುತ್ತಿತ್ತು. ಎರಿಕಾ ಯುರೋಪಿನಲ್ಲಿದ್ದಾಗಲೆಲ್ಲಾ ಶ್ವೈಯಿಟ್ಸರ್‌ನ ತಿರುಗಾಟಗಳಿಗೆ ಆಕೆಯ ಕಾರನ್ನೇ ತಂದು ವಾಹನ-ಚಾಲಕಳಾಗಿಯೂ ಸಹಾಯ ಮಾಡುತ್ತಿದ್ದಳು. ಶ್ವೈಯಿಟ್ಸರ್ ಕಷ್ಟ ದಲ್ಲಿರುವ ಇತರರಿಗೆ ಸಹಾಯಮಾಡಲು ತಾನಾಗೇ ಮುಂದೆಬಂದ ಎರಡು ಪ್ರಸಂಗಗಳು ಈ ತಿರುಗಾಟದಲ್ಲಿ ಪ್ರಕಟವಾದವು.

ಶ್ವೈಯಿಟ್ಸರ್ ಒಂದು ಸಾರಿ ಎರಿಕಾಳ ಜೊತೆ ಪ್ರಯಾಣ ಹೊರಟಿದ್ದ. ಕಾರು ಒಂದು ಊರಿನ ಬೀದಿಯಲ್ಲಿ ಚಲಿಸುತ್ತಿದ್ದಾಗ, ಬಾಲಕಿಯೊಬ್ಬಳು ಅತ್ಯವಸರದಿಂದ ಓಡಿಹೋಗುವುದನ್ನು ಗಮನಿಸಿದ. ತಕ್ಷಣ ಕಾರನ್ನು ನಿಲ್ಲಿಸಿ ಅವಳನ್ನು ಅದರಲ್ಲಿ ಕೂರಿಸಿಕೊಂಡ. ಕಾಯಿಲೆಯಾಗಿರುವ ಅವಳ ತಾಯಿಗೆ ಮದ್ದನ್ನು ಕೊಂಡುತರಲು ಅಂಗಡಿಗೆ ಅವಳು ಹೋಗುತ್ತಿರುವ ವಿಷಯ ತಿಳಿಯಿತು. ಔಷಧಿ ಅಂಗಡಿಯಲ್ಲಿ

ಅವಳಿಗೆ ಚಾಕಲೇಟ್ ಕೊಡುವ ಅಭ್ಯಾಸವಿದೆಯೇ ಎಂದು ವಿಚಾರಿಸಿ ಅವಳ ಮನಸ್ಸನ್ನು ಮುದಗೊಳಿಸಿದ. ಅವನು ಬಾಲಕನಾಗಿದ್ದಾಗ ಔಷಧಿ ಅಂಗಡಿಯವರು ಚಾಕಲೇಟು ಕೊಡುತ್ತಿದ್ದ ವಿಷಯ ತಿಳಿಸಿ ಈ ಅಂಗಡಿಯವನಿಗೂ ಅದೇ ರೀತಿ ಹೇಳುವಂತೆ ಹೇಳಿ, ಅವಳು ತಲ್ಪಬೇಕಾದ ಜಾಗದಲ್ಲಿ ಬಿಟ್ಟು ಮುಂದೆ ಪ್ರಯಾಣ ಮಾಡಿದ.

ಮತ್ತೊಂದು ಸಾರಿ ದಾರಿಯಲ್ಲಿ ಸಪ್ಪೆ ಮೋರೆಯಿಂದ ನಡೆದುಕೊಂಡು ಹೋಗುತ್ತಿದ್ದ ಯುವಕನನ್ನು ಕರೆದು ಕಾರಿನಲ್ಲಿ ಕೂರಿಸಿಕೊಂಡ. ಮಾನಸಿಕವಾಗಿ ಚಿಂತಾಕ್ರಾಂತನಾಗಿ ಕಾಣುತ್ತಿದ್ದ ಆ ಯುವಕನಿಗೆ ಹಲವು ಪ್ರಶ್ನೆಗಳನ್ನು ಹಾಕಿ ಅವನಿಗಿದ್ದ ತೊಂದರೆಗಳ ಬಗೆಗೆ ಮಾಹಿತಿ ಪಡೆದ. ತನಗೆ ಸಹಾಯ ಮಾಡುವವರಾರೂ ಇಲ್ಲವೆಂಬ ಭಾವನೆಯಿಂದ ಜೀವನದಲ್ಲಿ ಜಿಗುಪ್ಸೆಯುಂಟಾಗಿ ಆ ಯುವಕ ಸನ್ಯಾಸ ಸ್ವೀಕರಿಸುವ ತಯಾರಿಯಲ್ಲಿದ್ದ. ಇನ್ನೊಬ್ಬರ ಸಹಾಯದಿಂದ ಬಾಳುವೆ ನಡೆಸುವ ಆಶೆಯನ್ನು ಬಿಟ್ಟು, ಅವರವರ ಸ್ವಶಕ್ತಿಯಿಂದಲೇ ತಮ್ಮ ಜೀವನದ ಮಾರ್ಗಗಳನ್ನು ರೂಪಿಸಿಕೊಳ್ಳಬೇಕೆಂದು ಶ್ವೈಯಿಟ್ಸರ್ ಹೇಳಿದ ಬುದ್ಧಿವಾದ ಯುವಕನಿಗೆ ಹಿಡಿಸಿತು. ತಾನು ಕಾರಿನಲ್ಲಿ ಪ್ರಯಾಣಕ್ಕೆ ಅವಕಾಶ ಬೇಡದಿದ್ದರೂ ಆ ವೃದ್ಧನೇ ಮುಂದಾಗಿ ಕೂರಿಸಿಕೊಂಡು ನುಡಿದ ಹಿತವಚನದಲ್ಲಿ ತಿರುಳಿದೆಯೆಂಬ ನಂಬಿಕೆ ಯುವಕನಲ್ಲುಂಟಾಯಿತಂತೆ. ಸನ್ಯಾಸಿಯಾಗುವ ನಿರ್ಧಾರವನ್ನು ಕೈಬಿಟ್ಟು ಸ್ವತಂತ್ರ ಜೀವನ ನಡೆಸುವ ಭರವಸೆಯಿತ್ತು ತಾನು ತಲಪಬೇಕಾದ ಊರಲ್ಲಿ ಇಳಿದು ಹೋದ!

೧೯೫೪ರ ಡಿಸೆಂಬರ್‌ನಲ್ಲಿ ಶ್ವೈಯಿಟ್ಸರ್ ಮತ್ತೆ ಲ್ಯಾಂಬರೀನೆಗೆ ಹಿಂದಿರುಗಿದಾಗ ಆಸ್ಪತ್ರೆ ಸುವ್ಯವಸ್ಥಿತವಾಗಿ ಮುಂದುವರಿಯುತ್ತಿತ್ತು. ಆದರೆ ಬಹಳ ಹಿಂದೆ ಕಟ್ಟಿದ್ದ ಕುಷ್ಠ ರೋಗಿಗಳ ವಿಭಾಗ ಶಿಥಿಲವಾಗತೊಡಗಿತ್ತು. ಈ ರೋಗದ ಚಿಕಿತ್ಸೆಗೆ ಪ್ರಯೋಗಿಸಲಾಗುತ್ತಿದ್ದ ಹೊಸ ಮದ್ದಿನಿಂದ ಒಳ್ಳೆಯ ಪರಿಣಾಮಗಳಾಗುತ್ತಿದ್ದು ಅಲ್ಲಿಗೆ ಬರುತ್ತಿದ್ದ ಕುಷ್ಠರೋಗಿಗಳ ಪ್ರಮಾಣ ಹೆಚ್ಚಾಗುತ್ತಲೇ ಇತ್ತು. ಆದರಿಂದ ಕುಷ್ಠರೋಗಿಗಳ ವಿಭಾಗವನ್ನು ಹೊಸದಾಗಿ ನಿರ್ಮಿಸುವ ನಿರ್ಧಾರ ಮಾಡಬೇಕಾಯಿತು. ಅವರಿಗಾಗಿ ಪ್ರತ್ಯೇಕ ವಸಾಹತನ್ನೇ ನಿರ್ಮಾಣ ಮಾಡುವ ಯೋಜನೆ ತಯಾರಾಯಿತು. ಅದೊಂದು ಎಲ್ಲಾ ವಿಧಗಳಿಂದ ಸ್ವಪರಿಪೂರ್ಣ ಹಳ್ಳಿಯಂತೆ ಆಗಿ, ರೋಗ ಗುಣವಾದ ನಂತರವೂ ತಮ್ಮ ಊರುಗಳಿಗೆ ವಾಪಸಾಗಲು ಆಗದಿದ್ದವರ ಮರುವಸತಿಯೂ ಅಲ್ಲೇ ಆಗಬೇಕೆಂಬುದು ಶ್ವೈಯಿಟ್ಸರ್‌ನ ಉದ್ದೇಶ. ಕಟ್ಟಡಗಳ ನಿರ್ಮಾಣಕ್ಕೆ ಬೇಕಾಗುವ ಎಲ್ಲಾ ಸಿದ್ಧತೆಗಳನ್ನೂ ಮಾಡಿದ್ದಲ್ಲದೆ ಬಡಗಿ ಮಾನೆನ್ ಜಾಲಿಯನ್ನು ಮತ್ತೆ ಕರೆಸಿಕೊಂಡು ಕೆಲಸ ಶುರುಮಾಡಿದ.

ಆ ವರ್ಷ ಮಾರ್ಚ್ ಸಮಯಕ್ಕೆ ಚಲನಚಿತ್ರದ ಮುಂದುವರಿದ

ಚಿತ್ರೀಕರಣಕ್ಕಾಗಿ ಎರಿಕಾ ಆಂಡರ್‌ಸನ್ ಲ್ಯಾಂಬರೀನೆಗೆ ಬಂದಳು. ಗನ್ಸ್‌ಬಾಕ್‌ನಲ್ಲಿ ತೆಗೆದ ಚಿತ್ರಗಳು ತೃಪ್ತಿಕರವಾಗಿದ್ದುದರ ಬಗೆಗೂ, ಶ್ವೆಯಿಟ್ಸರನ ಸಹಕಾರಕ್ಕೂ ವಂದಿಸಿ ಜೆರೋಮ್‌ಹಿಲ್ ಪತ್ರಬರೆದಿದ್ದ. ತನ್ನ ಬಗೆಗೆ ಹಿಲ್ ತೆಗೆದುಕೊಳ್ಳುತ್ತಿದ್ದ ಆಸಕ್ತಿ ಮತ್ತು ಮಾಡುತ್ತಿದ್ದ ಹಣವ್ಯಯದ ಬಗೆಗೆ ಕಾಗದ ಬರೆದು, ಮುಂದೆ, ಹಿಲ್ ಆರ್ಥಿಕ ಪರಿಸ್ಥಿತಿಯೇನಾದರೂ ಕುಸಿದರೆ ಅದಕ್ಕೆ ತಾನೇ ಕಾರಣವೆಂದು ಜನ ದೂರಬಹುದು ಎಂದು ಛೇಡಿಸಿದ್ದ! ಹಿಲ್ ಮತ್ತು ಎರಿಕಾ ಎಷ್ಟೇ ಅವಸರದಲ್ಲಿದ್ದರೂ ಚಿತ್ರೀಕರಣದ ಗತಿ ನಿಧಾನವಾಗೇ ಸಾಗಿತ್ತು. ಆಗಿನ ಅಂದಾಜಿನ ಪ್ರಕಾರ ಚಿತ್ರವನ್ನು ಪೂರ್ಣ ಗೊಳಿಸಲು ಇನ್ನೂ ಆರು ವರ್ಷಗಳು ಬೇಕಾಗಿತ್ತು. ಶ್ವೆಯಿಟ್ಸರ್ ಗತಿಸುವವರೆಗೂ ಅದನ್ನು ಪ್ರದರ್ಶನಕ್ಕೆ ಬಿಡುಗಡೆ ಮಾಡಬಾರದೆಂಬ ಷರತ್ತು ಇದ್ದುದರಿಂದ ಆ ಬಗೆಗೆ ಅವಸರವೂ ಇರಲಿಲ್ಲ. ವೈಯಕ್ತಿಕ ಹೊಗಳಿಕೆ ಮತ್ತು ಹೆಚ್ಚುಗಾರಿಕೆಯ ಪ್ರದರ್ಶನ ಶ್ವೆಯಿಟ್ಸರ್‌ಗೆ ಎಂದೂ ಹಿಡಿಸಿರಲಿಲ್ಲ. ಅದರಿಂದಲೇ ತಾನು ಜೀವಂತವಾಗಿರು ವವರೆಗೂ ಪ್ರದರ್ಶನ ಮಾಡಬಾರದೆಂಬ ಕಠಿಣ ಷರತ್ತನ್ನೂ ಹಾಕಿದ್ದು ಎರಿಕಾ ಮತ್ತು ಜೆರೋಮ್‌ಹಿಲ್ ತನ್ನ ಇಷ್ಟವನ್ನು ನೆರವೇರಿಸುವರೆಂಬ ನಂಬಿಕೆ ಅವನಿಗೆ ದೃಢವಾಗಿತ್ತು.

ಯುರೋಪಿನಲ್ಲಿ ಕೆಲವು ಕಡೆ ಸಂಗೀತ ಕಛೇರಿ ನಡೆಸುವ ಮತ್ತು ಕೆಲವು ಸಂಗೀತದ ರಾಗಗಳನ್ನು ಧ್ವನಿಮುದ್ರಣ ಮಾಡುವ ಉದ್ದೇಶಕ್ಕಾಗಿ ಜುಲೈ ೧೯೫೧ರಲ್ಲಿ ಅಲ್ಲಿಗೆ ಹೋಗಬೇಕಾಯಿತು. ಅವನಿಗೆ ಅತ್ಯಂತ ಪ್ರಿಯವಾದ ಗನ್ಸ್‌ಬಾಕ್ ಚರ್ಚ್‌ನ ಆರ್ಗನ್‌ನಲ್ಲೇ ಕೆಲವು ರಾಗಗಳನ್ನು ನುಡಿಸಿ ಧ್ವನಿಮುದ್ರಣ ಮಾಡಿಸಲು ಅಮೆರಿಕಾದಿಂದ ನೈಸ್‌ಬರ್ಗರ್ ಬಂದಿದ್ದರು. ಶ್ವೆಯಿಟ್ಸರ್‌ನ ಅಳಿಯ ಜೀನ್ ಎಕ್ಕಾರ್ಟ್ (ನುರಿತ ಆರ್ಗನ್ ತಯಾರಕ ಹಾಗೂ ರೆನ್ನಾಳ ಪತಿ) ಈ ಸಮಯದಲ್ಲಿ ಗನ್ಸ್‌ಬಾಕ್‌ಗೆ ಬಂದು ಸಹಾಯ ಮಾಡಿದ. ಲ್ಯಾಂಬರೀನೆಗೆ ಹಿಂದಿರುಗುವ ಮೊದಲು ಫ್ರೆಂಚ್-ಅಕಾಡೆಮಿ-ಆಫ್ ಮಾರಲ್ ಆ್ಯಂಡ್ ಪೊಲಿಟಿಕಲ್ ಸೈನ್ಸ್ ಸಂಸ್ಥೆಯವರು ಗೌರವ-ಸದಸ್ಯನಾಗಿ ಆಯ್ಕೆ ಮಾಡಿ ಸನ್ಮಾನಿಸಿದರು.

ಲ್ಯಾಂಬರೀನೆಗೆ ಹಿಂತಿರುಗಿದ ಶ್ವೆಯಿಟ್ಸರ್ ಕುಷ್ಠರೋಗಿಗಳ ವಸಾಹತಿನ ನಿರ್ಮಾಣದ ಕೆಲಸದಲ್ಲಿ ತಲ್ಲೀನನಾದ. ಕಟ್ಟಡಗಳ ಕೆಲಸವನ್ನು ಗುತ್ತಿಗೆದಾರರಿಗೆ ಕೊಡಬಹುದೆಂಬ ಸಲಹೆಗಳಿದ್ದರೂ ಶ್ವೆಯಿಟ್ಸರ್ ಒಪ್ಪಿಕೊಳ್ಳಲಿಲ್ಲ. ಅತಿ ಆಶೆಯ ಗುತ್ತಿಗೆದಾರರು ಆಫ್ರಿಕಾದ ಕೂಲಿಗಳಿಗೆ ಕಡಿಮೆ ಸಂಬಳ ಕೊಟ್ಟು ಹೆಚ್ಚು ಹಣವನ್ನು ಕಬಳಿಸುವುದನ್ನು ತಪ್ಪಿಸುವ ಉದ್ದೇಶ ಅವನದು. ಅಲ್ಲದೆ ಆಸ್ಪತ್ರೆ ಮತ್ತು ವಸಾಹತನ್ನು ಯಾರ ಉಪಯೋಗಕ್ಕಾಗಿ ನಿರ್ಮಿಸಲಾಗುತ್ತಿದೆಯೋ ಅವರೂ ಸಹಾ ಭಾಗಿಗಳಾಗ ಬೇಕೆಂಬುದು ಅವನ ಮನೋಭಾವ ಕೂಡ.

# ೨೦. ನೋಬೆಲ್ ಶಾಂತಿ-ಪಾರಿತೋಷಕ

ಡಾ॥ ಆಲ್ಬರ್ಟ್ ಶ್ವೈಯಿಟ್ಸರ್‌ನ ನಿಸ್ವಾರ್ಥ ಕೆಲಸ ಮತ್ತು ಸರಳ ವ್ಯಕ್ತಿತ್ವ ಪ್ರಪಂಚಾದ್ಯಂತ ಪಸರಿಸಿತ್ತು. ಶಾಂತಿಪ್ರಿಯನೆಂದು ಹೆಸರಾದ ಅವನು ವಿಶ್ವ-ರಾಜಕೀಯದಲ್ಲಿ ಪಾಲ್ಗೊಳ್ಳಬೇಕೆಂಬ ಒತ್ತಾಯಗಳೂ ಆಗಾಗ್ಗೆ ಬರುತ್ತಿದ್ದವು. ಆದರೆ ಹಚ್ಚಿಕೊಂಡಿರುವ ಕೆಲಸಕಾರ್ಯಗಳೇ ಸಾಕಷ್ಟಿರುವಾಗ ರಾಜಕೀಯ-ಸಮಸ್ಯೆಗಳ ಕೈಹಾಕುವ ಆಸಕ್ತಿ ಅವನಿಗಿರಲಿಲ್ಲ. ವಿಶ್ವಾದ್ಯಂತ ಗೌರವ-ಸನ್ಮಾನಗಳಂತೂ ಬರುತ್ತಲೇ ಇದ್ದವು. ಇವುಗಳಲೆಲ್ಲಾ ಅತ್ಯಂತ ಶ್ರೇಷ್ಠ ನೋಬೆಲ್-ಪಾರಿತೋಷಕವನ್ನು ಸಹಾ ನೀಡಬಹುದಾದ ಗುಸುಗುಸು ಸುದ್ದಿ ಒಂದೆರಡು ವರ್ಷಗಳಿಂದಲೂ ಗಾಳಿಯಲ್ಲಿತ್ತು.

೧೯೫೨ರ ಕೊನೆಯ ಒಂದು ದಿನ ಮಧ್ಯಾಹ್ನದ ಉರಿಬಿಸಿಲಿನಲ್ಲಿ ಶ್ವೈಯಿಟ್ಸರ್ ಆಸ್ಪತ್ರೆಯ ಕಟ್ಟಡದ ಮೇಲ್ಚಾವಣಿಯ ಜಿಂಕ್-ಶೀಟ್ ಒಂದನ್ನು ಮೊಳೆಹೊಡೆದು ಕೂರಿಸುವುದರಲ್ಲಿ ಮಗ್ನನಾಗಿದ್ದ. ಇಬ್ಬರು ಆಫ್ರಿಕನ್ನರು ಅವನಿಗೆ ಸಹಾಯ ಮಾಡುತ್ತಿದ್ದರು. ಸ್ವೀಡನ್ನಿನಿಂದ ಅಲ್ಲಿಗೆ ಆಗತಾನೆ ಬಂದವರೊಬ್ಬರು ಅವನಿಗೆ ನಮಸ್ಕರಿಸಿ ''ಡಾ॥ ಶ್ವೈಯಿಟ್ಸರ್‌ರೇ ಸ್ಟಾಕ್‌ಹೋಂನಿಂದ ನನ್ನನ್ನು ಇಲ್ಲಿಗೆ ಕಳುಹಿಸಿದ್ದಾರೆ....'' ಎನ್ನುವಷ್ಟರಲ್ಲೇ ಶ್ವೈಯಿಟ್ಸರ್ ''ಹೌದೇ, ಬಹುಶಃ ನನ್ನ ಈ ದುರಸ್ತಿ ಕಾರ್ಯದಲ್ಲಿ ಸಹಾಯ ಮಾಡುವುದಕ್ಕೇ ಕಳುಹಿಸಿರಬೇಕು, ಸ್ವಲ್ಪ ಮೇಲೆ ಬಂದು ಈ ಜಿಂಕ್‌ಶೀಟ್‌ನ ಆ ತುದಿಯನ್ನು ಸ್ವಲ್ಪ ಬಗ್ಗಿಸಿ ಒತ್ತಿ ಹಿಡಿದುಕೊಳ್ಳುವಿರಾ?'' ಎಂದು ಮೇಲೇರಲು ಏಣಿಯ ಕೈ ತೋರಿಸಿದ.

ಸ್ವೀಡನ್ನಿನಿಂದ ಬಂದ ಮನುಷ್ಯ ಮೊದಲು ಅವಾಕ್ಕಾದ. ಅವನೂ ಇಂಥ ಹಲವು ಕೃಷಿಕರ ಮನೆಗಳನ್ನು ಕಟ್ಟಿ ಅನುಭವ ಇದ್ದವನೇ. ತಕ್ಷಣ ಸಾವರಿಸಿಕೊಂಡು ಚಾವಣಿಯ ಮೇಲೇರಿ ಜಿಂಕ್-ಶೀಟ್‌ನ ತುದಿಯನ್ನು ಒತ್ತಿಹಿಡಿದು ಅದನ್ನು ಸರಿಯಾಗಿ ಕೂರಿಸಲು ಸಹಕರಿಸಿದನು.

ಕೆಲಸ ಮುಗಿದ ನಂತರ ಇಬ್ಬರೂ ಕೆಳಗಿಳಿದರು. ಕುಶಲ-ಪ್ರಶ್ನೆಗಳಾದ ನಂತರ ಸ್ವೀಡನ್ನಿನಿಂದ ಬಂದವರು ನೋಬೆಲ್ ಪಾರಿತೋಷಕ ಸಮಿತಿಯವರು. ಅವನಿಗೆ ನೋಬೆಲ್ ಶಾಂತಿ-ಪಾರಿತೋಷಕವನ್ನು ನೀಡಲು ಮಾಡಿದ ನಿರ್ಧಾರವನ್ನು ಬಹಿರಂಗಪಡಿಸಿದರು. ಅದನ್ನು ಸ್ವೀಕರಿಸಲು ಶ್ವೈಯಿಟ್ಸರ್ ಅಲ್ಲಿಗೆ ಬರಬೇಕಾಗುತ್ತದೆ ಎಂದೂ ಹೇಳಿದರು. ''ನೋಬೆಲ್ ಪಾರಿತೋಷಕವನ್ನು ಸ್ವೀಕರಿಸಲು ನನ್ನ ಒಪ್ಪಿಗೆಯಿದೆ. ನನಗೆ ಅದೊಂದು ಅತ್ಯಂತ ಹೆಚ್ಚಿನ ಗೌರವವೆಂದು ಭಾವಿಸುತ್ತೇನೆ.

ಆದರೆ ಇಲ್ಲಿ ಹೆಚ್ಚಿನ ಕೆಲಸದ ಜವಾಬ್ದಾರಿ ಇರುವುದರಿಂದ ಈ ವರ್ಷ ಸ್ಟಾಕ್‌ಹೋಂಗೆ ಬಂದು ಸ್ವೀಕರಿಸಿ ಭಾಷಣ ಮಾಡಲು ಸಾಧ್ಯವಾಗಲಾರದು. ಕುಷ್ಠರೋಗಿಗಳ ವಸಾಹತಿನ ನಿರ್ಮಾಣಕ್ಕೆ ಹಣವೇನೋ ಬೇಕಾಗಿದೆ, ಆದರೆ ಅದರ ನಿರ್ಮಾಣ ಪೂರ್ಣವಾಗದೇ ಇಲ್ಲಿಂದ ಹೊರಡುವಂತಿಲ್ಲ'' ಎಂದು ಹೇಳಿ ಮತ್ತೆ ಮೇಲ್ಛಾವಣಿ ಏರಿ ತನ್ನ ಕೆಲಸ ಮುಂದುವರಿಸಿದನಂತೆ ! ೧೯೫೨ರ ನೋಬೆಲ್ ಶಾಂತಿ-ಪಾರಿತೋಷಕವನ್ನು ಅವನ ಗೈರುಹಾಜರಿಯಲ್ಲಿ ನಾರ್ವೆಯಲ್ಲಿದ್ದ ಫ್ರಾನ್ಸಿನ ರಾಯಬಾರಿ ಔಪಚಾರಿಕವಾಗಿ ಸ್ವೀಕರಿಸಿದರು. ಮುಂದೆ ೧೯೫೪ರ ಮೇ ತಿಂಗಳಲ್ಲಿ ಡಾ|| ಶ್ವೈಯಿಟ್ಸರ್ ಓಸ್ಲೋ ನಗರಕ್ಕೆ ತೆರಳಿ ವಿಧ್ಯುಕ್ತವಾಗಿ ಭಾಷಣ ಮಾಡಿ ಪಾರಿತೋಷಕವನ್ನು ಸ್ವೀಕರಿಸಲು ಸಾಧ್ಯವಾಯಿತು.

**ದೋಷಾರೋಪಣೆಗಳು**

ಡಾ|| ಶ್ವೈಯಿಟ್ಸರ್‌ನ ಮಹೋನ್ನತ ವ್ಯಕ್ತಿತ್ವದ ಬಗೆಗೆ ಪ್ರಪಂಚಾದ್ಯಂತ ಪ್ರಚಾರ ನಡೆಯುತ್ತಿರುವಾಗ ನೋಬೆಲ್-ಶಾಂತಿ ಪಾರಿತೋಷಕ ದೊರೆತದ್ದು ಅವನನ್ನು ಒಬ್ಬ ಶಕಪುರುಷನನ್ನಾಗಿ ಮಾಡಿತು. ಲ್ಯಾಂಬರೀನೆಯ ಮಹರ್ಷಿಯನ್ನು ದರ್ಶನಮಾಡಿ ಅಲ್ಲಿ ನಡೆದ 'ಪವಾಡ'ವನ್ನು ಕಣ್ಣಾರೆ ನೋಡಲು ಪ್ರಪಂಚದ ಮೂಲೆ ಮೂಲೆಗಳಿಂದ ವೈದ್ಯರು, ವೈದ್ಯಕೀಯ ಕಾರ್ಯಕರ್ತರು, ಸಮಾಜ-ಸುಧಾರಕರು, ಮತ್ತು ಪತ್ರಿಕಾ ಕರ್ತರು ಅಲ್ಲಿಗೆ ಧಾವಿಸಿ ಬಂದರು. ಪತ್ರಿಕಾ ಪ್ರತಿನಿಧಿಗಳಲ್ಲಿ ಕೆಲವರು ಅವನ ತ್ಯಾಗ, ಸೇವಾ-ಮನೋಭಾವಗಳನ್ನು ಮೆಚ್ಚಿಕೊಂಡಿದ್ದರು. ಆದರೂ ಆಸ್ಪತ್ರೆಯನ್ನು ಇನ್ನೂ ಹಳೇ ಸಂಪ್ರದಾಯದಂತೆ ನಡೆಸುತ್ತಿದ್ದ ರೀತಿ, ವೈದ್ಯಕೀಯ ಕ್ಷೇತ್ರದ ಅತ್ಯಾಧುನಿಕ ಮದ್ದುಗಳು ಮತ್ತು ಯಂತ್ರೋಪಕರಣಗಳನ್ನು ಬಳಸುವಲ್ಲಿ ವಿಳಂಬ-ಧೋರಣೆ, ಆಫ್ರಿಕನ್ನರೊಡನೆ ನಡೆದುಕೊಳ್ಳುತ್ತಿದ್ದ ಸರ್ವಾಧಿಕಾರಿತನ ಇತ್ಯಾದಿಗಳನ್ನು ಟೀಕಿಸಿ ಅವಹೇಳನಮಾಡಿ ಬರೆಯುವವರೂ ಇದ್ದರು. ಬ್ರಿಟನ್ನಿನ ಜೇಮ್ಸ್ ಕ್ಯಾಮರೂನ್ ಇಂಥವರಲ್ಲಿ ಪ್ರಮುಖ. ಆತ ಲ್ಯಾಂಬರೀನೆಗೆ ಬಂದು ಕೆಲಕಾಲ ತಂಗಿದ್ದು ಅಲ್ಲಿನ ಪರಿಸ್ಥಿತಿಯನ್ನು ವಿಮರ್ಶಾತ್ಮಕವಾಗಿ ವೀಕ್ಷಿಸಿದ. ಶ್ವೈಯಿಟ್ಸರ್‌ನ ಜೊತೆ ಹಲವಾರು ಸಲ ಮಾತುಕತೆಗಳಾಗುತ್ತಿದ್ದವು. ಒಂದೊಂದು ಸಲ ಕ್ಯಾಮರೂನ್, ಶ್ವೈಯಿಟ್ಸರ್‌ನ ಕೆಲವು ಕಾರ್ಯವಿಧಾನಗಳನ್ನು ಅಲ್ಲಗಳೆಯುವ ಧಾಟಿಯಲ್ಲಿ ಅಭಿಪ್ರಾಯಗಳನ್ನು ಮಂಡಿಸಿ, ಪ್ರಶ್ನೆ ಕೇಳುತ್ತಿದ್ದ. ಶ್ವೈಯಿಟ್ಸರ್ ಕೆಲಸಾರಿ ಅವನನ್ನು ಛೇಡಿಸುವ ರೀತಿಯಲ್ಲಿ ಉತ್ತರಿಸಿದ್ದೂ ಉಂಟು. ಕ್ಯಾಮರೂನ್ ತನ್ನ ಲೇಖನದಲ್ಲಿ ಶ್ವೈಯಿಟ್ಸರ್‌ನನ್ನು ಒಳ್ಳೆಯ ಕೆಲಸ ಮಾಡಿ ಪ್ರಖ್ಯಾತಿ ಪಡೆದವನೆಂದು ಹೊಗಳಿದ್ದರೂ, ಇತರ ವಿಷಯಗಳನ್ನು ಟೀಕಿಸಿ ಬರೆದಿದ್ದ. ಡಾ|| ಶ್ವೈಯಿಟ್ಸರ್, ಆಫ್ರಿಕನ್ನರ ವಿಷಯದಲ್ಲಿ ಬಹಳ ಅಪನಂಬಿಕೆ ಇರುವವ. ಅವರಿಂದ ಕೆಲಸ ಮಾಡಿಸಿಕೊಳ್ಳುವ ರೀತಿ ಅಸಹನೀಯವಾದದ್ದು;

ಆಸ್ಪತ್ರೆಯಲ್ಲಿ ಶುಚಿತ್ವದ ಬಗೆಗೆ ಹೆಚ್ಚು ಗಮನ ಕೊಡುತ್ತಿಲ್ಲ; ಆಧುನಿಕ ವೈದ್ಯಕೀಯ ತಂತ್ರಗಳಿಗೆ ಅಲ್ಲಿ ಅವಕಾಶವಿಲ್ಲ; ಸಂಶೋಧನೆಗಳಂತೂ ಇಲ್ಲವೇ ಇಲ್ಲ; ಅದರಿಂದ ಅವನ ಆಸ್ಪತ್ರೆಯಿಂದ ಪ್ರಯೋಜನ ಬಹಳ ಕಡಿಮೆ, ಎಂದೆಲ್ಲಾ ಬರೆದು ಶ್ವೈಟ್ಸರ್‌ನ ರೀತಿ-ನೀತಿಗಳನ್ನು ಅಲ್ಲಗಳೆದು ಬರೆದಿದ್ದ. ಅವಿದ್ಯಾವಂತರೂ, ಇನ್ನೂ ಸರಿಯಾದ ವಿವೇಚನಾ-ಶಕ್ತಿಯನ್ನು ಬೆಳೆಸಿಕೊಳ್ಳದ ಆಫ್ರಿಕನ್ನರಿಗೆ ಪೂರ್ಣ ಸ್ವಾತಂತ್ರ ಕೊಡುವ ವಿಷಯದಲ್ಲಿ ಶ್ವೈಯಿಟ್ಸರ್ ಮೊದಲಿನಿಂದಲೂ ವಿರೋಧಿಸುತ್ತಿದ್ದುದು ನಿಜವೇ. ಕ್ಯಾಮರೂನ್ ಈ ದೃಷ್ಟಿಕೋನವನ್ನು ಇನ್ನೂ ವಿಸ್ತರಿಸಿ, ದಕ್ಷಿಣ-ಆಫ್ರಿಕಾದ ಜನಾಂಗ ಪ್ರತ್ಯೇಕವಾದಿಗಳ ಧುರೀಣ ಡಾ॥ ಮೆಲಾನ್‌ರಿಗೆ ಅವನನ್ನು ಹೋಲಿಸಿದ್ದ. ಶ್ವೈಯಿಟ್ಸರ್‌ನೊಡನೆ ಮಾತನಾಡುತ್ತಿದ್ದಾಗ ಮಹಾತ್ಮಾ ಗಾಂಧಿಯವರ ಬಗೆಗೂ ತಿರಸ್ಕಾರ ವ್ಯಕ್ತಪಡಿಸಿದರು ಎಂದು ಟೀಕಿಸಿದ್ದ. ನಿಜ ಸಂಗತಿಯೆಂದರೆ ಡಾ॥ ಶ್ವೈಯಿಟ್ಸರ್‌ಗೆ ಮಹಾತ್ಮಾ ಗಾಂಧಿಯವರ ಬಗೆಗೆ ಹೆಚ್ಚಿನ ಗೌರವಾದರ ಗಳಿದ್ದವು. ಅವನು ಬರೆದ "ಭಾರತೀಯ (ಧರ್ಮ) ಚಿಂತನೆ ಮತ್ತು ಅದರ ವಿಕಸನ" ಗ್ರಂಥದಲ್ಲಿ ಗಾಂಧಿಯವರ ಬಗೆಗೆ ಒಂದು ಸುದೀರ್ಘ ಅಧ್ಯಾಯವನ್ನೇ ಮೀಸಲಾಗಿಟ್ಟು, ಅದರಲ್ಲಿ ಭಾರತದ ಪುರಾತನ ಸಂಸ್ಕೃತಿಯನ್ನು ಆಧುನಿಕ ದೃಷ್ಟಿಯಿಂದ ಪುನರುತ್ಥಾನಗೊಳಿಸಿದ ಮಹಾನುಭಾವ ಎಂದು ಹೊಗಳಿದ್ದಾನೆ.

ಕೆಲ ಸಮಯದ ನಂತರ ಅಮೆರಿಕಾದ ಹೆಸರಾಂತ ಪತ್ರಕರ್ತ ಜಾನ್‌ಗುಂತರ್ ತನ್ನ ವಿಶ್ವಪರ್ಯಟನೆಯ ಅಂಗವಾಗಿ ಲ್ಯಾಂಬರೀನೆಗೂ ಬಂದು ತಂಗಿದ್ದ. ಆಸ್ಪತ್ರೆ ಮತ್ತು ಶ್ವೈಯಿಟ್ಸರ್‌ನ ಕೆಲವು ನಡೆವಳಿಕೆಗಳನ್ನು ಗುಂತರ್ ಟೀಕಿಸಿದ್ದರೂ, ಅವನ ಜೀವನಕ್ರಮದ ಬಗೆಗೆ ಬಹಳ ಸಹಾನುಭೂತಿ ಪಡೆದಿದ್ದ. ಲ್ಯಾಂಬರೀನೆಯನ್ನು ಸಂದರ್ಶಿಸಲು ಬರುವವರು ಅದೊಂದು ಭಾರತದ ಪುರಾತನ, ಮಹರ್ಷಿಗಳ ಆಶ್ರಮದಂತಿರಬಹುದೆಂಬ ಪೂರ್ವಗ್ರಹಪೀಡಿತರಾಗಿ ಅಲ್ಲಿಗೆ ಹೋದವರಿಗೆ ನಿರಾಶೆಯಾಗುವುದು ಸ್ವಾಭಾವಿಕವೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದ.

ಈ ಪತ್ರಕರ್ತರ ಲೇಖನಗಳು ಇಂಗ್ಲೆಂಡ್ ಮತ್ತೂ ಅಮೆರಿಕೆಯ ಶ್ವೈಯಿಟ್ಸರ್‌ನ ಕೆಲವು ಅಭಿಮಾನಿಗಳಲ್ಲಿ ಅವನ ಮಹತ್ವದ ಬಗೆಗೆ ಅನುಮಾನ ಉಂಟುಮಾಡಿದವು. ಹೆಸರುಗಳಿಸಲು ಸೇವೆಯ ಸೋಗು ಹಾಕಿರುವ ಸ್ವಾರ್ಥಿ, ವೈದ್ಯಕೀಯ ವಿಷಯಗಳ ಪೂರ್ಣ ಅರಿವಿಲ್ಲದವನೆಂಬ ಭಾವನೆ ಕೆಲವರಲ್ಲಿ ಮೂಡಿದ್ದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ಅವನನ್ನು ಖುದ್ದು ನೋಡಿದವರು, ಅವನ ಬಗೆಗೆ ಲಭ್ಯವಿದ್ದ ಅಪಾರ ಸಾಹಿತ್ಯವನ್ನು ಹಾಗೂ ಅವನೇ ರಚಿಸಿದ ಗ್ರಂಥಗಳನ್ನು ಓದಿದ ಬಹುಪಾಲು ಜನರಲ್ಲಿ ಅವನೊಬ್ಬ ನಿಸ್ವಾರ್ಥ ಕರ್ಮಯೋಗಿಯೆಂದು ಮೂಡಿದ್ದ ಒಳ್ಳೆಯ ಭಾವನೆಗಳನ್ನು ಇಂಥ ಲೇಖನಗಳು ತೊಡೆದುಹಾಕುವುದರಲ್ಲಿ ವಿಫಲವಾದವೆಂದೇ ಹೇಳಬಹುದು.

ಈ ಸಮಯದಲ್ಲಿ ಡಾ|| ಶ್ವೈಯಿಟ್ಸರ್ ವಿಶ್ವಸಂಸ್ಥೆಯ ಕಾರ್ಯದರ್ಶಿಯಾಗಿ ಆಯ್ಕೆಯಾಗಿದ್ದ ಡ್ಯಾಗ್ ಹ್ಯಾಮರ್‌ಷೀಲ್ಡ್‌ರಿಗೆ ಬರೆದ ಪತ್ರ ಉಲ್ಲೇಖಾರ್ಹ. ಅವರಿಗೆ ಶುಭಾಶಯ ಕಳಿಸುವುದು ಮೂಲ ಉದ್ದೇಶವಾದರೂ, ಆಸ್ಪತ್ರೆಯಲ್ಲಿ ಬಹಳ ಸಮಯ ಸೇವೆ ಸಲ್ಲಿಸಿದ ನುರಿತ ವೈದ್ಯರೊಬ್ಬರಿಗೆ ಫ್ರೆಂಚ್ ವಸಾಹತುಗಳಲ್ಲಿ ಸೇವೆ ಮುಂದುವರಿಸಲು ಸಹಾಯ ಮಾಡಲು ಅವರ ಬೆಂಬಲ ಕೋರಿದ್ದ. ತನ್ನೊಡನೆ ಸಹಕರಿಸಿದವರಿಗೆ ಶ್ವೈಯಿಟ್ಸರ್ ಉಪಕಾರ ಮಾಡುವ ರೀತಿ ಅದಾಗಿತ್ತು. ಡ್ಯಾಗ್ ಹ್ಯಾಮರ್‌ಷೀಲ್ಡ್‌ರೂ ಸಹ ಶ್ವೈಯಿಟ್ಸರ್‌ಗೆ ಉತ್ತರ ಬರೆದು, ನೋಬೆಲ್ ಪಾರಿತೋಷಕ ಲಭ್ಯವಾದುದಕ್ಕೆ ಶುಭಾಶಯ ಕೋರಿದ್ದರು. ಅಲ್ಲದೆ ಅವನು ಸೂಚಿಸಿದ ವೈದ್ಯರಿಗೆ ಸೇವೆಯನ್ನು ಮುಂದುವರಿಸಲು ಅವಕಾಶ ಕಲ್ಪಿಸುವ ಭರವಸೆಯಿತ್ತಿದ್ದರು.

**ಶಾಂತಿ-ಪಾರಿತೋಷಕ ಸ್ವೀಕಾರ**

ನೋಬೆಲ್ ಶಾಂತಿ-ಪಾರಿತೋಷಕ ಡಾ|| ಶ್ವೈಯಿಟ್ಸರ್‌ಗೆ ೧೯೫೨ರಲ್ಲೇ ಲಭಿಸಿದ್ದರೂ, ಅದನ್ನು ಸ್ವತಃ ಸ್ವೀಕರಿಸಿದ್ದು ೧೯೫೪ರ ಮೇ ತಿಂಗಳಲ್ಲಿ. ಆ ವರ್ಷ ಅವನು ಯುರೋಪಿಗೆ ವಿಶ್ರಾಂತಿಗಾಗಿ ತೆರಳಿದ್ದ.

೧೯೫೪ರ ಶರತ್ಕಾಲದಲ್ಲಿ ಡಾ|| ಶ್ವೈಯಿಟ್ಸರ್ ಖುದ್ದು ಓಸ್ಲೋಗೆ ಹೋಗಿ ವಾಡಿಕೆಯಂತೆ ಪಾರಿತೋಷಕ ಸ್ವೀಕಾರ-ಭಾಷಣ ಮಾಡುವುದೆಂದು ಏರ್ಪಾಟಾಯಿತು. ವಿನಾಶಕಾರಿ ಪರಮಾಣು ಬಾಂಬುಗಳ ತಯಾರಿಕೆಯಲ್ಲಿ ಎರಡು ಬೃಹತ್ ರಾಷ್ಟ್ರಗಳಾದ ಅಮೆರಿಕಾ ಮತ್ತೂ ರಷ್ಯಾ ಪೈಪೋಟಿ ನಡೆಸುತ್ತಿದ್ದ ಕಾಲವದು. ವಿಶ್ವಶಾಂತಿಯ ಬಗೆಗೆ ಕಳಕಳಿ ಇದ್ದವರೆಲ್ಲಾ ಡಾ|| ಶ್ವೈಯಿಟ್ಸರ್ ತನ್ನ ನೋಬೆಲ್ ಭಾಷಣದಲ್ಲಿ ಅಣು ಮತ್ತು ಜಲಜನಕ ಬಾಂಬುಗಳಿಂದ ವಿಶ್ವಕ್ಕೆ ಆಗಬಹುದಾದ ಅನಾಹುತದ ಬಗೆಗೆ ಮಾತನಾಡಬಹುದೆಂದು ನಿರೀಕ್ಷಿಸಿದ್ದರು. ಆದರೆ ಶ್ವೈಯಿಟ್ಸರ್‌ನ ನಿಲುವೇ ಬೇರೆಯಾಗಿತ್ತು. ಅಣು ವಿಕಿರಣದ ಅಪಾಯದ ದಿಸೆಯಲ್ಲಿ ಆ ಬಗೆಗೆ ಹೆಚ್ಚು ಮಾಹಿತಿ ಇರುವ ವಿಜ್ಞಾನಿಗಳು ಮಾತನಾಡುವುದು ಸೂಕ್ತ ಎಂಬುದು ಅವನ ಅನಿಸಿಕೆ ಯಾಗಿತ್ತು. ಅದರಿಂದ ಶ್ವೈಯಿಟ್ಸರ್‌ನ ಯೋಚನಾ-ಲಹರಿ ಆ ದಿಸೆಯಲ್ಲಿ ಪ್ರವಹಿಸಲಿಲ್ಲ. ಪ್ರಪಂಚದಲ್ಲಿ ಆ ತನಕ ನಡೆದ ಯುದ್ಧಗಳ ಇತಿಹಾಸ, ಅವುಗಳ ಮೂಲ ಕಾರಣ, ಫಲಿತಾಂಶ ಹಾಗೂ ಅವುಗಳ ಅವಶ್ಯಕತೆ-ಅನಾವಶ್ಯಕತೆಗಳತ್ತ ಅವನ ಮನಸ್ಸು ಹರಿಯತೊಡಗಿದ್ದು, ಬಹುಜನರ ನಿರೀಕ್ಷೆಗೆ ವಿರುದ್ಧವಾಗಿ ಅವನ ಭಾಷಣ ತಯಾರಾಗುತ್ತಿತ್ತು.

ನೋಬೆಲ್ ಪಾರಿತೋಷಕ-ಸ್ವೀಕಾರ-ಸಮಾರಂಭ ಡಾ|| ಶ್ವೈಯಿಟ್ಸರ್ ಜತೆ ಕೆಲಸ ಮಾಡಿ ಸಹಕರಿಸಿದ ಸಹೋದ್ಯೋಗಿಗಳು, ಆಸ್ಪತ್ರೆಯ ಸಿಬ್ಬಂದಿಗಳು ಮತ್ತು

ಅಭಿಮಾನಿಗಳೆಲ್ಲಾ ಅತ್ಯಂತ ಸಂತೋಷ ಮತ್ತು ಸಡಗರದ ಸಮಯವಾಯಿತು. ಅಮೆರಿಕಾದಿಂದ ಎರಿಕಾ ಆಂಡರ್‌ಸನ್, ಎಮ್ಮಿ ಮೊರ್ಟಿನ್, ಚಾರ್ಲ್ಸ್ ಜಾಯ್, ಮೆಲ್ವಿನ್ ಅರ್ನಾಲ್ಡ್ ಮುಂತಾದವರು ಓಸ್ಲೋಗೆ ಬಂದಿದ್ದರು. ಲ್ಯಾಂಬರೀನೆ ಯಿಂದ ಸ್ವಯಂಸೇವಕಿ ಕ್ಲಾರಾ ಉರ್ಕ್ವಾರ್ಟ್ ಬಂದಿದ್ದಳು. ಆದರೆ ಆ ಸಮಯದಲ್ಲಿ ಶ್ವೈಟ್ಸರ್ ದಂಪತಿಗಳಲ್ಲಿ ಸ್ವಲ್ಪ ಮನಸ್ತಾಪ ಹುಟ್ಟಿಕೊಂಡಿದ್ದು ಹೆಲೆನ್, ಶ್ವೈಟ್ಸರ್ ಜತೆ ಓಸ್ಲೋಗೆ ಹೋಗುವುದಿಲ್ಲವೆಂದು ಹಠ ಹಿಡಿದಿದ್ದಳು. ಶ್ವೈಟ್ಸರ್ ಓಸ್ಲೋ ತಲ್ಪಿದ ನಂತರ ಬಹುಶಃ ಮಗಳ ಸಂಧಾನದ ಫಲವಾಗಿ ಅಲ್ಲಿಗೆ ತೆರಳಿ ಜತೆಗೂಡಿದಳು.

ಗನ್ಸ್‌ಬಾಕ್‌ನಿಂದ ಶ್ವೈಟ್ಸರ್‌ನನ್ನು ಓಸ್ಲೋಗೆ ಕರೆಸಿಕೊಳ್ಳಲು ರಾಜ ಮರ್ಯಾದೆಯ ಸೌಕರ್ಯಗಳನ್ನು ಏರ್ಪಡಿಸಿದ್ದರು. ಬಾಹ್ಯ ಆಡಂಬರಗಳಲ್ಲಿ ಆಸಕ್ತಿ ಇರದ, ಮತ್ತು ಮೂರನೇ ದರ್ಜೆ ರೈಲಿನಲ್ಲೇ ಪ್ರಯಾಣ ಮಾಡುವಂತವನಿಗೆ ಪ್ರಥಮ ದರ್ಜೆ ಬೋಗಿಯಲ್ಲಿ ಪ್ರಯಾಣ ಮಾಡುವ ಸಂದರ್ಭ ಮುಜುಗರವನ್ನು ಉಂಟುಮಾಡಿತು. ಅವನು ಬರುವ ಸುದ್ದಿ ತಿಳಿದು ದಾರಿಯುದ್ದಕ್ಕೂ ರೈಲ್ವೇ ನಿಲ್ದಾಣ ಗಳಲ್ಲಿ ದರ್ಶನ-ಲಾಭ ಪಡೆಯಲು ಜನ ಕಿಕ್ಕಿರಿದು ನೆರೆದಿರುತ್ತಿದ್ದರು. ಅವನಿಂದ ಹಸ್ತಾಕ್ಷರ ಪಡೆಯಲು ಇಲ್ಲವೆ ಕೈ ಕುಲುಕುವ ಅವಕಾಶಕ್ಕಾಗಿ ಜನ ಮುನ್ನುಗ್ಗುವುದನ್ನು ತಡೆಯುವುದು ಕಷ್ಟವಾಗುತ್ತಿತ್ತು. ಈ ಜನಸಂದಣಿಯನ್ನು ನೋಡಿ ಅವನ ಕೈಕುಲುಕು ವವರೆಲ್ಲಾ ಲ್ಯಾಂಬರೀನೆಯ ಆಸ್ಪತ್ರೆ ಸಹಾಯಕ್ಕಾಗಿ ಒಂದು ಕ್ರೋನ್ ನಾಣ್ಯ ಕೊಡಬೇಕೆಂದು ನಾರ್ವೇಯ ಪತ್ರಿಕೆಯೊಂದು ಸಲಹೆ ಮಾಡಿತ್ತು!

ಓಸ್ಲೋದಲ್ಲಿ ಶ್ವೈಟ್ಸರ್ ತಂಗಲು ಮಾಡಿದ್ದ ಅತ್ಯಂತ ಆಧುನಿಕ ಏರ್ಪಾಡುಗಳು ಅವನ ಮನಸ್ಸಿಗೆ ಕಿರಿಕಿರಿ ಮಾಡದಿರಲಿಲ್ಲ. ನಲ್ಲಿಗಳಲ್ಲಿ ಸದಾ ಹರಿಯುತ್ತಿದ್ದ ನೀರಿನ ವ್ಯವಸ್ಥೆಯೂ ಅವನಿಗೆ ಅತಿಯೆನಿಸಿತು. ಪ್ರತಿದಿನ ಅವನ ಕೊಠಡಿಗೆ ಬಂದು ಬೀಳುತ್ತಿದ್ದ ಹಾರ ತುರಾಯಿಗಳೂ ಸಹಾ ಬೇಸರ ಉಂಟುಮಾಡುತ್ತಿದ್ದವು. ಹೂವು ಆ ರೀತಿ ಬಾಡಿ ಮುದುಡುವುದನ್ನು ಅವನಿಂದ ಸಹಿಸಲಾಗುತ್ತಿರಲಿಲ್ಲ.

ಪಾರಿತೋಷಕ ನೀಡುವ ಸಮಾರಂಭ ಅದ್ದೂರಿಯಿಂದಲೇ ಜರುಗಿತು. ಎಂಭತ್ತು ನಿಮಿಷಗಳ ಭಾಷಣ ಮಾಡುವ ಅವಕಾಶವಿದೆಯೆಂದು ಮೊದಲು ತಿಳಿಸಿದ್ದರು. ಅದನ್ನು ಕೇವಲ ಮೂವತ್ತೈದು ನಿಮಿಷಗಳಿಗೆ ಕೊನೇ ಘಳಿಗೆಯಲ್ಲಿ ಇಳಿಸಿದ್ದು ಬರೆದು ತಂದ ಭಾಷಣವನ್ನು ಅಳವಡಿಸುವುದಕ್ಕೆ ಕಷ್ಟವಾಯಿತು. ವಯಸ್ಸಾದ ಶ್ವೈಟ್ಸರ್‌ನ ಧ್ವನಿಯಲ್ಲಿ ಹಿಂದಿನ ಗಡಸು ಮತ್ತು ಭಾಷಣದಲ್ಲಿ ಓಘವಿದ್ದಂತೆ ಕಾಣಲಿಲ್ಲ. ಸಮಯ ಕಡಿಮೆಯಾದುದರಿಂದ ಯೋಚನಾ-ಲಹರಿಯಲ್ಲಿ ಗಲಿಬಿಲಿಯಾದಂತಿತ್ತು. ಯುದ್ಧಗಳು ಅನೈತಿಕ ಅಡಿಪಾಯದಿಂದ ಶುರುವಾಗುತ್ತವೆ. ನೈತಿಕ ಕಾರಣದಿಂದಲೇ ಯುದ್ಧಗಳಾಗದಂತೆ ತಡೆಯಬೇಕು. ಅನೈತಿಕತೆಯ ವಿರುದ್ಧ ವಿಶ್ವಾದ್ಯಂತ ಚಳುವಳಿ

ನಡೆದು ಯುದ್ಧಗಳಾಗದಂತೆ ಶ್ರಮಿಸಬೇಕೆಂಬುದು ಅವನ ಭಾಷಣದ ಸಾರಾಂಶ. ಆದರೆ ಭಾಷಣ ನಿರೀಕ್ಷಿಸಿದಷ್ಟು ಪರಿಣಾಮಕಾರಿಯಾಗಿರಲಿಲ್ಲವೆಂಬುದು ಎಲ್ಲರ ಅಭಿಪ್ರಾಯ.

## ೨೧. ಪರಮಾಣು ಬಾಂಬಿನ ಸಮಸ್ಯೆ

ಡಾ॥ ಶ್ವೈಯಿಟ್ಸರ್‌ಗೆ ನೋಬೆಲ್ ಶಾಂತಿ ಪಾರಿತೋಷಕ ದೊರೆತ ಸುದ್ದಿ ೧೯೫೪ರಲ್ಲಿ ಬಿತ್ತರವಾದಾಗಿನಿಂದ ಅವನೊಬ್ಬ ಪ್ರಮುಖ ಶಾಂತಿದೂತನೆಂಬ ಭಾವನೆ ವಿಶ್ವದೆಲ್ಲೆಡೆ ಮೂಡಿಬಂತು. ಜಪಾನಿನ ಹಿರೋಷಿಮಾ ಮತ್ತು ನಾಗಾಸಾಕಿ ನಗರಗಳ ಮೇಲೆ ಸಿಡಿದು ಎರಡು ಅಣುಬಾಂಬುಗಳಿಂದ ಮಾನವ ಕುಲಕ್ಕೆ ಆದ ಕಷ್ಟ ನಷ್ಟಗಳೂ ಜನರ ಮನಸ್ಸಿನಿಂದ ಅಳಿಸಿಹೋಗಿರಲಿಲ್ಲ. ಇನ್ನೊಂದು ಪರಮಾಣು ಸಮರ ನಡೆದರೆ ಮನುಕುಲದ ವಿನಾಶ ಖಂಡಿತವೆಂಬ ಭಾವನೆ ಪ್ರಜ್ಞಾವಂತರನ್ನೆಲ್ಲಾ ಆವರಿಸಿಕೊಂಡಿತ್ತು. ಡಾ॥ ಶ್ವೈಯಿಟ್ಸರ್ ಸಹಾ ಈ ಸಮಸ್ಯೆಯನ್ನು ದೀರ್ಘವಾಗಿ ಪರಿಶೀಲಿಸಿದ್ದ. ಜಪಾನಿನಲ್ಲಿ ಅಣುಬಾಂಬುಗಳ ಸಿಡಿತದಿಂದ ಆದ ಸಾವು ಮತ್ತು ಉಳಿದವರ ನೋವು, ನರಳಾಟಗಳ ವರದಿಗಳು ಅವನ ಮನಕರಗಿಸಿದ್ದವು. ಅಣು ಬಾಂಬುಗಳ ತಯಾರಿಕೆಗೆ ಮೂಲ ಪ್ರೇರಕರೆನಿಸಿದ್ದ ಡಾ॥ ಆಲ್ಬರ್ಟ್ ಐನ್‌ಸ್ಟೀನ್ ಮತ್ತು ರಾಬರ್ಟ್ ಓಪನ್ ಹೈಮರ್‌ಗಳೊಡನೆ ಸಂಪರ್ಕವಿಟ್ಟುಕೊಂಡಿದ್ದಲ್ಲದೆ ಈ ಸಮಸ್ಯೆಯ ಬಗೆಗೆ ಅವರೊಡನೆ ಪತ್ರವ್ಯವಹಾರವನ್ನೂ ನಡೆಸುತ್ತಿದ್ದ. ಅವರಿಬ್ಬರ ಗೌರವಾದರಗಳ ವ್ಯಕ್ತಿಯೂ ಆಗಿದ್ದ. ಈ ಹಿನ್ನೆಲೆಯಲ್ಲಿ ಪ್ರಪಂಚದ ಮೂಲೆ ಮೂಲೆಗಳಿಂದ ಜನರು ಡಾ॥ ಶ್ವೈಯಿಟ್ಸರ್‌ಗೆ ಪತ್ರ ಬರೆದು ಅಣುಬಾಂಬಿನ ಸಮಸ್ಯೆಯನ್ನು ಪರಿಹರಿಸಲು ಅವನು ಪ್ರಮುಖ ಪಾತ್ರ ವಹಿಸಬೇಕೆಂದು ಕೇಳಿಕೊಳ್ಳುತ್ತಿದ್ದರು. ಅಣು ಸಮರವನ್ನು ತಪ್ಪಿಸಲು ಎಲ್ಲಾ ಪ್ರಯತ್ನಗಳನ್ನೂ ಮಾಡಲೇಬೇಕೆಂಬ ಆಶಯ ಅವನಿಗಿದ್ದರೂ, ನೇರವಾಗಿ ಕಣಕ್ಕಿಳಿದು ವಿಶ್ವ-ರಾಜಕೀಯದ ತೊಡಕುಗಳಲ್ಲಿ ಸಿಲುಕುವುದು ಅವನಿಂದಾಗದ ಕೆಲಸವೆಂಬ ಅರಿವೂ ಅವನಿಗಿತ್ತು.

ಆ ಸಮಯದಲ್ಲಿ ಅಣುಬಾಂಬಿನ ಸಮಸ್ಯೆಯ ಬಗೆಗೆ ಪ್ರಪಂಚದ ರಾಜಕೀಯ ಧುರೀಣರ ನಿಲುವುಗಳನ್ನು ಬದಲಾಯಿಸಲು ಪ್ರಭಾವ ಬೀರಬಲ್ಲ ಯೋಗ್ಯತೆ ಇರುವ ಕೆಲವೇ ಕೆಲವು ವ್ಯಕ್ತಿಗಳಲ್ಲಿ ಡಾ॥ ಶ್ವೈಯಿಟ್ಸರ್‌ನೊಬ್ಬ ಎಂಬ ಅಭಿಪ್ರಾಯವಿತ್ತು. ಅವನನ್ನು ಕಣಕ್ಕಿಳಿಸುವುದರ ಬಗೆಗೆ ವಿವಿಧ ರೀತಿಯ ಪ್ರಯತ್ನಗಳಾಗುತ್ತಿದ್ದವು.

ಲಂಡನ್‌ನ "ಡೈಲಿ ಹೆರಾಲ್ಡ್" ಪತ್ರಿಕೆಯವರು ೧೯೫೦ರ ಆದಿಭಾಗದಲ್ಲಿ ಈ ಬಗೆಗೆ ಶ್ವೈಯಿಟ್ಸರ್‌ನನ್ನು ಪರೋಕ್ಷವಾಗಿ ಕಣಕ್ಕಿಳಿಸುವ ಪ್ರಯತ್ನ ನಡೆಸಿದರು. ಅಣು ಸಮರಾಭ್ಯಾಸಗಳನ್ನು ಹತ್ತಿಕ್ಕಲು ಪ್ರಖ್ಯಾತ ವಿಜ್ಞಾನಿಗಳ ಸಮ್ಮೇಳನ ಒಂದನ್ನು ವಿಶ್ವಸಂಸ್ಥೆ (U.N.O.) ಯವರು ಕರೆದು ಅವರೆಲ್ಲ ಅಭಿಪ್ರಾಯಗಳನ್ನು ಪ್ರಚಾರ ಮಾಡಬೇಕೆಂಬ ಸಲಹೆ ಹಲವು ಮೂಲಗಳಿಂದ ಆಗ ಕೇಳಿಬರುತ್ತಿತ್ತು. ಈ ಸಲಹೆಯ ಬಗೆಗೆ ಡಾ|| ಶ್ವೈಯಿಟ್ಸರ್ ತನ್ನ ಅಭಿಪ್ರಾಯವನ್ನು ಪತ್ರಿಕೆಗೆ ತಿಳಿಸಬೇಕೆಂದು ಪ್ರಾರ್ಥಿಸಿತು. ಎಂಟನೂರು ಶಬ್ದಗಳಿಗೆ ಮೀರದ ಒಂದು ಲೇಖನವನ್ನು ಅವನ ಭಾವಚಿತ್ರದೊಡನೆ ಕಳುಹಿಸಿಕೊಡಬೇಕೆಂದು ಕಳಕಳಿಯ ಪ್ರಾರ್ಥನೆ ಅದರಲ್ಲಿತ್ತು. ಶ್ವೈಯಿಟ್ಸರ್ ತನ್ನ ಅಭಿಪ್ರಾಯವನ್ನು ಸಂಕ್ಷಿಪ್ತವಾಗಿ ಬರೆದು ಕಳಿಸಿದ. "ಸಮ್ಮೇಳನಗಳನ್ನು ಕರೆದು ಚರ್ಚಿಸುವುದರಿಂದ ಯಾವ ಸಮಸ್ಯೆಗಳೂ ಪರಿಹಾರವಾಗಲಾರವು. ಅಣುಬಾಂಬು ಮತ್ತು ಅದರ ಸ್ಫೋಟದಿಂದಾಗುವ ದುಷ್ಪರಿಣಾಮಗಳನ್ನರಿತ ವಿಜ್ಞಾನಿಗಳ ಅಭಿಪ್ರಾಯ ಮತ್ತು ಹಿತವಚನಗಳನ್ನು ರಾಜಕಾರಣಿಗಳು ಕೇಳಿ, ಅದರಂತೆ ನಡೆದುಕೊಳ್ಳುವಂತೆ ಜನಾಭಿಪ್ರಾಯ ಮೂಡಿಸುವುದರಿಂದ ಈ ದಿಸೆಯಲ್ಲಿ ಒಳ್ಳೆಯ ಫಲಿತಾಂಶಗಳುಂಟಾಗಬಹುದು; ಡಾ|| ಐನ್‌ಸ್ಟೀನ್‌ರಂಥ ಮಹಾ ವಿಜ್ಞಾನಿ ಈ ಬಗೆಗೆ ಸಾಕಷ್ಟು ಹೇಳಿದ್ದಾರೆ. ಅವರನ್ನು ಕೇಳುವವರಿಲ್ಲದೆ ಬೇಸರಗೊಂಡಿದ್ದಾರೆ. ಇತರ ವಿಜ್ಞಾನಿಗಳು ಅವರವರ ರಾಷ್ಟ್ರಗಳ ಮುತ್ಸದ್ದಿಗಳ ಮನ ಒಲಿಸುವ ಪ್ರಯತ್ನಗಳನ್ನು ಮಾಡಬೇಕು; ಅತ್ಯಂತ ಸಂಕಟ ಮತ್ತು ಭಾರವಾದ ಹೃದಯದಿಂದ ಈ ಮಾತುಗಳನ್ನು ಹೇಳುತ್ತಿದ್ದೇನೆ" ಎಂದು ಲೇಖನವನ್ನು ಮುಗಿಸಿದ್ದ. ಡೈಲಿ ಹೆರಾಲ್ಡ್ ಪತ್ರಿಕೆ ಮುಖ ಪುಟದಲ್ಲಿ ಶ್ವೈಯಿಟ್ಸರ್ ಭಾವಚಿತ್ರವನ್ನು ಅಚ್ಚು ಹಾಕಿ "ಅಣು ಸಮರದ ಬಗೆಗೆ ಡಾ|| ಆಲ್ಬರ್ಟ್ ಶ್ವೈಯಿಟ್ಸರ್ ಅತ್ಯಂತ ಸಂಕಟ ಮತ್ತು ಭಾರವಾದ ಹೃದಯದಿಂದ ಮಾತನಾಡಿದ್ದಾರೆ" ಎಂಬ ತಲೆಬರಹ ಕೊಟ್ಟು ಲೇಖನವನ್ನು ಪ್ರಕಟಿಸಿತು. ಪತ್ರಿಕೆ ಈ ರೀತಿ ಪ್ರಕಟಿಸಿದ ಶ್ವೈಯಿಟ್ಸರ್‌ನ ಲೇಖನ ಬಹಳ ಪರಿಣಾಮಕಾರಿಯಾಯಿತು. ಪ್ರಪಂಚದಾದ್ಯಂತ ಹಲವಾರು ಬುದ್ಧಿಜೀವಿಗಳು ಡಾ|| ಶ್ವೈಯಿಟ್ಸರ್‌ನಿಗಾದ ವ್ಯಥೆಯಿಂದ ಪ್ರಭಾವಿತರಾದರು.

ಆದರೆ ಶ್ವೈಯಿಟ್ಸರ್‌ನ ಹೇಳಿಕೆಯನ್ನು ಮನ್ನಿಸಿ ಅಣುವಿಕಿರಣದ ದುಷ್ಪರಿಣಾಮಗಳ ಬಗೆಗೆ ವೈಜ್ಞಾನಿಕ ವಿವರಗಳನ್ನು ಪ್ರಕಟಿಸಲು ಹೆಚ್ಚಿನ ವಿಜ್ಞಾನಿಗಳು ಮುಂದೆ ಬರಲಿಲ್ಲ. ಅದಕ್ಕೂ ಕಾರಣವಿಲ್ಲದಿರಲಿಲ್ಲ. ಪ್ರಬಲ ರಾಷ್ಟ್ರಗಳು ಹೆಚ್ಚು ಹೆಚ್ಚು ಶಕ್ತಿಯುತ ಅಣು-ಜಲಜನಕ-ಬಾಂಬುಗಳನ್ನು ತಯಾರಿಸುವ ಪೈಪೋಟಿಯಲ್ಲಿದ್ದರು. ಈ ಪರಿಸ್ಥಿತಿಯಲ್ಲಿ ಅಣುಬಾಂಬಿನ ವಿರುದ್ಧ ಮಾತನಾಡಿದ ವಿಜ್ಞಾನಿಗಳನ್ನು ದೇಶದ್ರೋಹಿಗಳೆಂದು ಪರಿಗಣಿಸುವ ಸಾಧ್ಯತೆಗಳಿದ್ದವು. ಅಮೆರಿಕಾದ ರಾಜಕೀಯ ಮತ್ತು ವೈಜ್ಞಾನಿಕ

ವಲಯಗಳಲ್ಲಿ ಪ್ರಭಾವಿತವೆನಿಸಿದ್ದ ಹೆಸರಾಂತ ವಿಜ್ಞಾನಿ ರಾಬರ್ಟ ಓಪನ್ ಹೈಮರ್ ಅಣ್ವಸ್ತ್ರಗಳ ವಿಸ್ತರಣೆಯ ವಿರುದ್ಧ ಬಹಿರಂಗವಾಗಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದವರಲ್ಲಿ ಮೊದಲಿಗರು. ಅಣುಶಕ್ತಿ ಮಂಡಳಿಯಲ್ಲಿ ಅವರಿಗಿದ್ದ ಕೆಲಸದಿಂದ ಕೂಡಲೇ ವಜಾಮಾಡಲ್ಪಟ್ಟರಲ್ಲದೆ, ಮುಂದೆ ಆ ಮಂಡಳಿಯ ಸಂಪರ್ಕವೇ ಅವರಿಗಿಲ್ಲದಂತಾಯಿತು.

ಡಾ॥ ಶ್ವೈಯಿಟ್ಸರ್ ನೋಬೆಲ್ ಪಾರಿತೋಷಕ ಸ್ವೀಕರಿಸುವ ಸಂದರ್ಭದಲ್ಲಿ ಮಾಡಿದ ಭಾಷಣ ಮತ್ತು ಡೈಲಿ ಹೆರಾಲ್ಡ್ ಪತ್ರಿಕೆಯಲ್ಲಿ ಪ್ರಕಟವಾದ ಲೇಖನದಿಂದ ಪ್ರಭಾವಿತರಾದವರಲ್ಲಿ ಪ್ರಗತಿಪರ ಯುವ-ಅಣು-ವಿಜ್ಞಾನಿ ಫ್ರಾನ್ಸ್‌ನ ನೋಯಲ್ ಮಾರ್ಟಿನ್ ಒಬ್ಬರು. ಅಣು, ಜಲಜನಕ ಬಾಂಬುಗಳ ಸಿಡಿತದಿಂದ ತತ್‌ಕ್ಷಣದಲ್ಲಿ ಉಂಟಾಗುವ ಅಪಾರ ಸಾವು, ನೋವುಗಳೇ ಅಲ್ಲದೆ ಅಣು ವಿಕಿರಣತೆಯಿಂದ ಸಕಲ ಜೀವಿಗಳಲ್ಲಾಗುವ ಸರಿಪಡಿಸಲಾರದಂತಹ ಬದಲಾವಣೆಗಳ ಬಗೆಗೆ ಸಂಶೋಧನೆ ನಡೆಸಿದ್ದರು. ಅವುಗಳ ಒಟ್ಟಾರೆ ಪರಿಣಾಮದಿಂದ ಜೀವ ಜಗತ್ತೇ ನಾಶವಾಗಬಹುದೆಂಬುದನ್ನು ಅವರು ಖಚಿತವಾಗಿ ತೀರ್ಮಾನಿಸಿದ್ದರು. ಮಾರ್ಟಿನ್ ಈ ಸಂಶೋಧನೆಗಳ ವಿವರಗಳನ್ನು ಪ್ಯಾರಿಸ್‌ನ ವಿಜ್ಞಾನ-ಅಕಾಡೆಮಿಗೆ ಬರೆದು ತಿಳಿಸಿದರು. ಈ ವರದಿ ಪ್ರಪಂಚಾದ್ಯಂತ ಎಲ್ಲಾ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಹಲವಾರು ರೇಡಿಯೋ, ಟೆಲಿವಿಷನ್ ಸಂಸ್ಥೆಗಳವರು ಅವರ ಸಂದರ್ಶನಗಳನ್ನು ಬಿತ್ತರಗೊಳಿಸಿದರು. ಕೆಲವು ಪತ್ರಿಕೆಗಳಲ್ಲಿ ಅವರ ವಿಶೇಷ ಲೇಖನಗಳು ಪ್ರಕಟವಾದವು. ತನ್ನೆಲ್ಲಾ ಸಂಶೋಧನೆಗಳ ವಿವರಗಳನ್ನು ಸಂಗ್ರಹಿಸಿ, ಸಣ್ಣ ಪುಸ್ತಕವನ್ನೂ ಸಹಾ ಬರೆದು ಪ್ರಕಟಿಸಿದರು. ನೋಯೆಲ್ ಮಾರ್ಟಿನ್‌ರ ಶೋಧನೆಗಳಿಗೆ ಡಾ॥ ಶ್ವೈಯಿಟ್ಸರ್‌ನೇ ಪ್ರೇರಣೆಯಾದುದರಿಂದ ಅದಕ್ಕೊಂದು ಮುನ್ನುಡಿ ಬರೆಯುವಂತೆ ಪ್ರಾರ್ಥಿಸಿ ಕಳುಹಿಸಿಕೊಟ್ಟರು. ಪುಸ್ತಕ ಶ್ವೈಯಿಟ್ಸರ್‌ಗೆ ತುಂಬಾ ಮೆಚ್ಚಿಗೆಯಾಯಿತು. ಆದರೆ ಮುನ್ನುಡಿ ಬರೆಯಲು ಇಚ್ಛಿಸಲಿಲ್ಲ. ತನಗೆ ಹೆಚ್ಚಿನ ಪರಿಣಿತಿ ಇರದ ಯಾವುದೇ ವಿಷಯದಲ್ಲಿ ನೇರವಾಗಿ ಭಾಗವಹಿಸಿ, ನಂತರ ಪೇಚಿಗೆ ಸಿಲುಕುವ ಇಷ್ಟವಿಲ್ಲವೆಂಬ ನೆಪ ಒಡ್ಡಿ ಶ್ವೈಯಿಟ್ಸರ್ ಯುವ ವಿಜ್ಞಾನಿಯ ಪ್ರಾರ್ಥನೆಯನ್ನು ನಿರಾಕರಿಸಿದ. ಹಿಂದೊಂದು ಸಾರಿ ಜರ್ಮನಿಯ ಯುವ ಸಮಾಜವಾದಿ ಸಂಘದವರು ಇಟ್ಟುಕೊಂಡಿದ್ದರೆನ್ನಲಾದ ವಿಶ್ವಶಾಂತಿ, ಸಹಕಾರ ಮುಂತಾದ ಉದಾತ್ತ ಧ್ಯೇಯೋದ್ದೇಶಗಳನ್ನು ಬೆಂಬಲಿಸಲು ಅದರ ಗೌರವ ಪೋಷಕನಾಗಿರಲು ಒಪ್ಪಿಗೆ ನೀಡಿದ್ದ. ಅವನ ಹೆಸರಿನ ಲಾಭ ಪಡೆದು, ಸಂಘದವರು ಅವನ ಧ್ಯೇಯೋದ್ದೇಶಗಳ ವಿರುದ್ಧ ಕೆಲಸ ಮಾಡುತ್ತಿರುವುದನ್ನು, ಸ್ನೇಹಿತರು ಅವನ ಗಮನಕ್ಕೆ ತಂದಾಗಲೇ ಅವನು ಎಚ್ಚತ್ತಿದ್ದು. ಈ ರೀತಿಯಲ್ಲಿ ಅವನ

ಭೋಳೆ-ಸ್ವಭಾವದ ದುರುಪಯೋಗ ಕೆಲ ಸಾರಿ ಆಗಿದ್ದುಂಟು.

ಆ ವರ್ಷ ಡಾ|| ಶ್ವೆಯಿಟ್ಸರ್‌ನ ಹುಟ್ಟುಹಬ್ಬದ ನೆನಪಿಗಾಗಿ ಹೊರ ತಂದ ಗ್ರಂಥ ಒಂದರಲ್ಲಿ ಹಲವಾರು ಪ್ರತಿಷ್ಠಿತರ ಲೇಖನಗಳಿದ್ದವು. ಅವುಗಳಲ್ಲಿ ಡಾ|| ಐನ್‌ಸ್ಟೀನ್‌ರು ಬರೆದ ಲೇಖನ ಅತ್ಯಂತ ಆತ್ಮೀಯವಾಗಿ ಮೂಡಿಬಂದಿತ್ತು. ಡಾ|| ಆಲ್ಬರ್ಟ್ ಶ್ವೆಯಿಟ್ಸರ್‌ನಂತಹ ಸುಸಂಸ್ಕೃತ ಹಾಗೂ ದಯಾಮಯ ಮಾನವನೊಬ್ಬನನ್ನು ತಾವು ಈ ತನಕ ಭೇಟಿಯಾಗಿರಲಿಲ್ಲ. ಇಳೀ ವಯಸ್ಸಿನಲ್ಲೂ ಆರೋಗ್ಯ ಕಾಪಾಡಿಕೊಂಡು ಹಲವಾರು ಕ್ಷೇತ್ರಗಳಲ್ಲಿ ಆಸಕ್ತಿಯಿಂದ ಜೀವನ ನಡೆಸುತ್ತಿರುವುದು ಆಶ್ಚರ್ಯಕರ; ಅವರಂಥ ಆಶಾವಾದಿಗಳು ಬೇರಿರಲಾರರು; ಬೌದ್ಧಿಕವಾಗಿಯೂ ಬಹಳ ಎತ್ತರವಾಗಿ ಬೆಳೆದ ಮನುಷ್ಯ; ಮತೀಯ ವಿಷಯಗಳಲ್ಲಿ ಶ್ರದ್ಧೆಯಿರುವವರಾದರೂ, ಹಳೇ ಕಂದಾಚಾರಗಳನ್ನು ಬದಿಗೊತ್ತಿದವರು; ದಿನೇ ದಿನೇ ಹದಗೆಡುತ್ತಿರುವ ನಾಗರಿಕತೆಯ ಉದ್ಧಾರಕ್ಕಾಗಿ ಸದಾ ಹೆಣಗುತ್ತಿರುವವರು; ಲ್ಯಾಂಬರೀನೆಯ ಕಾಡಿನಲ್ಲಿ ಆಸ್ಪತ್ರೆ ನಡೆಸುತ್ತಿದ್ದು, ಮಾನವ ಸಂಸ್ಕೃತಿಯ ಮೌಲ್ಯವನ್ನು ಎತ್ತಿ ಹಿಡಿದಿದ್ದಾರೆ. ತಮ್ಮ ಆತ್ಮದ ಕರೆಗೆ ಓಗೊಟ್ಟು ನುಡಿದಂತೆ ನಡೆದ ಅಪರೂಪದ ವ್ಯಕ್ತಿ; ಹಲವು ವಿಧಗಳಲ್ಲಿ ಪ್ರಪಂಚಕ್ಕೇ ಮಾದರಿಯಾಗಿದ್ದಾರೆಂದು, ಐನ್‌ಸ್ಟೀನ್ ತಮ್ಮ ಲೇಖನದಲ್ಲಿ ವಿವರಿಸಿದ್ದರು. ಲೇಖನ ಡಾ|| ಶ್ವೆಯಿಟ್ಸರ್‌ನನ್ನೂ ಹರ್ಷಗೊಳಿಸಿತು. ಅವರಿಗೆ ಪತ್ರ ಬರೆದು ತನ್ನ ಕೃತಜ್ಞತೆಗಳನ್ನು ತಿಳಿಸಿದ. ಕೆಲ ಸಮಯದ ಹಿಂದೆ ಬರ್ಲಿನ್‌ನಗರದಲ್ಲಿ ಭೇಟಿಯಾದಾಗಿನ ರಸನಿಮಿಷಗಳನ್ನು ಸ್ಮರಿಸಿ, ಅವರ ಮೊದಲ ಹೆಸರುಗಳೂ ಒಂದೇ ಆಗಿರುವುದು ಅವರಿಬ್ಬರೂ ಪ್ರಪಂಚದ ಭವಿಷ್ಯದ ಬಗೆಗೆ ತಳೆದ ಒಮ್ಮತದ ಸಂಕೇತವೆಂದು ಹೆಮ್ಮೆಯನ್ನು ವ್ಯಕ್ತಪಡಿಸಿದ್ದ. ಅಣ್ವಸ್ತ್ರಗಳ ಪೈಪೋಟಿಯನ್ನು ಮಿತಿಗೊಳಿಸುವಲ್ಲಿ ವಿಶ್ವಸಂಸ್ಥೆ ವಿಫಲವಾಗಿದ್ದಕ್ಕೆ ವಿಷಾದಿಸಿ, ಅವರಿಬ್ಬರೂ ಈ ದಿಸೆಯಲ್ಲಿ ಕಾರ್ಯೋನ್ಮುಖರಾಗಬಹುದೆಂದು ಸಲಹೆ ನೀಡಿದ್ದ.

ಅಣ್ವಸ್ತ್ರಗಳ ತಯಾರಿಕೆಯ ಬಗೆಗೆ ಪ್ರಪಂಚಾದ್ಯಂತ ಅಲ್ಲಲ್ಲಿ ಪ್ರತಿಭಟನೆಗಳು ವ್ಯಕ್ತವಾಗುತ್ತಿದ್ದರೂ, ಪ್ರಬಲರಾಷ್ಟ್ರಗಳು ಅವುಗಳಿಗೆ ಮಣಿಯದೆ ಬಾಂಬುಗಳನ್ನು ತಯಾರಿಸುತ್ತಲೇ ಇದ್ದವು. ವಿಶ್ವರಾಜಕೀಯದ ಕುಟಿಲತೆಯಲ್ಲಿ ಸಿಲುಕಿದ ವಿಶ್ವಸಂಸ್ಥೆ ಈ ದಿಸೆಯಲ್ಲಿ ಏನೂ ಮಾಡಲಾರದೇ ಹೋಯಿತು. ಪ್ರಭಾವಶಾಲಿ ವಿಜ್ಞಾನಿ ಓಪನ್ ಹೈಮರ್ ಈಗ ರಾಷ್ಟ್ರನಿಂದೆಗೊಳಗಾಗಿ ಅಸಹಾಯಕನಾಗಿದ್ದರು. ಐನ್‌ಸ್ಟೀನ್ ಕಾಯಿಲೆ ಮತ್ತು ವಯಸ್ಸಿನಿಂದ ಜರ್ಝರಿತನಾಗಿದ್ದರು. ಶ್ವೆಯಿಟ್ಸರ್ ಪ್ರಭಾವಕ್ಕೊಳಗಾಗಿ ಅಣುವಿಕಿರಣದ ಪರಿಣಾಮಗಳನ್ನು ಬಹಿರಂಗಗೊಳಿಸಿದ್ದ ನೋಯೆಲ್ ಮಾರ್ಟಿನ್, ನ್ಯಾಷನಲ್ ಸೆಂಟರ್ ಫಾರ್ ಸೈಂಟಿಫಿಕ್ ರಿಸರ್ಚ್ ಸಂಸ್ಥೆಯಲ್ಲಿದ್ದ ಹುದ್ದೆಯನ್ನು ಕಳೆದುಕೊಂಡಿದ್ದಲ್ಲದೆ, ಅವರಿಗೆ ಅಷ್ಟರಲ್ಲಿ

ದೊರಕಬೇಕಾಗಿದ್ದ ಡಾಕ್ಟೊರೇಟನಿಂದಲೂ ವಂಚಿತರಾದರು. ಹತಾಶರಾದ ಐನ್‌ಸ್ಟೀನ್‌ರು ಅದೇ ಏಪ್ರಿಲ್ ತಿಂಗಳಲ್ಲಿ ಕೊನೆಯುಸಿರೆಳೆದು, ಅಣ್ವಸ್ತ್ರಗಳ ಪೈಪೋಟಿಯ ವಿರುದ್ಧಕೈಯೆತ್ತುವವರಾರೂ ಇಲ್ಲದಂತಾಯಿತು.

ಯುವಕ ಆಲ್ಬರ್ಟ ಶ್ವೈಯಿಟ್ಸರ್‌ನ ಧಾರ್ಮಿಕ ತತ್ವಗಳ ವೈಚಾರಿಕ ಪ್ರತಿಪಾದನೆಗಳನ್ನು ಮೆಚ್ಚಿ ಗೌರವಿಸಿದವರಲ್ಲಿ ಬ್ರಿಟಿಷರೇ ಮೊದಲಿಗರು. ಶ್ವೈಯಿಟ್ಸರ್ ಈಗ ಬಹುಮುಖ ಸಾಧನೆಗಳಿಂದ ಕೀರ್ತಿಯ ಪರಾಕಾಷ್ಠತೆಯಲ್ಲಿದ್ದಾಗ ಆ ರಾಷ್ಟ್ರದ ಅತ್ಯುನ್ನತ ಗೌರವ-ಪದಕವೆನಿಸಿದ 'ಆರ್ಡರ್ ಆಫ್ ಮೆರಿಟ್' (O.M) ನೀಡಿ ಮತ್ತೊಮ್ಮೆ ಗೌರವ ಸೂಚಿಸಿದರು. ಎರಡನೇ ಮಹಾಯುದ್ಧದಲ್ಲಿ ಯುರೋಪಿನಲ್ಲಿ ಮಿತ್ರ ಪಕ್ಷಗಳ ಮಹಾದಂಡನಾಯಕನಾಗಿ ವಿಜಯದ ರೂವಾರಿ ಯೆನಿಸಿದ್ದ ಜನರಲ್ ಡ್ವೈಟ್‌ಐಸೆನ್ ಹೋವರ್ ಮತ್ತು ಇತ್ತೀಚಿನ ವರ್ಷಗಳಲ್ಲಿ (೧೯೮೩) ಮದರ್ ಥೇರೇಸಾರನ್ನು ಹೊರತುಪಡಿಸಿದರೆ, ಬ್ರಿಟಿಷ್ ನಾಗರಿಕರಲ್ಲದವರಲ್ಲಿ ಆ ಪದಕಗಳಿಸಿದ ಕೀರ್ತಿ ಡಾ॥ ಶ್ವೈಯಿಟ್ಸರ್‌ನದಾಯಿತು. ಬಂಕಿಂಗ್‌ಹ್ಯಾಮ್ ಅರಮನೆಯಲ್ಲಿ ರಾಜವೈಭವದ ನಡುವೆ ಬ್ರಿಟಿಷ್ ಮಹಾರಾಣಿ ಪದಕವನ್ನಿತ್ತು, ಡಾ॥ ಶ್ವೈಯಿಟ್ಸರ್‌ನನ್ನು ಸನ್ಮಾನಿಸಿದಳು. ಬ್ರಿಟಿಷ್ ರಾಜಮನೆತನ ದವರು ತನಗೆ ತೋರಿಸಿದ ಗೌರವಾದರಗಳಿಗೆ ಪತ್ರಬರೆದು ಕೃತಜ್ಞತೆಗಳನ್ನು ತಿಳಿಸಿದನಲ್ಲದೆ, ರಾಣಿಯ ಮಕ್ಕಳಿಗೆ ಸವಿ ನೆನಪಿನ ಕಾಣಿಕೆಯಾಗಿ ಅವನ ಬಾಲ್ಯದ ನೆನಪುಗಳನ್ನು ಬರೆದಿದ್ದ ಪುಸ್ತಕದ ಎರಡು ಪ್ರತಿಗಳನ್ನು ಕಳುಹಿಸಿದ. ಬ್ರಿಟನ್ನಿನ ಪ್ರಧಾನ ಮಂತ್ರಿಗಳು ಅವರ ನಿವಾಸದಲ್ಲಿ ಭೋಜನಕೂಟವನ್ನೇರ್ಪಡಿಸಿ ಸತ್ಕರಿಸಿದರು.

ಬ್ರಿಟನ್ನಿನಲ್ಲಿದ್ದ ಸಮಯದಲ್ಲಿ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯ ಗೌರವ-ಡಾಕ್ಟರೇಟ್ ಪದವಿಯನ್ನಿತ್ತು ಸನ್ಮಾನಿಸಿತು. ಆರಂಭದ ವರ್ಷಗಳಲ್ಲಿ ಶ್ವೈಯಿಟ್ಸರ್ ಬರೆದಿದ್ದ ಧಾರ್ಮಿಕ-ಗ್ರಂಥಗಳನ್ನು ಇಂಗ್ಲಿಷ್‌ಗೆ ಭಾಷಾಂತರ ಮಾಡಿ, ಬ್ರಿಟಿಷ್ ಜನತೆಗೆ ಅವನನ್ನು ಪರಿಚಯಿಸಿದ ಪ್ರೊ॥ ಪಿ. ಸಿ. ಬರ್ಕಿಟ್‌ರ ಸಮಾಧಿಗೂ ಭೇಟಿಯಿತ್ತು ತನ್ನ ಗೌರವ ಸಲ್ಲಿಸಿದ.

ಈ ಸಾರಿ ಲಂಡನ್ನಿನಲ್ಲಿ ಶ್ವೈಯಿಟ್ಸರ್ ಉಳಿದುಕೊಳ್ಳಲು ರಾಜವೈಭವದ ಏರ್ಪಾಡುಗಳಾಗಿದ್ದವು. ಆದರೆ ಅವನುಳಿದುಕೊಂಡಿದ್ದು ಲಂಡನ್ನಿನ ಗಲ್ಲಿಯೊಂದರಲ್ಲಿ, (ಆಲ್‌ಸೇಶ್)ಹಳೆಯ ಸ್ನೇಹಿತನ ಹೋಟೆಲು ಕೊಠಡಿಯಲ್ಲಿ. ಶ್ವೈಯಿಟ್ಸರ್ ಅಲ್ಲಿದ್ದ ಸುದ್ದಿ ಹರಡಿದಾಕ್ಷಣ ಲಂಡನ್ನಿನವರಿಗೆ ಅದೊಂದು ಯಾತ್ರಾ ಸ್ಥಳದಂತಾಯಿತು. ಹೋಟೆಲಿನ ಮುಂದೆ ಅವನ ದರ್ಶನಾಕಾಂಕ್ಷಿಗಳ ಸರದಿ ಸಾಲು ಪ್ರತಿದಿನ ಬೆಳಿಗ್ಗೆ ಬೆಳೆಯುತ್ತಿತ್ತು. ಅಲ್ಲಿನ ಜನಜಂಗುಳಿಯನ್ನು ನಿಯಂತ್ರಿಸಲು ಹಿಂದೆ ಲ್ಯಾಂಬರೀನೆಯಲ್ಲಿ ಶ್ವೈಯಿಟ್ಸರ್‌ನೊಡನೆ ಕೆಲಸಮಾಡಿ, ಅವನ ರೀತಿ-ನೀತಿಗಳ

ಪರಿಚಯವಿದ್ದ ದಾದಿಯೊಬ್ಬಳನ್ನು ಹುಡುಕಿ ತಂದು ಅಲ್ಲಿನ ಮೇಲ್ವಿಚಾರಣೆಗೆ ನೇಮಿಸಿಕೊಳ್ಳಬೇಕಾಯಿತು. ಅವನಿಗಿಂತ ಮೊದಲೇ ಬ್ರಿಟನ್ನಿನ ಗೌರವ-ಪದಕ ವಿಜೇತರಾದ ಸಂಗೀತ ಕಲಾವಿದ ವಾಗನ್ ವಿಲಿಯಮ್ಸ್ ಮತ್ತು ಆಗಸ್ಟಸ್‌ಜಾನ್‌ರ ಜತೆಗೆ ತತ್ವಜ್ಞಾನಿ ಬರ್ಟ್ರೆಂಡ್ ರಸೆಲ್, ಡಾ|| ಲೆಸ್ಲಿವೆದರ್‌ಹೆಡ್ ಮುಂತಾದವರು ಅವನ ಭೇಟಿಗಾಗಿ ಸರದಿ-ಸಾಲುಗಳಲ್ಲಿ ನಿಂತಿರುತ್ತಿದ್ದರು. ಶ್ವೈಟ್ಸರ್‌ನ ಜೀವನ ಚರಿತ್ರೆಯನ್ನು ಬರೆದು ಹೆಸರುಗಳಿಸಿದ್ದ ಜಾರ್ಜ್‌ಸೇವರ್ ಅವನನ್ನು ಮೊದಲ ಸಲ ಭೇಟಿಯಾದದ್ದು ಇಲ್ಲೇ. ತೀರಾ ಸಾಮಾನ್ಯ ಜನರಿಂದ ಹಿಡಿದು ಪ್ರತಿಷ್ಠರೆನಿಸಿದವರೂ ಭೇಟಿಗಾಗಿ ಗಂಟೆಗಟ್ಟಲೇ ಕಾದುನಿಲ್ಲುತ್ತಿದ್ದರು. ಅಲ್ಲಿದ್ದ ಭಾರತೀಯ ಯುವಕನೊಬ್ಬ ಪಾದಸ್ಪರ್ಶ ಮಾಡಿ ಗೌರವ ಸೂಚಿಸಲು ಮುಂದಾದಾಗ ಶ್ವೈಟ್ಸರ್ ಅವನನ್ನು ತಡೆದು ಪ್ರೀತ್ಯಾದರದಿಂದ ಗೌರವಿಸುವುದಕ್ಕೆ ಕಾಲು ಹಿಡಿಯುವುದು ಸರಿಯಲ್ಲವೆಂದು ಬುದ್ಧಿ ಹೇಳಿದನಂತೆ.

ಅದೇ ಕಡೇ ಬಾರಿಗೆ ಶ್ವೈಟ್ಸರ್ ಇಂಗ್ಲೆಂಡಿನಿಂದ ನವೆಂಬರ್ ತಿಂಗಳಲ್ಲಿ ಯುರೋಪಿಗೆ ಪ್ರಯಾಣ ಮಾಡಿದ. ಜರ್ಮನಿಯ ಛಾನ್ಸಲರ್ ಹಾಗೂ ಅವನ ಹಳೆಯ ಸ್ನೇಹಿತ ಥಿಯೋಡಾರ್ ಹ್ಯೂಸ್ ಜರ್ಮನಿಯ ಉನ್ನತಗೌರವ 'ಜರ್ಮನ್ ಆರ್ಡರ್ ಆಫ್ ಮೆರಿಟ್' ಪದಕವನ್ನಿತ್ತು ಗೌರವಿಸಿದರು. ಡಿಸೆಂಬರ್‌ನಲ್ಲಿ ಲ್ಯಾಂಬರೀನೆಗೆ ಪ್ರಯಾಣ ಮಾಡಿದ. ಅವನು ತಲ್ಪಿದ ಸ್ವಲ್ಪ ಸಮಯದಲ್ಲೇ ಕಾಯಿಲೆಯಿಂದ ಬಳಲುತ್ತಿದ್ದ ಹೆಲನ್ ಸಹಾ ಲ್ಯಾಂಬರೀನಿಗೆ ಬಂದು ಸೇರಿದಳು.

ಲ್ಯಾಂಬರೀನೆ ನಿಷ್ಠಾವಂತ ದಾದಿಯರಲ್ಲಿ ಟ್ರೂಡಿ ಬ್ರೂಸ್ಲೂರ್ ಒಬ್ಬಳು. ಕುಷ್ಠರೋಗಿಗಳ ಚಿಕಿತ್ಸೆಯ ವಿಷಯದಲ್ಲಿ ವಿಶೇಷ ಪರಿಣತಿ ಹೊಂದಿದವಳು. ಆದರೆ ಒಂದು ಕಾಲದಲ್ಲಿ ಶ್ವೈಟ್ಸರ್ ಅವಳೊಡನೆ ಅಭಿಪ್ರಾಯ ಭೇದ ಹೊಂದಿದ್ದು ಅವಳು ಆಸ್ಪತ್ರೆಯಿಂದ ನಿರ್ಗಮಿಸುವುದು ಅನಿವಾರ್ಯವಾಯಿತು. ಮುಂದೆ ಯುರೋಪಿನಲ್ಲಿ ಹಲವು ಕುಷ್ಠರೋಗಿಗಳ ಆಸ್ಪತ್ರೆಗಳಲ್ಲಿ ಹೆಚ್ಚಿನ ತರಬೇತಿ ಪಡೆದು ಮತ್ತೆ ಲ್ಯಾಂಬರೀನೆಗೆ ಬಂದಳು. ಹಿಂದಿನ ಕಹಿ ಪ್ರಸಂಗವನ್ನು ಮರೆತು ಶ್ವೈಟ್ಸರ್ ಮತ್ತೆ ಅವಳನ್ನು ಸೇರಿಸಿಕೊಂಡಿದ್ದಲ್ಲದೆ, ಹೊಸದಾಗಿ ನಿರ್ಮಾಣವಾಗಿದ್ದ ಕುಷ್ಠರೋಗಿಗಳ ವಸಾಹತಿನ ಸಂಪೂರ್ಣ ಜವಾಬ್ದಾರಿಯನ್ನು ಅವಳಿಗೇ ವಹಿಸಿಕೊಟ್ಟು ಕುಷ್ಠರೋಗಿಗಳ ಚಿಕಿತ್ಸೆ, ಶುಶ್ರೂಷೆಗಳೇ ಅಲ್ಲದ ಪುನರ್‌ವಸತಿಯ ಜವಾಬ್ದಾರಿಯನ್ನೂ ಅತ್ಯಂತ ದಕ್ಷತೆ ನಿರ್ವಹಿಸಿ ಎಲ್ಲರ ಮೆಚ್ಚಿಗೆ ಗಳಿಸಿದಳು.

ಹೆಚ್ಚುಕಡಿಮೆ ಲ್ಯಾಂಬರೀನೆಯ ಆಸ್ಪತ್ರೆ ಶುರುವಾದಾಗಿನಿಂದಲೂ ಶ್ವೈಟ್ಸರ್‌ನ ಬಲಗೈ ಬಂಟಳಂತೆ ದುಡಿದು ಆಸ್ಪತ್ರೆಯ ಕೀರ್ತಿಗೆ ಬಹುಪಾಲು ಬಹುಪಾಲು ಕಾರಣಳಾಗಿದ್ದ ಎಮ್ಮಾ ಹುಸ್ಕನಟ್ ಏಪ್ರಿಲ್ ತಿಂಗಳಲ್ಲಿ ಯುರೋಪಿನಲ್ಲಿದ್ದಾಗ

ತೀರಿಕೊಂಡಳು. ಅವಳ ಚಿತಾಭಸ್ಮವನ್ನು ಯುರೋಪಿನಿಂದ ತರಿಸಿ ಆಸ್ಪತ್ರೆಯ ಪಕ್ಕದಲ್ಲೇ ಸಮಾಧಿ ಮಾಡಿದನಲ್ಲದೆ, ಅಲ್ಲಿದ್ದವರೆಲ್ಲರೂ ಗೌರವ ಸಮರ್ಪಿಸುವಂತೆ ಮಾಡಿದ.

ಎರಿಕಾ ಆಂಡರ್‌ಸನ್ ತಯಾರಿಸುತ್ತಿದ್ದ ಶ್ವೈಯಿಟ್ಸರ್‌ನ ಚಲನಚಿತ್ರ ಅಂತ್ಯ ಘಟ್ಟವನ್ನು ತಲುಪಿ ಬಿಡುಗಡೆಗೆ ತಯಾರಾಗಿತ್ತು. ಆದರೆ ಷರತ್ತಿನಂತೆ ಶ್ವೈಯಿಟ್ಸರ್ ಬದುಕಿರುವವರೆಗೂ ಅದನ್ನು ಪ್ರದರ್ಶನಕ್ಕೆ ಬಿಡುಗಡೆ ಮಾಡುವಂತಿರಲಿಲ್ಲ. ಈ ನಡುವೆ ಚಲನಚಿತ್ರ ಕ್ಷೇತ್ರದಲ್ಲಾದ ಹೊಸ ಬೆಳವಣಿಗೆಯಿಂದ ಅದೀಗ ಪ್ರದರ್ಶನ ವಾಗದಿದ್ದರೆ ಮುಂದೆ ಕೆಲವು ವರ್ಷಗಳ ನಂತರ ತಾಂತ್ರಿಕ ಕಾರಣಗಳಿಂದ ಪ್ರದರ್ಶನ ಕಷ್ಟವಾಗಬಹುದಿತ್ತು. ಚಲನಚಿತ್ರಗಳ ಪ್ರದರ್ಶನಕ್ಕೆ ಉಪಯೋಗಿ ಸುತ್ತಿದ್ದ ಪರದೆಗಳ ಆಕಾರದಲ್ಲಿ ಬದಲಾವಣೆಗಳಾಗುವುದರಲ್ಲಿದ್ದು, ಅದೀಗ ಪ್ರದರ್ಶನವಾಗದಿದ್ದರೆ ಹೊಸ ಪರದೆಗಳ ಮೇಲೆ ಪ್ರದರ್ಶನ ಅಸಾಧ್ಯವಾಗಿತ್ತು. ಚಿತ್ರನಿರ್ಮಾಪಕ ಜೆರೋಮ್ ಹಿಲ್ ಶ್ವೈಯಿಟ್ಸರ್‌ನನ್ನು ಭೇಟಿಮಾಡಿ ಪರಿಸ್ಥಿತಿಯನ್ನು ನಿವೇದಿಸಿಕೊಂಡನು. ಶ್ವೈಯಿಟ್ಸರ್‌ಗೆ ಈಗ ತನ್ನ ಷರತ್ತನ್ನು ಸಡಿಲುಗೊಳಿಸದೇ ಬೇರೆ ಉಪಾಯವೇ ಇಲ್ಲವಾಯಿತು. ಚಿತ್ರ ತಕ್ಷಣ ಬಿಡುಗಡೆಯಾಯಿತು.

ಶ್ವೈಯಿಟ್ಸರ್ ಚಲನಚಿತ್ರ ೧೯೫೭ರ ಜನವರಿಯಲ್ಲಿ ನ್ಯೂಯಾರ್ಕ್ ನಗರದಲ್ಲಿ ಬಿಡುಗಡೆಯಾದಾಗ ಅತ್ಯಂತ ಜನಪ್ರಿಯ ಹಾಗೂ ಯಶಸ್ವಿ ಚಿತ್ರವೆಂದು ಪರಿಗಣಿಸಲ್ಪಟ್ಟಿತು. ಅಮೆರಿಕಾದ ಹಲವಾರು ಚಿತ್ರಮಂದಿರಗಳಲ್ಲಿ ಕಿಕ್ಕಿರಿದ ಜನಸ್ತೋಮ ಅದನ್ನು ವೀಕ್ಷಿಸಿತು. ಸಾಕಷ್ಟು ಹಣಸಂಪಾದನೆಯೂ ಆಯಿತು. ಮುಂದಿನ ವರ್ಷ ಅದಕ್ಕೆ ಅಕೆಡೆಮಿ ಅವಾರ್ಡ್ ಸಹಾ ದೊರೆಯಿತು. ೧೯೫೯ರಲ್ಲಿ ಡಾ॥ ಶ್ವೈಯಿಟ್ಸರ್ ಗನ್ಸ್‌ಬಾಕ್‌ನಲ್ಲಿದ್ದಾಗ ಹತ್ತಿರದ ಮುನ್‌ಸ್ಟರ್ ಪಟ್ಟಣದಲ್ಲಿ ಹೊಸದಾಗಿ ಆರಂಭವಾಗುತ್ತಿದ್ದ ಚಿತ್ರಮಂದಿರದಲ್ಲಿ ಆಲ್ಬರ್ಟ್ ಶ್ವೈಯಿಟ್ಸರ್‌ನ ಜೀವನದ ಚಲನಚಿತ್ರದ ಎರಡು ಪ್ರದರ್ಶನಗಳ ಏರ್ಪಾಟಾಗಿತ್ತು. ಆ ಸಮಯದಲ್ಲಿ ಗನ್ಸ್‌ಬಾಕ್‌ನಲ್ಲೇ ಇದ್ದ ಎರಿಕಾ ಶ್ವೈಯಿಟ್ಸರ್ ಮತ್ತು ಅವನ ಕುಟುಂಬದವರನ್ನು ಒತ್ತಾಯದಿಂದ ತನ್ನ ಕಾರಿನಲ್ಲೇ ಕರೆದುಕೊಂಡು ಹೋದಳು. ಅವರು ತಲಪುವಷ್ಟರಲ್ಲಿ ಚಿತ್ರಮಂದಿರ ತುಂಬಿ ತುಳುಕುತ್ತಿತ್ತು. ಅವನಿಗಾಗಿ ಕೂಡಲು ಪ್ರತ್ಯೇಕ ವ್ಯವಸ್ಥೆ ಮಾಡಿದ್ದರೂ ಅದನ್ನು ನಿರಾಕರಿಸಿ ಎಲ್ಲಾ ಸಾಮಾನ್ಯರಂತೆ ಅಲ್ಲಿದ್ದ ಕುರ್ಚಿ ಯೊಂದರಲ್ಲಿ ಕುಳಿತು ಚಿತ್ರ ವೀಕ್ಷಿಸಿದನಂತೆ. ಚಿತ್ರದ ಬಗೆಗೆ ಡಾ॥ ಶ್ವೈಯಿಟ್ಸರ್‌ನ ಅಭಿಪ್ರಾಯವೇನಿರಬಹುದು? ಅದು ಯಾರಿಗೂ ತಿಳಿದಂತಿಲ್ಲ!

# ೨೨. ಅಂತರಾತ್ಮದ ಹೇಳಿಕೆ

ಪರಮಾಣು ಬಾಂಬುಗಳ ತಯಾರಿಕೆ ಮತ್ತು ವಿಕಿರಣತೆ ಪರಿಣಾಮಗಳ ಬಗೆಗೆ ಡಾ॥ ಶ್ವೈಯಿಟ್ಸರ್‌ಗೆ ಮೊದಲಿಂದಲೂ, ಆಸಕ್ತಿಯಿದ್ದರೂ ಆಗಿನ ವಿಶ್ವರಾಜಕೀಯ ಚದುರಂಗದಾಟದಲ್ಲಿ ನೇರವಾಗಿ ಭಾಗವಹಿಸಿ ಹೋರಾಡಲು ಇಷ್ಟಪಟ್ಟವನಲ್ಲ. ಕಗ್ಗತ್ತಲೆ-ಖಂಡದ ಅರಣ್ಯದ ನಡುವೆ ಹೊರಗಿನ ಸಂಪರ್ಕವಿಲ್ಲದೆ ಏಕಾಂಗಿಯಾಗಿದ್ದವನಿಗೆ ಇಡೀ ಪ್ರಪಂಚವನ್ನೇ ವಿನಾಶದ ಅಂಚಿನತ್ತ ಸೆಳೆಯುತ್ತಿರುವ ಬೃಹತ್ ಸಮಸ್ಯೆಯ ಪರಿಹಾರ ಸುಲಭ ಸಾಧ್ಯವಲ್ಲವೆಂಬ ಅರಿವೂ ಅವನಿಗಿತ್ತು. ಅವನದೇ ಆದ ಕಿರು-ಪ್ರಚೋದನೆಗಳು ಈ ದಿಸೆಯಲ್ಲಿ ಹೇಳಿಕೊಳ್ಳುವಷ್ಟು ಉತ್ತೇಜನಕಾರಿಯಾಗಿರಲಿಲ್ಲ. ಹೀಗಾಗಿ ಒಂದೆರಡು ವರ್ಷ ಶ್ವೈಯಿಟ್ಸರ್ ಆ ದಿಸೆಯಲ್ಲಿ ಯಾವ ಹೊಸ ಪ್ರಯತ್ನಗಳನ್ನೂ ಮಾಡಿರಲಿಲ್ಲ.

ಆದರೂ ಅಣ್ವಸ್ತ್ರಗಳ ಪರೀಕ್ಷಾ-ಸ್ಫೋಟಗಳೂ ಬೃಹತ್-ರಾಷ್ಟ್ರಗಳ ಪೈಪೋಟಿಯಿಂದ ದಿನೇ ದಿನೇ ಹೆಚ್ಚುತ್ತಲೇ ಇದ್ದು, ಅವುಗಳನ್ನು ನಿಯಂತ್ರಿಸುವಲ್ಲಿ ವಿಶ್ವಸಂಸ್ಥೆ ನಡೆಸುತ್ತಿದ್ದ ಪ್ರಯತ್ನಗಳೂ ಫಲಕಾರಿಯಾಗಿರಲಿಲ್ಲ. ಹತಾಶರಾದ ವಿಶ್ವಸಂಸ್ಥೆಯ ಮಹಾಕಾರ್ಯದರ್ಶಿ ಡ್ಯಾಗ್ ಹ್ಯಾಮರ್‌ಷೀಲ್ಡ್‌ರು ೧೯೫೫ರಲ್ಲಿ ಡಾ॥ ಶ್ವೈಯಿಟ್ಸರ್‌ಗೆ ಪತ್ರಬರೆದು ಅವನಂಥ ಪ್ರತಿಷ್ಠಿತ ವ್ಯಕ್ತಿ ಮುಖಂಡತ್ವ ವಹಿಸಿ ಕಾರ್ಯೋನ್ಮುಖವಾದಲ್ಲಿ ಅಣ್ವಸ್ತ್ರಗಳ ಪೈಪೋಟಿಯನ್ನು ಸ್ವಲ್ಪ ಮಟ್ಟಿಗಾದರೂ ಹತೋಟಿಯಲ್ಲಿಡಲು ಸಾಧ್ಯವಾಗಬಹುದೆಂಬ ಆಶಯ ವ್ಯಕ್ತಪಡಿಸಿದ್ದರು. ಶ್ವೈಯಿಟ್ಸರ್‌ಗೆ ತನ್ನ ಇತಿಮಿತಿಗಳ ಅರಿವು ಇದ್ದಿತಾದರೂ, ನೋಬೆಲ್-ಪಾರಿತೋಷಕ ವಿಜೇತನಾದ ಅವನಿಗೆ ಈ ದಿಸೆಯಲ್ಲಿ ನೈತಿಕ ಹೊಣೆ ಇದೆಯೆಂಬ ಭಾವನೆಯೂ ಇತ್ತು. ಆದರೆ ಹೇಗೆ ಮುಂದುವರೆಯಬೇಕೆಂಬುದು ಅವನನ್ನು ಕಾಡುತ್ತಿದ್ದ ಸಮಸ್ಯೆಯಾಗಿತ್ತು.

ಅಮೆರಿಕಾದ ಡಾ॥ ಅಲ್ಬರ್ಟ್ ಶ್ವೈಯಿಟ್ಸರ್ ಸಹಾಯ ಪುದುವಟ್ಟಿನ ಮುಖ್ಯಸ್ಥರಾದ ಎಮೋರಿ ರಾಸ್, ಡಾ॥ ಶ್ವೈಯಿಟ್ಸರ್‌ನನ್ನು ಈ ದಿಸೆಯಲ್ಲಿ ಕಣಕ್ಕೆ ಎಳೆಯಬೇಕೆಂಬ ಉದ್ದೇಶದಿಂದ ಹೊಸ ಯೋಜನೆಯೊಂದನ್ನು ಹುಟ್ಟುಹಾಕಿದರು. ಆ ಕಾಲದ ಪ್ರಭಾವಶಾಲಿ ಪತ್ರಕರ್ತ, ಹಾಗೂ ಒಳ್ಳೆಯ ನೀತಿವಂತನೆನಿಸಿದ 'ಸಾಟರ್‌ಡೇ-ರಿವ್ಯೂ' ಪತ್ರಿಕೆಯ ಸಂಪಾದಕರಾದ ನಾರ್ಮನ್ ಕಸಿನ್ಸ್, ಡಾ॥ ಶ್ವೈಯಿಟ್ಸರ್‌ನೊಡನೆ ಅಣ್ವಸ್ತ್ರಗಳ ಬಗೆಗೆ ವಿಚಾರ ವಿನಿಮಯ ಮಾಡಲು ಸರಿಯಾದ ವ್ಯಕ್ತಿಯೆಂದು ಅವರ ಮನವೊಲಿಸಿದರು. ಕಸಿನ್ಸ್ ಸ್ವಲ್ಪ ದಿನಗಳ ಮೊದಲು

ಡಾ|| ಶ್ವೈಯಿಟ್ಸರ್ ಅಣುವಿಕಿರಣತೆಯ ಅಪಾಯದ ಬಗೆಗೆ ಬರೆದ ಲೇಖನವನ್ನು ಮೆಚ್ಚಿ ತಮ್ಮ ಪತ್ರಿಕೆಯಲ್ಲಿ ''ಡಾ|| ಶ್ವೈಯಿಟ್ಸರ್‌ರ ನಿಲುವು'' (THE POINT ABOUT SCHWEITZER) ಎಂಬ ಸಂಪಾದಕೀಯವನ್ನೂ ಸಹಾ ಬರೆದಿದ್ದರು. ಡಾ|| ಶ್ವೈಯಿಟ್ಸರ್ ಸುಮಾರು ೩೦-೪೦ ವರ್ಷಗಳಿಂದಲೂ ''ನಾಗರಿಕತೆಯ ತತ್ವ ಜಿಜ್ಞಾಸೆ.'' ಗ್ರಂಥದ ಮೂರನೆಯ ಭಾಗಕ್ಕಾಗಿ ತಯಾರಿಸುತ್ತಿದ್ದ ಟಿಪ್ಪಣಿಗಳು ಎಲ್ಲಿಯ ತನಕ ಬಂದಿವೆ ಮತ್ತು ಅದರ ಹಸ್ತಪ್ರತಿಯನ್ನು ಪ್ರಕಟಣೆಗೆ ತರುವ ಸೋಗಿನಲ್ಲಿ ಕಸಿನ್ಸ್ ಲ್ಯಾಂಬರೀನೆಗೆ ಹೋಗುವುದೆಂಬುದು ಎಮೋರಿ ರಾಸ್ ಈ ದಿಸೆಯಲ್ಲಿ ತಯಾರಿಸಿದ ಯೋಜನೆ, ಜತೆಯಲ್ಲೇ ಪರೋಕ್ಷವಾಗಿ ಅಣ್ವಸ್ತ್ರಗಳ ಸಮಸ್ಯೆಯ ಬಗೆಗೆ ಶ್ವೈಯಿಟ್ಸರ್‌ನೊಡನೆ ವಿಚಾರವಿನಿಮಯ ಮಾಡುವುದೆಂದೂ ಯೋಜಿಸಲಾಗಿತ್ತು.

ನಾರ್ಮನ್ ಕಸಿನ್ಸ್, ಡಾ|| ಶ್ವೈಯಿಟ್ಸರ್‌ನ ಆತ್ಮೀಯ ಆರಾಧಕಳೆನಿಸಿದ ಕ್ಲಾರಾ ಉರ್ಕ್ವಾಟಳ ಜತೆ ೧೯೫೭ರ ಆದಿಭಾಗದಲ್ಲಿ ಲ್ಯಾಂಬರೀಯನ್ನು ತಲುಪಿದರು. ಜತೆಯಲ್ಲಿ ಅಮೆರಿಕಾದ ಅಧ್ಯಕ್ಷ ಐಸೆನ್ ಹೋವರ್ ಮತ್ತು ಭಾರತದ ಪ್ರಧಾನ ಮಂತ್ರಿ ಜವಾಹರಲಾಲ್ ನೆಹರು ಅವರಿಂದ ಡಾ|| ಶ್ವೈಯಿಟ್ಸರ್‌ಗೆ ವೈಯಕ್ತಿಕ ಶುಭಾಶಯಗಳನ್ನು ತಂದಿದ್ದರು.

ಮೊದಲಿಗೆ ''ನಾಗರಿಕತೆಯ ತತ್ವಜಿಜ್ಞಾಸೆ'' ಗ್ರಂಥಕ್ಕಾಗಿ ತಯಾರಿಸುತ್ತಿದ್ದ ಟಿಪ್ಪಣಿಗಳನ್ನು ಹೊರತರುವುದೇ ಅತ್ಯಂತ ಪ್ರಯಾಸದ ಕೆಲಸವಾಯಿತು. ಪುರುಸೊತ್ತಿದ್ದು, ವಿಷಯ ನೆನಪಿಗೆ ಬಂದಾಗಲೆಲ್ಲಾ ಚೂರು ಪಾರು ಕಾಗದದ ತುಂಡುಗಳಲ್ಲಿ ಬರೆದು, ದಾರದಲ್ಲಿ ಪೋಣಿಸಿ ಕಟ್ಟುಕಟ್ಟುಗಳಾಗಿ ಸುತ್ತಿ ಅಟ್ಟದ ಮೇಲೆ ಇಟ್ಟಿದ್ದ ಪೆಟ್ಟಿಗೆಯೊಂದರಲ್ಲಿ ಅದು ಅಡಗಿ ಕೂತಿತ್ತು. ಸುಮಾರು ನಾಲ್ಕು ಲಕ್ಷ ಪದಗಳ ಪಿಂಡಿ, ಜಿರಲೆ ಮತ್ತು ಆಡಿನ ಬಾಯಿಗೂ ಸಿಕ್ಕು ಜೀರ್ಣಾವಸ್ಥೆಯಲ್ಲಿದ್ದುದನ್ನು ಅತ್ಯಂತ ಸಹನೆಯಿಂದ ಧೂಳು ಕೊಡವಿ, ಕಸಿನ್ಸ್ ತನ್ನ ವಶಕ್ಕೆ ತೆಗೆದುಕೊಳ್ಳಬೇಕಾಯಿತು!

ಮುಂದಿನ ಒಂದೆರಡು ದಿನಗಳಲ್ಲಿ ಅವರ ಮಾತುಕತೆ ಪರಮಾಣು ಸಮಸ್ಯೆಯತ್ತ ತಿರುಗಿತು. ಪ್ರಬಲ ರಾಷ್ಟ್ರಗಳ ಪರಮಾಣು ಬಾಂಬುಗಳ ಪರೀಕ್ಷಾ ಸ್ಫೋಟಗಳಿಂದ ಪ್ರಪಂಚಾದ್ಯಂತ ಹೆಚ್ಚಾಗುತ್ತಿರುವ ವಿಕಿರಣತೆಯ ದುಷ್ಪರಿಣಾಮಗಳು, ಅವು ಹೇಗೆ ನೆಲ, ಜಲ, ಆಹಾರ ವಸ್ತುಗಳನ್ನು ಅಪಾಯಕಾರಿಗಳಾಗಿ ಮಾರ್ಪಡಿಸುತ್ತವೆ, ಮಾನವನೂ ಸೇರಿದಂತೆ ಇತರ ಜೀವಿಗಳ ಮುಂದಿನ ಪೀಳಿಗೆಗಳನ್ನು ಹೇಗೆ ತೊಂದರೆಗೀಡುಮಾಡಬಹುದೆಂಬ ವಿಷಯಗಳ ಬಗೆಗೆ ಇತ್ತೀಚಿನ ಸಂಶೋಧಕರ ಅಭಿಪ್ರಾಯಗಳನ್ನು ಕಸಿನ್ಸ್, ಶ್ವೈಯಿಟ್ಸರ್‌ಗೆ ವಿವರಿಸಿದರು. ಶ್ವೈಯಿಟ್ಸರ್‌ಗೆ ಈ ಬಗೆಗೆ ಅರಿವಿತ್ತಾದರೂ ಅವುಗಳನ್ನು ಕರಾರುವಾಕ್ಕಾಗಿ ತಿಳಿಯಲು ಕಸಿನ್ಸ್‌ರೊಡನೆ ನಡೆಸಿದ

ಮಾತುಕತೆಗಳು ಸಹಾಯ ಮಾಡಿದವು. ಕಸಿನ್ಸ್ ಈಗಿನ ಪರಿಸ್ಥಿತಿಯಲ್ಲಿ ಶ್ವೈಯಿಟ್ಸರ್ ಮಾರ್ಗದರ್ಶನ ಮಾಡಲು ಮುಂದೆ ಬರಬೇಕೆಂಬುದನ್ನು ಮನದಟ್ಟು ಮಾಡುವುದರಲ್ಲಿ ಜಯಶೀಲರಾದರೆಂದೇ ಹೇಳಬೇಕು. ಆದರೆ ಮುಂದಡಿಯಿಡುವುದು ಯಾವ ರೀತಿಯಲ್ಲಿ ಎಂಬುದು ಇಬ್ಬರಿಗೂ ಮತ್ತೆ ಎದಿರಾದ ಸಮಸ್ಯೆ. ಶ್ವೈಯಿಟ್ಸರ್‌ನೇ ಈ ಬಗೆಗೆ ಆಸಕ್ತರ ಸಮ್ಮೇಳನ ಕರೆಯಬೇಕೆ, ಪತ್ರಿಕಾ ಹೇಳಿಕೆ ನೀಡಬೇಕೆ, ಯಾವ ಯಾವ ವಿಷಯಗಳಿಗೆ ಒತ್ತು ಕೊಡಬೇಕು, ಎಂಬ ವಿಷಯಗಳನ್ನು ಶ್ವೈಯಿಟ್ಸರ್‌ನೇ ನಿರ್ಧರಿಸುವುದೆಂತಲೂ ತೀರ್ಮಾನವಾಯಿತು. ನಾರ್ಮನ್ ಕಸಿನ್ಸ್ ತನ್ನ ಉದ್ದೇಶ ಸಫಲವಾಯಿತೆಂಬ ಸಂತೋಷದಿಂದ ಗ್ರಂಥದ ಹಸ್ತಪ್ರತಿಗಳೊಡನೆ ಲ್ಯಾಂಬರೀನೆಯಿಂದ ನಿರ್ಗಮಿಸಿದರು.

ಪರಮಾಣು ಸಮಸ್ಯೆಯ ಬಗೆಗೆ ಸಮ್ಮೇಳನ ಕರೆಯುವುದಕ್ಕಿಂತಲೂ, ಹೇಳಿಕೆ ನೀಡುವುದೆಂತಲೇ ಶ್ವೈಯಿಟ್ಸರ್ ಅಂತಿಮ ನಿರ್ಧಾರವನ್ನು ಮಾಡಿದ. ಹೇಳಿಕೆಯ ಕರಡು ತಯಾರಾಗುವುದಕ್ಕೆ ಎರಡು ವಾರಗಳೇ ಹಿಡಿಯಿತು. ಪತ್ರಿಕಾ ಹೇಳಿಕೆ ನೀಡುವುದಕ್ಕಿಂತಲೂ ತನಗೆ ನೋಬೆಲ್ ಪಾರಿತೋಷಕ ನೀಡಿದ ಓಸ್ಲೋ ನಗರದ ಬಾನುಲಿಯಿಂದ ಅವನ ಹೇಳಿಕೆ ಪ್ರಸಾರವಾಗುವಂತಾದರೆ ಹೆಚ್ಚಿನ ಪ್ರಭಾವ ಬೀರಬಹುದೆಂಬುದು ಶ್ವೈಯಿಟ್ಸರ್‌ನ ಅಂತಿಮ ನಿರ್ಣಯ. ನೋಬೆಲ್-ಪಾರಿತೋಷಕ-ಸಮಿತಿಯ ಅಧ್ಯಕ್ಷರನ್ನು ಸಂಪರ್ಕಿಸಿ ಅದಕ್ಕೆ ಏರ್ಪಾಡಾಯಿತು. ಲ್ಯಾಂಬರೀನೆಯಲ್ಲಿ ಅವನ ಹೇಳಿಕೆಯನ್ನು ಧ್ವನಿಮುದ್ರಿಸುವ ಅನುಕೂಲಗಳಿರಲಿಲ್ಲ. ಎದಿರಿಗೆ ಸಭಿಕರಿಲ್ಲದೇ ಮಾತಾಡುವ ಸ್ಫೂರ್ತಿಯೂ ಅವನಿಗೆ ಬರುತ್ತಿರಲಿಲ್ಲ. ಆದರಿಂದ ಓಸ್ಲೋ ಬಾನುಲಿಯಿಂದ ಅವನ ಹೇಳಿಕೆಯನ್ನು ಬೇರೆ ಯಾರಾದರೂ ಓದಿದರೆ ಸಾಕು ಎನ್ನುವ ನಿರ್ಧಾರಕ್ಕೆ ಬಂದರು.

''ಅಂತರಾತ್ಮದ ಹೇಳಿಕೆ'' ಎಂದು ಹೆಸರಾದ ಡಾ॥ ಆಲ್ಬರ್ಟ್ ಶ್ವೈಯಿಟ್ಸರ್‌ನ ಘೋಷಣೆ (THE DECLARATION OF CONSCIENCE) ಏಪ್ರಿಲ್ ೨೪, (೧೯೫೭)ರಂದು ಬಿತ್ತರವಾಯಿತು. ಇತರ ಹಲವಾರು ರಾಷ್ಟ್ರಗಳ ಬಾನುಲಿಗಳಲ್ಲೂ ಅದು ಸಹ-ಪ್ರಸಾರವಾಯಿತು. ಅಂತೂ ವಿಶ್ವಾದ್ಯಂತ ಡಾ॥ ಶ್ವೈಯಿಟ್ಸರ್‌ನ ಸಂದೇಶ ಅತಿ ಕಡಿಮೆ ಸಮಯದಲ್ಲಿ ತಲಪುವಂತಾಯಿತು.

ಪರಮಾಣು-ಬಾಂಬಿನ ಇತಿಹಾಸ, ಅದರ ವಿಕಿರಣತೆಯ ದುಷ್ಪರಿಣಾಮಗಳು, ಜೀವಿಗಳಲ್ಲಿ ತಕ್ಷಣ ಹಾಗೂ ಮುಂದಿನ ಪೀಳಿಗೆಗಳ ಮೇಲಾಗುವ ಪರಿಣಾಮ ಇತ್ಯಾದಿಗಳು ಆ ಹೇಳಿಕೆಯಲ್ಲಿ ಅಡಕವಾಗಿದ್ದವು. ವಿಶ್ವದ ರಾಜಕಾರಣಿಗಳಿಗೆ ಗೊತ್ತಿರುವ ವಿಷಯಗಳನ್ನೇ ಮತ್ತೆ ತನ್ನ ಅಂತರಾಳದಿಂದ ಹೇಳುತ್ತಿದ್ದೇನೆಂದು ನುಡಿದು ಅವರೆಲ್ಲರೂ ಎಚ್ಚೆತ್ತುಕೊಳ್ಳುವ ಸಮಯ ಬಂದಿದೆಯೆಂದು ಕಳಕಳಿಯ ಪ್ರಾರ್ಥನೆ

ಮಾಡಿದ್ದ; ಮುಂದುವರಿದು ಪ್ರಬಲ-ಪರಮಾಣು ರಾಷ್ಟ್ರಗಳಾದ ಅಮೆರಿಕಾ, ರಷ್ಯಾ, ಬ್ರಿಟನ್ ದೇಶಗಳ ನೇತಾರರು, ಅಣ್ವಸ್ತ್ರಗಳನ್ನು ಹತೋಟಿಯಲ್ಲಿಡಲು ಒಂದು ಪರಿಣಾಮಕಾರಿ ಒಪ್ಪಂದವಾಗುವವರೆಗೂ ತಾವು ಅಣುಸ್ಫೋಟಗಳನ್ನು ನಡೆಸಲೇ ಬೇಕಾಗುತ್ತದೆ ಎನ್ನುತ್ತಾರೆ; ಆದರೆ ಅಂಥ ಒಪ್ಪಂದ ಮಾಡಿಕೊಳ್ಳಲು ಯಾರೂ ಮುಂದಾಗುತ್ತಿಲ್ಲ. ಈ ಪರಿಸ್ಥಿತಿಗೆ ಪ್ರಮುಖ ಕಾರಣ ಜನರೇ. ಅಲ್ಲಿನ ಸರ್ಕಾರಗಳು ಈ ದಿಸೆಯಲ್ಲಿ ಸೂಕ್ತಕ್ರಮ ತೆಗೆದುಕೊಳ್ಳುವಂತೆ ಒತ್ತಾಯಿಸಲು ಸರಿಯಾದ ಜನಾಭಿಪ್ರಾಯ ಮೂಡಿಬರುತ್ತಿಲ್ಲ. ಜಪಾನ್ ದೇಶವನ್ನು ಬಿಟ್ಟರೆ ಬಹುಶಃ ಇಂಥಾ ಜನಾಭಿಪ್ರಾಯ ಬೇರೆಲ್ಲೂ ಮೂಡಿಬಂದಿಲ್ಲ. ಆದರಿಂದ ಪ್ರಪಂಚದ ಎಲ್ಲಾ ರಾಷ್ಟ್ರಗಳ ಜನಸಮೂಹ ಇಂಥ ಪ್ರಬಲ ಜನಾಭಿಪ್ರಾಯವನ್ನು ಮೂಡಿಸಿ, ಅವರ ಮುಖಂಡರು ಅಣ್ವಸ್ತ್ರಗಳ ಹತೋಟಿಗೆ ಒಂದು ಒಪ್ಪಂದಕ್ಕೆ ಬರಬೇಕೆಂದು ಕಳಕಳಿಯಿಂದ ಮಾಡಿದ ವಿನಂತಿ ಅದಾಗಿತ್ತು.

ಡಾ|| ಶ್ವೈಯಿಟ್ಸರ್‌ನ ''ಅಂತರಾತ್ಮದ ಹೇಳಿಕೆ''ಗೆ ವಿಶ್ವಾದ್ಯಾಂತ ಒಳ್ಳೆಯ ಪ್ರತಿಕ್ರಿಯೆಗಳುಂಟಾದವು. ಅಮೆರಿಕಾದ ಪರಮಾಣು ಶಕ್ತಿ ವಿಷಯಗಳ ಸಲಹೆಗಾರ ಮಿಲಾರ್ಡ್ ಫ್ರಾಂಕ್ ಲಿಬ್ಬಿ, ಓಸ್ಲೋ ಬಾನುಲಿಯ ನಿರ್ದೇಶಕರಿಗೆ ಪತ್ರ ಬರೆದು, ಅಣ್ವಸ್ತ್ರಗಳ ಪರೀಕ್ಷಾ-ಪ್ರಯೋಗಗಳಿಂದುಂಟಾಗುವ ಅಣುವಿಕಿರಣತೆ ಅತ್ಯಲ್ಪ ಪ್ರಮಾಣದ್ದು; ಇತರ ವಿಧಾನಗಳಿಂದ ಇನ್ನೂ ಹೆಚ್ಚು ವಿಕಿರಣತೆಗಳಾಗುತ್ತಲೇ ಇವೆ, ಎಂದು ಸ್ಪಷ್ಟೀಕರಣ ನೀಡಿದ್ದರು. ಬಾನುಲಿ-ನಿರ್ದೇಶಕರು ಶ್ವೈಯಿಟ್ಸರ್‌ಗೆ ಈ ವಿಷಯವನ್ನು ತಿಳಿಸಿ, ಈ ಹೇಳಿಕೆಗೆ ಮಾರುತ್ತರ ನೀಡಲು ಇಚ್ಛಿಸುವನೇ ಎಂದು ವಿಚಾರಿಸಿದರು. ಅದೊಂದು ಅಧಿಕಾರಶಾಹಿಯ ಸಾಂತ್ವನದ ಹೇಳಿಕೆ. ಅದನ್ನು ಗಂಭೀರವಾಗಿ ಪರಿಗಣಿಸಬೇಕಿಲ್ಲ. ತಾನು ಹೇಳವುದನ್ನೆಲ್ಲಾ ಮೂಲ ಹೇಳಿಕೆಯಲ್ಲೇ ಹೇಳಿದ್ದಾಗಿದೆ; ಅಂಥವರಿಗೆ ಉತ್ತರಿಸಬೇಕಿಲ್ಲ ಎಂದು ಕಟುವಾಗಿಯೇ ಉತ್ತರಿಸಿದ.

''ಅಂತರಾತ್ಮದ ಹೇಳಿಕೆ''ಗೆ ಜನಸಾಮಾನ್ಯರಿಂದ ಒಳ್ಳೆಯ ಅಭಿಪ್ರಾಯಗಳು ಪ್ರಕಟವಾಗಿದ್ದವು. ಆದರೆ ಬಹುತೇಕ ರಾಜಕಾರಣಿಗಳು ಈ ಬಗೆಗೆ ಹೆಚ್ಚಿನ ಗಮನ ಹರಿಸದಿದ್ದುದು ದುರದೃಷ್ಟಕರ. ಅಮೆರಿಕಾದ ಉಪಾಧ್ಯಕ್ಷ ಅಡಲಾಯಿ ಸ್ಟೀವನ್‌ಸನ್ ಮಾತ್ರ ಸ್ವಲ್ಪ ಸಹಾನೂಭೂತಿ ತೋರಿಸಿದಂತಿತ್ತು. ೧೯೫೭ರ ಜೂನ್‌ನಲ್ಲಿ ಅವರ ಆಫ್ರಿಕಾ ಸುತ್ತಾಟದ ಸಮಯದಲ್ಲಿ ಲ್ಯಾಂಬರೀನೆಗೂ ಭೇಟಿ ನೀಡಿ ಅವನ ಶ್ರಮದ ಬಗೆಗೆ ತಮ್ಮ ಮೆಚ್ಚುಗೆ ಮತ್ತು ಗೌರವ ಸೂಚಿಸಿದ್ದರು.

ಶ್ವೈಯಿಟ್ಸರ್‌ನ ''ಅಂತರಾತ್ಮದ ಹೇಳಿಕೆ''ಯಿಂದಾಗಿ ಖಚಿತ ಪರಿಣಾಮಗಳನ್ನು ಅಳೆಯುವುದು ಅಸಾಧ್ಯವಾದರೂ, ಆ ಹೇಳಿಕೆ ಪ್ರಕಟವಾದ ಸ್ವಲ್ಪ ಸಮಯದಲ್ಲಿಯೇ ಬ್ರಿಟನ್ನಿನ ಬರ್ಟ್ರೆಂಡ್ ರಸೆಲ್ ಮತ್ತು ಕ್ಯಾನನ್ ಕೋಲಿನ್ಸ್‌ರ ಮುಂದಾಳತ್ವದಲ್ಲಿ

ಎರಡು ಸಾವಿರ ವಿಜ್ಞಾನಿಗಳು ಪರಮಾಣು ನಿಶಸ್ತ್ರೀಕರಣದ ಬಗೆಗೆ ಹೇಳಿಕೆಯೊಂದನ್ನು ಹೊರಡಿಸಿದ್ದು ಗಮನಾರ್ಹ.

**ಹೆಲೆನ್‌ಳ ಅವಸಾನ**

ಹೆಲೆನ್ ಈ ಸಾರಿ ಲ್ಯಾಂಬರೀನೆಗೆ ಬಂದುಳಿದು ಸುಮಾರು ಒಂದುವರೆ ವರ್ಷಗಳಾಗಿದ್ದವು. ವಯಸ್ಸಾಗಿ ಕೃಶವಾಗಿದ್ದರ ಜತೆ, ಇಡೀ ಜೀವಮಾನವೆಲ್ಲಾ ಬೆನ್ನು ಹತ್ತಿದ್ದ ಕಾಯಿಲೆಯಿಂದಲೂ ಜರ್ಝರಿತಳಾಗಿದ್ದಳು. ನಡೆಯುವುದಕ್ಕೂ, ಉಸಿರಾಡುವುದಕ್ಕೂ ಪ್ರಯಾಸವಾಗುತ್ತಿದ್ದರೂ ಇತರರ ಸಹಾಯವನ್ನು ಪಡೆಯಲಾರದಷ್ಟು ಸ್ವಾಭಿಮಾನ ಅವಳದು. ಕಾಯಿಲೆಯಿಂದ ಸುಧಾರಿಸುವುದಕ್ಕೆ ಯುರೋಪಿಗೆ ಹಿಂದಿರುಗಲು ಶ್ವೈಟ್ಸರ್ ಒತ್ತಾಯಿಸುತ್ತಿದ್ದರೂ, ನಿರಾಕರಿಸಿ ಮಳೆಗಾಲ ಕಳೆಯುವವರೆಗೂ ಲ್ಯಾಂಬರೀನೆಯನ್ನು ಬಿಡಲಿಲ್ಲ. ಶ್ವೈಟ್ಸರ್-ಹೆಲನ್‌ರ ನಡುವೆ ಸ್ವಲ್ಪ ಕಾಲದಿಂದ ವಿರಸ ಉಂಟಾಗಿ ತನ್ನನ್ನು ದೂರವಿಡಲು ಯುರೋಪಿಗೆ ಹಿಂತಿರುಗಲು ಒತ್ತಾಯಿಸುತ್ತಿರಬಹುದೆಂಬ ಸಂಶಯ ಅವಳಲ್ಲಿದ್ದಂತಿತ್ತು. ಆದರೆ ೧೯೫೭ರ ಮೇ ತಿಂಗಳಲ್ಲಿ ಆರೋಗ್ಯದ ಸ್ಥಿತಿ ತೀರ ಹದಗೆಡುವ ಸೂಚನೆಗಳು ಕಂಡುಬಂದಿದ್ದರಿಂದ, ದಾದಿಯೊಬ್ಬಳನ್ನು ಜೊತೆಮಾಡಿಕೊಂಡು ಯುರೋಪಿಗೆ ಹಿಂದಿರುಗಿದಳು. ಲ್ಯಾಂಬರೀನೆಗೆ ಅದೇ ಅವಳ ಕೊನೆಯ ಭೇಟಿಯಾಯಿತು. ರೆನ್ನಾ ಅವಳನ್ನು ಯುರೋಪಿನಲ್ಲಿ ಸ್ವಾಗತಿಸಿ ಜೂರಿಕ್‌ನ ಖಾಸಗಿ ಆಸ್ಪತ್ರೆಯೊಂದರಲ್ಲಿ ಸೇರಿಸಿ ಚಿಕಿತ್ಸೆಗೆ ಏರ್ಪಾಡು ಮಾಡಿದಳು. ಯಾವ ಚಿಕಿತ್ಸೆಯೂ ಫಲಕಾರಿಯಾಗದೆ ಅಲ್ಲಿಗೆ ಬಂದ ಒಂದೇ ವಾರದಲ್ಲಿ ತೀರಿಕೊಂಡಳು.

ಲ್ಯಾಂಬರೀನೆಗೆ ಹೆಲೆನ್‌ಳ ಮರಣದ ಸುದ್ದಿ ತಲುಪಿದಾಗ ಶ್ವೈಟ್ಸರ್‌ನಲ್ಲಿ ಹೆಚ್ಚಿನ ಭಾವನಾತ್ಮಕ ಪ್ರತಿಕ್ರಿಯೆ ಕಂಡುಬರಲಿಲ್ಲವೆಂದು ಹೇಳಲಾಗಿದೆ. ಯಾರ ಸಾವಿಗೂ ಅವನೆಂದೂ ಬಹಿರಂಗ ಪ್ರತಿಕ್ರಿಯೆ ವ್ಯಕ್ತಪಡಿಸುವ ಸ್ವಭಾವದವನೂ ಆಗಿರಲಿಲ್ಲ. ಮುಂದಿನ ಸಾರಿ ಯುರೋಪಿಗೆ ಹೋದಾಗ ಅವಳ ಚಿತಾಭಸ್ಮವನ್ನು ಲ್ಯಾಂಬರೀನೆಗೆ ತಂದು ತನ್ನ ವಸತಿಯ ಎದುರುಗಡೆ ಸಮಾಧಿ ಮಾಡಿದ. ಲ್ಯಾಂಬರೀನೆಯ ನಿವಾಸಿಗಳು ಆಕೆಗೆ ಅಂತಿಮ ಗೌರವ ಸಲ್ಲಿಸುವ ಅವಕಾಶವೂ ದೊರೆಯಿತು.

ಮುಂದೆ ಆಗಸ್ಟ್ ತಿಂಗಳಲ್ಲಿ ಯುರೋಪಿಗೆ ಹಿಂದಿರುಗಿ, ಕೋನಿಗ್ಸ್‌ಫೆಲ್ಡ್‌ನಲ್ಲಿ ಹೆಲೆನ್‌ಗಾಗಿ ನಿರ್ಮಿಸಿದ್ದ ಮನೆಯನ್ನು ಕ್ರಿಶ್ಚಿಯನ್ನು ಪಂಗಡ ಒಂದರ ಸನ್ಯಾಸಿ-ಮಠಕ್ಕೆ ದಾನಮಾಡಿದ. ಅದರಲ್ಲಿ ಶೇಖರಿಸಿಟ್ಟಿದ್ದ ಹಲವಾರು ಸಾಮಾನುಗಳು, ಗ್ರಂಥಗಳು, ಹಸ್ತಪ್ರತಿಗಳು, ಪಿಯಾನೋ ಮುಂತಾದವುಗಳನ್ನು ಗನ್ಸ್‌ಬಾಕ್‌ನ ಮನೆಗೆ ಸಾಗಿಸಿದ.

ಈ ಸಾರಿ ಯುರೋಪಿನಲ್ಲಿದ್ದಾಗ ಹಲವಾರು ಹಳೆಯ ಸ್ನೇಹಿತರು ಮತ್ತು

ಅಭಿಮಾನಿಗಳನ್ನು ಭೇಟಿಯಾಗುವ ಕಾರ್ಯಕ್ರಮವಿತ್ತು. ಈ ತಿರುಗಾಟದ ಸಮಯದಲ್ಲಿ ಜಾರಿಬಿದ್ದು ಕೈ ಬೆರಳೊಂದು ಮುರಿದು ಸ್ವಲ್ಪಕಾಲ ನರಳುವಂತಾಯಿತು. ಜೊತೆಯಲ್ಲಿದ್ದ ಎರಿಕಾ ಶುಶ್ರೂಷೆ ಮಾಡಿ ಸಹಾಯ ಮಾಡಿದಳು.

ಶ್ವೈಟ್ಸರ್ ಮತ್ತು ಮಗಳು ರೆನ್ಹಾ ಆಕೆಯ ಮಕ್ಕಳೊಂದಿಗೆ ೧೯೫೮ರ ಜನವರಿಯ ಹೊತ್ತಿಗೆ ಲ್ಯಾಂಬರೀನೆಯಲ್ಲಿದ್ದರು. ಅವರಿಬ್ಬರ ಜೋಡಿ ಹುಟ್ಟಿದ ಹಬ್ಬ - ಶ್ವೈಟ್ಸರ್ ೮೩, ರೆನ್ಹಾ ೩೯ ವರ್ಷಗಳು- ಗಳನ್ನು ಅದೇ ಮೊದಲಬಾರಿಗೆ ಒಟ್ಟಿಗೆ ಆಚರಿಸಿದರು. ನಾಲ್ಕು ಮಕ್ಕಳಿದ್ದು ಅವಳ ಕೌಟುಂಬಿಕ ಜೀವನವೂ ಈಗ ಹದಗೆಟ್ಟು, ಭವಿಷ್ಯ ಡೋಲಾಯಮಾನ ಸ್ಥಿತಿಯಲ್ಲಿತ್ತು. ಬಾಲ್ಯದಿಂದಲೂ ತಂದೆಯ ಸಂಪರ್ಕವಿಲ್ಲದೆ ಒಂದು ರೀತಿಯ ಒಬ್ಬಂಟಿಯಾಗೇ ಬೆಳೆದವಳು; ಅವಳೂ ಸಹ ವೈದ್ಯೆಯಾಗಬೇಕೆಂದು ಇಷ್ಟಪಟ್ಟಿದ್ದಳು. ಆದರೆ ವೈದ್ಯಕೀಯದಂಥ ಕಷ್ಟಕರ ಜೀವನ ತನ್ನ ಮಗಳದಾಗಬಾರದೆಂದು ಶ್ವೈಟ್ಸರ್ ಅದಕ್ಕೆ ಸಮ್ಮತಿಸಿರಲಿಲ್ಲ. ಈಗಲಾದರೂ ತಂದೆಯ ಇಳಿವಯಸ್ಸಿನಲ್ಲಿ ಜತೆಯಲ್ಲಿದ್ದು ಅವನಿಗೂ ಸಹಾಯ ಮಾಡುತ್ತಾ, ಆಸ್ಪತ್ರೆಯ ಕೆಲಸ ಕಾರ್ಯಗಳಲ್ಲೂ ಸಹಕರಿಸುವ ಅಭಿಲಾಷೆ ಅವಳದಾಗಿತ್ತು. ಮಗಳು ಆಸ್ಪತ್ರೆಯ ಇತರರಂತೆ ಅಡಿಯಾಳಾಗಿ ಕೆಲಸ ಮಾಡುವುದು ಶ್ವೈಟ್ಸರ್‌ಗೆ ಸರಿಯೆನಿಸಲಿಲ್ಲ. ಅದರಿಂದ ಅವರಿಬ್ಬರ ಸಂಬಂಧವೂ ಕೆಡಬಹುದೆಂಬ ಅನಿಸಿಕೆ ಅವನದು. ಆದರೆ ರೆನ್ಹಾ ತನ್ನ ದೃಢನಿರ್ಧಾರವನ್ನು ಬದಲಾಯಿಸಲಿಲ್ಲ. ಯುರೋಪಿಗೆ ಹಿಂತಿರುಗಿ ಪ್ರಯೋಗಾಲಯದ ಪರೀಕ್ಷಾ-ವಿಧಾನಗಳಲ್ಲಿ ಎರಡು ವರ್ಷ ತರಬೇತಿ ಪಡೆದು ಲ್ಯಾಂಬರೀನೆಗೆ ಮರಳಿ ಬಂದಳು. ಹೊಸದಾಗಿ ರೂಪಿತವಾಗುತ್ತಿದ್ದ ಪ್ರಯೋಗಾಲಯದ ಸಂಪೂರ್ಣ ಜವಾಬ್ದಾರಿ ಈಗ ಅವಳದಾಯಿತು.

ಆಸ್ಪತ್ರೆಯು ಹಿರಿದಾಗುತ್ತಿದ್ದಂತೆ ಅದನ್ನು ನಡೆಸುವ ಜವಾಬ್ದಾರಿಯೂ ಹಿಂದಿಗಿಂತ ಹೆಚ್ಚಾಯಿತು. ಅಲ್ಲೀಗ ೩೬೦ ಜನ ಸಾಮಾನ್ಯ-ರೋಗಿಗಳು, ೨೦೦ಜನ ಕುಷ್ಠರೋಗಿಗಳ ವಸಾಹತುಗಳಿದ್ದವು. ಅವರೆಲ್ಲ ಚಿಕಿತ್ಸೆಗಾಗಿ ಐದು ಜನ ವೈದ್ಯರು, ಶುಶ್ರೂಷಣೆಗೆ ಹದಿನಾಲ್ಕು ಜನ ದಾದಿಯರು ಖಾಯಂ ಆಗಿ ಇರುತ್ತಿದ್ದರು. ಅವರೆಲ್ಲರ ಔಷಧೋಪಚಾರಗಳು ಮತ್ತು ಆಹಾರ ವಸ್ತುಗಳ ಸರಬರಾಜು ಬೃಹತ್ ಸಮಸ್ಯೆಯೇ ಸರಿ. ಹಿಂದಿನಂತೆ ಅಲ್ಲಿ ಅಕ್ಕಿ ಹೇರಳವಾಗಿ ದೊರೆಯುತ್ತಿರಲಿಲ್ಲ. ಈಗವರು ಬಾಳೆಹಣ್ಣು, ಮ್ಯಾನಿಯೊಕ್-ಗಡ್ಡೆ, ಮುಳು ಗೆಣಸು, ಮುಂತಾದವನ್ನು ಖರೀದಿಸಿಕೊಳ್ಳಬೇಕಾಗಿತ್ತು. ದೂರ ದೂರದ ಸ್ಥಳಗಳಿಂದ ಅವುಗಳನ್ನು ಕೊಂಡು ತರುವುದೂ ಕಷ್ಟವೇ. ಯಾಂತ್ರೀಕೃತ ದೋಣಿ ಅಥವಾ ಸ್ವಯಂಚಾಲಿತ ವಾಹನಗಳ ಬಳಕೆಗೆ ಯಾಂತ್ರೀಕರಣದ ವಿರೋಧಿಯಾಗಿದ್ದ ಶ್ವೈಟ್ಸರ್ ಮೊದಲು

ವಿರೋಧಿಸಿದ್ದ. ಆದರೆ ಮುಂದೆ ಪರಿಸ್ಥಿತಿ ಜಟಿಲವಾದಂತೆ ಮೋಟಾರು ವಾಹನವನ್ನು ಖರೀದಿಸುವುದು ಅನಿವಾರ್ಯವೆನಿಸಿತು. ಅಧೇ ಮೊದಲ ಬಾರಿಗೆ ಬೆಂಜ್-ಟ್ರಕ್ ಒಂದು ಲ್ಯಾಂಬರೀನೆಗೆ ಬಂದದ್ದು ಎಲ್ಲರನ್ನು ಆಶ್ಚರ್ಯಗೊಳಿಸಿತು. ಆ ಪ್ರದೇಶಕ್ಕೆ ಅದು ಎರಡನೇ ಮೋಟಾರು ವಾಹನ!

ಡಾ॥ ಶೆಯಿಟ್ಸರ್, ಡಾ॥ ಬರ್ಟ್ರೆಂಡ್ ರಸೆಲ್‌ರಂಥ ಪ್ರಜ್ಞಾವಂತ ಜನರು ಪರಮಾಣು ಸ್ಫೋಟಗಳು ಮತ್ತು ಅಣ್ವಸ್ತ್ರಗಳ ಉತ್ಪಾದನೆ ಮಿತಿಮೀರಿ ಹೆಚ್ಚುತ್ತಿದ್ದುದರ ಬಗೆಗೆ ಕಳಕಳಿ ವ್ಯಕ್ತಪಡಿಸುತ್ತಲೇ ಇದ್ದರೂ, ಅಣುವಿಕಿರಣದ ವಿನಾಶದತ್ತ ವಿಶ್ವ ದಾಪುಗಾಲು ಹಾಕುತ್ತಲೇ ಇತ್ತು. ಆ ಸಮಯದಲ್ಲಿ ಅಮೆರಿಕಾ, ಬ್ರಿಟನ್ ಮತ್ತು ರಷ್ಯಾ ದೇಶಗಳ ನಾಯಕರು ಈ ಬಗೆಗೆ ಲಂಡನ್ನಿನಲ್ಲಿ ನಡೆಸುತ್ತಿದ್ದ ಮಾತುಕತೆಗಳು ಮುರಿದು ಬಿದ್ದವು. ಒಳ್ಳೆಯ ಫಲಿತಾಂಶವನ್ನು ನಿರೀಕ್ಷಿಸುತ್ತಿದ್ದ ಡಾ॥ ಶ್ವೆಯಿಟ್ಸರ್‌ಗೆ ತುಂಬಾ ನಿರಾಶೆಯಾಯಿತು.

ಅಮೆರಿಕಾದ ಹೆಸರಾಂತ ವಿಜ್ಞಾನಿ ಲೈನಸ್ ಪೌಲಿಂಗ್ ಅಣ್ವಸ್ತ್ರಗಳನ್ನು ಮಿತಿಗೊಳಿಸುವ ಬಗೆಗೆ ಮನವಿಯೊಂದನ್ನು ತಯಾರಿಸಿ ವಿಶ್ವದ ಗಣ್ಯ ವಿಜ್ಞಾನಿಗಳು, ಶಾಂತಿ-ಪಾರಿತೋಷಕ-ವಿಜೇತರು, ಮುಂತಾದವರ ಸಹಿ ಸಂಗ್ರಹಣೆಯಲ್ಲಿ ತೊಡಗಿದ್ದರು. ಶ್ವೆಯಿಟ್ಸರ್ ಅದಕ್ಕೂ ಯಾವ ಆಕ್ಷೇಪಣೆ ಎತ್ತದೆ ಸಹಿ ಮಾಡಿದ.

ಈ ಸಮಯದಲ್ಲೇ ಸುಮಾರು ೫೦೦೦ ಮೈಲಿಗಳಷ್ಟು ದೂರ ಪ್ರಯಾಣ ಮಾಡಿ ನಿಗದಿತ ಗುರಿಯಲ್ಲಿನ ಊರನ್ನು ನಾಶಮಾಡುವಂಥ ಖಂಡಾಂತರ ಕ್ಷಿಪಣಿಗಳ ಉಗಮದ ಸುದ್ದಿ ಪ್ರಪಂಚದಾದ್ಯಂತ ಶಾಂತಿಪ್ರಿಯರ ಮನಸ್ಸನ್ನು ಕೆದಕಿತು. ಅವುಗಳಿಂದಾಗಬಹುದಾದ ವಿನಾಶದ ವಿವರ ತಿಳಿದು ಶ್ವೆಯಿಟ್ಸರ್ ತತ್ತರಿಸಿಹೋದ. ಅಮೆರಿಕಾ, ಇಂಗ್ಲೆಂಡ್, ಫ್ರಾನ್ಸ್, ಜರ್ಮನಿಗಳಂಥ ಇಡೀ ರಾಷ್ಟ್ರಗಳೇ ಹೇಳ ಹೆಸರಿಲ್ಲದೆ ಕೆಲವೇ ಗಂಟೆಗಳಲ್ಲಿ ನಾಶವಾಗುವ ಸಾಧ್ಯತೆ ಅವನ ಕಣ್ಣಮುಂದೆ ಹಾದುಹೋಯಿತು. ಹೊಸದಾಗಿ ಕಂಡುಹಿಡಿದ ರೇಡಾರ್ ಪರದೆಯಲ್ಲಿ ಕೆಲಸಾರಿ ಪಕ್ಷಿಗಳ ಹಾರಾಟವೂ ನುಗ್ಗಿ ಬರುತ್ತಿರುವ ವೈರಿಗಳ ವಿಮಾನವೆಂಬ ಭ್ರಮೆಯುಂಟಾಗಿ, ಕ್ಷಿಪಣಿಗಳನ್ನು ಹಾರಿಸಿ, ಯುದ್ಧ ಭುಗಿಲೆಂದು ಹತ್ತಿಕೊಳ್ಳುವ ಸಾಧ್ಯತೆ ಇತ್ತು. ಯಾವುದೇ ರಾಷ್ಟ್ರದ ಅಧಿಪತಿಯ ಆಜ್ಞೆಯೂ ಇಲ್ಲದೆ ಇಂಥ ಅಪಘಾತ ವಿಶ್ವವನ್ನು ವಿನಾಶದ ಅಂಚಿಗೆ ಕೊಂಡು ಹೋಗಬಹುದಿತ್ತು. ಈ ಭಯಂಕರ ಭವಿಷ್ಯದ ಬಗೆಗೆ ಆಳವಾಗಿ ಯೋಚಿಸಿದ ಡಾ॥ ಶ್ವೆಯಿಟ್ಸರ್ ಮತ್ತೊಮ್ಮೆ ತನ್ನ ಪ್ರಯತ್ನ ಮಾಡುವ ಯೋಚನೆ ಮಾಡಿದ. ಇಂಥ ಗಂಡಾಂತರಕಾರಿ ಅಂಶಗಳನ್ನೆಲ್ಲಾ ಸೇರಿಸಿ ಒಂದು ಭಾಷಣ ಮಾಲೆಯನ್ನೇ ತಯಾರಿಸಿದ. ಈ ಭಾಷಣ ಏಪ್ರಿಲ್ ತಿಂಗಳ ೨೮, ೨೯ ಮತ್ತು ೩೦ರ ದಿನಗಳು ಓಸ್ಲೋ ಬಾನುಲಿಯಿಂದ

ಬಿತ್ತರವಾದವು. ಹೇಗಾದರೂ ಮಾಡಿ ಪ್ರಪಂಚದ ವಿನಾಶವನ್ನು ತಪ್ಪಿಸಬೇಕೆಂದು ಪ್ರಮುಖ ರಾಷ್ಟ್ರಗಳಿಗೆ ಕಳಕಳಿಯಿಂದ ವಿನಂತಿಸಿಕೊಂಡಿದ್ದ. ಆ ಸಮಯದಲ್ಲೇ ಅಮೆರಿಕಾ, ಬ್ರಿಟನ್ ಮತ್ತು ರಷ್ಯಾದೇಶಗಳ ಅಧಿಪತಿಗಳ ಶೃಂಗ ಸಭೆಗೆ ಸನ್ನಾಹ ನಡೆಯುತ್ತಿದ್ದು ಶ್ವೈಯಿಟ್ಸರ್‌ನ ವಿನಂತಿ ಅವರುಗಳಿಗೇ ನೇರವಾಗಿ ಮಾಡಿಕೊಂಡಂತಿತ್ತು. ಆ ಪ್ರಮುಖರು ಡಾ॥ ಆಲ್ಬರ್ಟ್ ಶ್ವೈಯಿಟ್ಸರ್‌ನಂಥ ಮಹಾಪುರುಷನ ವಿನಂತಿಗೆ ಮಣಿದರೋ ಅಥವಾ ಕಾಕತಾಳೀಯವೋ ಎಂಬಂತೆ ಆ ವರ್ಷವೇ ಪ್ರಮುಖ ಪರಮಾಣು ರಾಷ್ಟ್ರಗಳು ಪರೀಕ್ಷಾ-ಸ್ಫೋಟಗಳನ್ನು ಸ್ವಪ್ರೇರಿತರಾಗಿ ಸ್ಥಗಿತಗೊಳಿಸಿದರು. ಇನ್ನೈದು ವರ್ಷಗಳಲ್ಲಿ ಪರಮಾಣು ಪರೀಕ್ಷೆಗಳ ನಿರ್ಬಂಧದ ಅಣ್ವಸ್ತ್ರಪರೀಕ್ಷಾ-ನಿಷೇಧ ಒಪ್ಪಂದ ಏರ್ಪಟ್ಟಿತು.

ಡಾ॥ ಆಲ್ಬರ್ಟ್ ಶೆಯಿಟ್ಸರ್ ಆಫ್ರಿಕಾದ ಕಾಡಿನ ನಡುವೆ ಇದ್ದುಕೊಂಡು ಈಗ ತನಗರಿವಿಲ್ಲದಂತೆಯೇ, ವಿಶ್ವರಾಜಕೀಯ - ಅದರಲ್ಲೂ ಪರಮಾಣು ರಾಜಕೀಯದಲ್ಲಿನೇರವಾಗಿ ಇಳಿದಿದ್ದನೆನ್ನಬಹುದು. ಪ್ರತಿದಿನ ಪ್ರಪಂಚದ ಮೂಲೆ ಮೂಲೆಗಳಿಂದ ಗಣ್ಯವ್ಯಕ್ತಿಗಳೇ ಅಲ್ಲದೆ, ಸಾಮಾನ್ಯ ಜನರೂ ಸಹಾ ವಿಶ್ವದ ಉಳಿವಿನ ಬಗೆಗೆ ಪತ್ರವ್ಯವಹಾರ ಮಾಡುತ್ತಿದ್ದರು. ದಿನದಿನವೂ ಕಾಗದದ ಹೊರೆಗಳೇ ಲ್ಯಾಂಬರೀನೆಗೆ ಬಂದು ಬೀಳುತ್ತಿದ್ದವು. ಅವುಗಳಿಗೆ ಉತ್ತರಿಸುವುದೇ ಈಗ ಲ್ಯಾಂಬರೀನೆಯಲ್ಲಿ ಒಂದು ವಿಶೇಷ ಕಾರ್ಯಕ್ರಮವಾಯಿತು. ದಾದಿಯರಾದ ಮಥಿಲ್ಡ, ಆಲಿ ಸಿಲ್ವರ್ ಮುಂತಾದವರ ಹೆಚ್ಚಿನ ಸಮಯ ಈ ಕೆಲಸಕ್ಕೆ ಮುಡಿಪಾಯಿತು.

ವಿಶ್ವ ರಾಜಕೀಯದ ಸಮಸ್ಯೆಗಳ ಪರಿಹಾರದ ಕೋರಿಕೆಗಳ ಜತೆಗೆ ಗೌರವ-ಸನ್ಮಾನಗಳ ಆಹ್ವಾನಗಳೂ ಇರುತ್ತಿದ್ದವು. ಇವುಗಳಲ್ಲಿ ಅಮೆರಿಕಾದ ಫ್ರಿನ್ಸ್‌ಟನ್ ವಿಶ್ವವಿದ್ಯಾಲಯದ ಗೌರವ-ಪದವಿ, ಯೇಲ್‌ನಿಂದ ಹೌಲ್ಯಾಂಡ ಸ್ಮಾರಕ ಬಹುಮಾನ-೩೦೦೦ ಡಾಲರುಗಳ ಕೊಡುಗೆ ಮುಖ್ಯವಾದವು. ಅದನ್ನು ಅಮೆರಿಕಾಕ್ಕೆ ಶ್ವೈಯಿಟ್ಸರ್ ಖುದ್ದಾಗಿ ಬಂದು ಸ್ವೀಕರಿಸಬೇಕೆಂದು ಅಡಲಾಯಿ ಸ್ಟೀವನ್ ಸನ್ ಮತ್ತು ರಾಬರ್ಟ್ ಓಪನ್‌ಹೈಮರ್ ಕೋರಿ ಪತ್ರ ಬರೆದಿದ್ದರು. ಆದರೆ ಅಟ್ಲಾಂಟಿಕ್ ಮಹಾಸಾಗರವನ್ನು ಮತ್ತೊಮ್ಮೆ ದಾಟುವ ಸ್ಥಿತಿಯಲ್ಲಿ ಅವನಿರಲಿಲ್ಲ.

ಆದರೂ ಯುರೋಪಿಗೆ ಮತ್ತೊಮ್ಮೆ ಪ್ರಯಾಣ ಮಾಡಲೇಬೇಕಾಯಿತು. ಆ ಸಮಯದಲ್ಲಿ ಕೋಪನ್ ಹೇಗನ್‌ನಲ್ಲಿ ಸೊನ್ನಿಂಗ್ ಬಹುಮಾನ, ಬ್ರಸೆಲ್ಸ್‌ನಲ್ಲಿ ಲೆಮೈರೆ ಬಹುಮಾನ, ಫ್ರಾಂಕ್‌ಫರ್ಟ್ ನಗರದ ಗೌರವ ಸದಸ್ಯತ್ವಗಳನ್ನು ಸ್ವೀಕರಿಸಿದನು. ಸ್ವಿಟ್ಸರ್‌ಲೇಂಡ್, ಸ್ವೀಡನ್ ಮತ್ತು ಫ್ರಾನ್ಸ್‌ಗಳಿಗೂ ಭೇಟಿ

ಕೊಡಬೇಕಾಯಿತು. ಗನ್ಸ್‌ಬಾಕ್‌ನಲ್ಲಿದ್ದ ಸಮಯದಲ್ಲಿ ತನ್ನ ಹಳೇ ಚರ್ಚ್‌ನ ಆರ್ಗನ್ ದುರಸ್ತಿ ಕೆಲಸವನ್ನೂ ಅವನೇ ಮಾಡಿದನು. ಅದಕ್ಕಾಗಿ ಅಮೆರಿಕಾದಿಂದ ಬಿಡಿ-ಭಾಗಗಳನ್ನು ತರಿಸಿಕೊಂಡು, ಹಲವಾರು ಜನರಿಂದ ವಂತಿಗೆ ಸಹಾ ಎತ್ತಬೇಕಾಯಿತು.

**ಬದಲಾದ ರಾಜಕೀಯ**

ಗೇಬನ್ ಅಂತಿಮವಾಗಿ ೧೯೬೦ರಲ್ಲಿ ಸರ್ವಸ್ವತಂತ್ರರಾಷ್ಟ್ರ (REPUBLIC) ವಾಯಿತು. ಬಿಳಿಯರ ವಿಷಯದಲ್ಲಿ ಇನ್ನೂ ಕಟ್ಟುನಿಟ್ಟಾದ ಕಾಯಿದೆಗಳು ಜಾರಿಗೆ ಬಂದವು. ಮಿಕ್ಕೆಲ್ಲಾ ಬಿಳಿಯರನ್ನು ಅನುಮಾನಾಸ್ಪದದಿಂದಲೇ ನೋಡುತ್ತಿದ್ದರೂ, ಡಾ|| ಶ್ವೈಯಿಟ್ಸರ್ ವಿಷಯದಲ್ಲಿ ಅವರಿಗೆಲ್ಲಾ ತುಂಬಾ ಗೌರವಾದರಗಳಿದ್ದವು. ಅವನೊಬ್ಬ ಆ ದೇಶದ ಪ್ರಜೆಯೆಂದೇ ಪರಿಗಣಿಸಿದ್ದರು. ಆ ಸಮಯದಲ್ಲಿ ವಿಶ್ವ ಸಂಸ್ಥೆ ನೇಮಿಸಿದ್ದ ಮಾನವ ಹಕ್ಕುಬಾಧ್ಯತೆಗಳ ಸಮಿತಿಯಲ್ಲಿ ಆಫ್ರಿಕಾದ ರಾಷ್ಟ್ರಗಳನ್ನು ಪ್ರತಿನಿಧಿಸುವ ಸದಸ್ಯರ ತಂಡದಲ್ಲಿ ಗೇಬನ್ ಸರ್ಕಾರ ಡಾ|| ಶ್ವೈಯಿಟ್ಸರ್‌ನನ್ನು ಸೇರಿಸಿದ್ದು ಅವನಲ್ಲಿ ಇಟ್ಟಿದ್ದ ಗೌರವಾದರಗಳ ಸಂಕೇತವೇ ಸರಿ. ಆದರೆ ಆಸ್ಪತ್ರೆಯಲ್ಲಿನ ಕೆಲಸಗಳ ಜವಾಬ್ದಾರಿ ಹಾಗೂ ವಯಸ್ಸಿನ ಭಾರದಿಂದ ಶ್ವೈಯಿಟ್ಸರ್ ಸಮಿತಿಯಲ್ಲಿ ಸೇರಿಕೊಳ್ಳಲಾಗಲಿಲ್ಲ.

ಎಂಬತ್ತೈದನೇ ಜನ್ಮದಿನ ಸಮೀಪಿಸುತ್ತಿದ್ದಂತೆ ೧೯೫೯ರ ಡಿಸೆಂಬರ್‌ನಲ್ಲಿ ಶ್ವೈಯಿಟ್ಸರ್ ಯುರೋಪಿನಿಂದ ಲ್ಯಾಂಬರೀನೆಗೆ ಹಿಂದಿರುಗಿದನು. ಇನ್ನು ಅಲ್ಲಿಂದ ಕದಲುವುದಿಲ್ಲವೆಂಬ ನಿರ್ಧಾರವೂ ಅವನದಾಯಿತು. ಆಸ್ಪತ್ರೆ ವಿಸ್ತಾರಗೊಳ್ಳುತ್ತಲೇ ಇತ್ತು. ರೆನ್ನಾಳ ನೇತೃತ್ವದಲ್ಲಿ ಪ್ರಯೋಗಶಾಲೆ ಸುಸಜ್ಜಿತವಾಗಿ ಒಳ್ಳೆಯ ಕಾರ್ಯ ನಡೆಸುತ್ತಿತ್ತು. ಆಸ್ಪತ್ರೆಯ ಆಡಳಿತದಲ್ಲೂ ಸಕ್ರಿಯವಾಗಿ ಭಾಗವಹಿಸುತ್ತಿದ್ದ ಅವಳಿಗೂ, ಶ್ವೈಯಿಟ್ಸರ್‌ಗೂ ಆಗಾಗ್ಗೆ ಭಿನ್ನಾಭಿಪ್ರಾಯಗಳುಂಟಾಗಿ ಸಣ್ಣ ಪುಟ್ಟ ವಾಗ್ವಾದ ಗಳಾಗುತ್ತಿದ್ದವು.

ಪರಮಾಣು-ಅಸ್ತ್ರಗಳನ್ನು ಹೆಚ್ಚಾಗಿ ತಯಾರಿಸಬೇಕೆನ್ನುವವರ ಗುಂಪೊಂದು ಅಮೆರಿಕೆಯಲ್ಲಿ ಬಹಳ ಆಸಕ್ತಿಯಿಂದ ಕಾರ್ಯ ನಿರ್ವಹಿಸುತ್ತಿತ್ತು. ಅವುಗಳ ವಿರುದ್ಧ ಮಾತನಾಡುವವರನ್ನು ದೇಶದ್ರೋಹಿಗಳೆಂದು ಸಾರುವಷ್ಟು ಅಲ್ಲಿನ ವಾತಾವರಣ ಪ್ರಕ್ಷುಬ್ಧವಾಗಿತ್ತು. ಪರಮಾಣು-ಅಸ್ತ್ರಗಳ ವಿರುದ್ಧ ಆಂದೋಳನ ಶುರುಮಾಡಿದ್ದ ಲೈನಸ್ ಪೌಲಿಂಗ್‌ರ ವಿರುದ್ಧ ವಿಚಾರಣೆಗಳು ಶುರುವಾಗಿದ್ದವು. ಅವು ಅಂತಿಮ ಹಂತಕ್ಕೆ ಬರುವುದರಲ್ಲಿದ್ದು ಅವರು ಅಪಾಯದ ಅಂಚಿನಲ್ಲಿದ್ದರು. ಸಹಾಯಕ್ಕಾಗಿ ಡಾ|| ಶ್ವೈಯಿಟ್ಸರ್‌ನ ಮೊರೆಹೊಕ್ಕಾಗ, ಅಮೆರಿಕ ಸರ್ಕಾರ ನೋಬೆಲ್-ಶಾಂತಿ-ಪಾರಿತೋಷಕ ವಿಜೇತ ಹಾಗೂ ಶಾಂತಿದೂತನೆನಿಸಿದ ಡಾ|| ಶ್ವೈಯಿಟ್ಸರ್

ರಂಥವನನ್ನು ಎದಿರು ಹಾಕಿಕೊಳ್ಳುವುದು ಸರಿಯಲ್ಲವೆಂದು ಪೌಲಿಂಗ ವಿರುದ್ಧದ ವಿಚಾರಣೆಗಳನ್ನೇ ಕೈಬಿಟ್ಟಿತು!

**ಪ್ರಕ್ಷುಬ್ಧ ಪರಿಸ್ಥಿತಿ**

ನೂರಾರು ವರ್ಷಗಳ ದಾಸ್ಯದ ಶೃಂಖಲೆಗಳಿದ್ದ ಹಲವಾರು ಆಫ್ರಿಕಾದ ರಾಷ್ಟ್ರಗಳು ೧೯೬೦ರ ದಶಕ ಸಮೀಪಿಸುತ್ತಿದ್ದಂತೆ ಸ್ವಾತಂತ್ರ್ಯ ಪಡೆಯಲು ಆರಂಭಿಸಿದವು. ಆದರೆ ಹಲವೆಡೆಗಳಲ್ಲಿ ದೇಶವನ್ನು ಬಿಟ್ಟು ಹೋಗುತ್ತಿದ್ದ ಹೊರಗಿನ ಆಳರಸರು ಮತ್ತು ಆಫ್ರಿಕನ್ನರ ನಡುವೆ ದ್ವೇಷದ ಕಾಳ್ಗಿಚ್ಚು ಭುಗಿಲೆದ್ದು ಹೊಡೆದಾಟಗಳಾಗುತ್ತಿದ್ದವು. ಇನ್ನು ಕೆಲವು ಕಡೆ ಸ್ವತಂತ್ರವಾದ ರಾಷ್ಟ್ರಗಳೊಳಗಿನ ಹಲವಾರು ಗುಂಪುಗಳ ನಡುವೆಯೂ ಕಿತ್ತಾಟಗಳು ಆರಂಭವಾಗಿದ್ದವು. ಬೆಲ್ಜಿಯಂ ಕಾಂಗೋ ಅಂಥ ಪ್ರದೇಶಗಳಲ್ಲೊಂದು. ಗೇಬನ್ ಸ್ವಾತಂತ್ರ್ಯ ಗಳಿಸಿದ ೧೯೬೦ರ ಸುಮಾರಿನಲ್ಲೇ ಬೆಲ್ಜಿಯಂನವರು ಕಾಂಗೋವನ್ನು ತ್ಯಜಿಸಿದರು. ಹಿಂದೆ ಆ ಪ್ರದೇಶ ಬೆಲ್ಜಿಯಂನವರ ವಶಕ್ಕೆ ಬರುವ ಮೊದಲು ಕಟಾಂಗ ಮತ್ತು ಕಾಂಗೋ ಎಂಬ ಎರಡು ಪ್ರತ್ಯೇಕ ದೇಶಗಳಾಗಿ ಅಸ್ತಿತ್ವದಲ್ಲಿದ್ದವು. ಕಟಾಂಗ ತಾಮ್ರದ ಗಣಿಗಳಿದ್ದ ಸಂಪದ್ಭರಿತ ಪ್ರದೇಶ. ಸ್ವಾತಂತ್ರ್ಯ ಲಭಿಸಿದಾಗ ಆ ಪ್ರದೇಶದವರು ಹಿಂದಿನಂತೆ ಪ್ರತ್ಯೇಕ ದೇಶವಾಗಿರಬೇಕೆಂದು ಆಶಿಸಿದರು. ಆದರೆ ಹಿಂದುಳಿದ ಕಾಂಗೋ ಪ್ರದೇಶದವರು ಬೆಲ್ಜಿಯಂನ ಆಡಳಿದಲ್ಲಿದ್ದಂತೆ ಅವೆರಡು ಒಂದೇ ರಾಜ್ಯವಾಗಿ ಮುಂದುವರಿಯಬೇಕೆಂದು ಹಠ ಹಿಡಿದರು. ಕಟಾಂಗದವರು ಇದಕ್ಕೊಪ್ಪದೆ ತಾವು ಸರ್ವ ಸ್ವತಂತ್ರರೆಂದು ಘೋಷಿಸಿದರು. ಅಲ್ಲಿನ ತಾಮ್ರದ ಗಣಿಗಳು ವಿದೇಶಿ- ಮಾಲಕರ ವಶದಲ್ಲಿದ್ದು ಕಟಾಂಗದವರ ಈ ವಾದಕ್ಕೆ ಬೆಂಬಲ ಕೊಟ್ಟು ಪ್ರಚೋದಿಸಿದರು. ತಮ್ಮ ದೇಶಗಳಿಂದ ಬಾಡಿಗೆ ಸೈನಿಕರನ್ನು ತಂದು ಕಾಂಗೋ ವಿರುದ್ಧ ಯುದ್ಧ ಸಾರಿದರು. ಇಡೀ ಬೆಲ್ಜಿಯಂ ಕಾಂಗೋ ಭುಗಿಲೆಂದು ಹತ್ತಿಕೊಂಡಿತು. ವಿಶ್ವದ ರಾಜಕೀಯ ಬಣಗಳು ಒಂದೊಂದು ಪಕ್ಷದ ಕಡೆ ಸೇರಿಕೊಂಡು ಉರಿಯುವ ಬೆಂಕಿಗೆ ಎಣ್ಣೆ ಸುರಿದರು. ಆಗ ಕಾಂಗೋದ ಪ್ರಧಾನಿಯಾಗಿದ್ದ ನಿಸ್ವಾರ್ಥ ದೇಶಭಕ್ತನೆನಿಸಿದ ಪ್ಯಾಟ್ರಿಸ್ ಲುಮುಂಬಾ ಮುಂತಾದ ಹಲವು ನಾಯಕರ ಕಗ್ಗೊಲೆಗಳಾದವು. ಬಹಳ ಕಾಲದಿಂದ ಆಫ್ರಿಕಾದಲ್ಲಿ ನೆಲೆಸಿದ್ದ ಡಾ॥ ಶ್ವೈಟ್ಸರ್ ಈ ಸಮಸ್ಯೆಯ ಪರಿಹಾರಕ್ಕೆ ಸಹಾಯ ಮಾಡಬೇಕೆಂದು ವಿಶ್ವಸಂಸ್ಥೆಯ ಮಹಾ ಕಾರ್ಯದರ್ಶಿ ಡ್ಯಾಗ್‌ಹ್ಯಾಮರ್‌ಷೀಲ್ಡರು ಕೇಳಿಕೊಂಡರು. ಅಲ್ಲಿನ ಪರಿಸ್ಥಿತಿಯ ಬಗೆಗೆ ಸರಿಯಾದ ತಿಳುವಳಿಕೆಯಿದ್ದ ಶ್ವೈಟ್ಸರ್ ಕಟಾಂಗದವರ ವಾದವನ್ನು ಸಮರ್ಥಿಸಿದ. ಆದರೆ ಈ ಅಭಿಪ್ರಾಯ ವಿಶ್ವಸಂಸ್ಥೆ ಮತ್ತು ಕೆಲವು ತಟಸ್ಥ ರಾಷ್ಟ್ರಗಳವರ ಅಭಿಪ್ರಾಯಕ್ಕೆ ವಿರುದ್ಧವಾಗಿತ್ತು. ಈಗ ವಿಶ್ವ ರಾಜಕೀಯದಲ್ಲಿ ಡಾ॥ ಶ್ವೈಟ್ಸರ್‌ನೂ

ಒಬ್ಬಪಾತ್ರಧಾರಿಯಾದಂತಾಯಿತು. ಸಂಬಂಧಪಟ್ಟವರನ್ನು ಸಂಪರ್ಕಿಸಿ ನೇರ ಸಂಧಾನ ಮಾಡಲು ಹ್ಯಾಮರ್‌ಷೀಲ್ಡ್‌ರೇ ಕಾಂಗೋಗೆ ಪ್ರಯಾಣ ಮಾಡಬೇಕಾಯಿತು. ವಿಮಾನದಲ್ಲಿ ಲ್ಯಾಂಬರೀನೆಯ ಆಕಾಶಮಾರ್ಗವಾಗಿ ಪಯಣಿಸಿದ ಹ್ಯಾಮರ್‌ಫೀಲ್ಡರು ಡಾ॥ ಶ್ವೆಯಿಟ್ಸರ್‌ಗೂ ಶುಭಸಂದೇಶ ಕಳಿಸಿದರು. ಆದರೆ ದುರದೃಷ್ಟವಶಾತ್ ಅವರು ಕಾಂಗೋದಿಂದ ಹಿಂದಿರುಗುವಾಗ ವಿಮಾನಾಪಘಾತದಲ್ಲಿ ಮಡಿದರು. ತನ್ನ ಆತ್ಮೀಯ ಅಭಿಮಾನಿಗಳಲ್ಲೊಬ್ಬರಾದ ಡ್ಯಾಗ್ ಹ್ಯಾಮರ್‌ಫೀಲ್ಡ್‌ರು ಈ ರೀತಿ ಶಾಂತಿ ಯಾತ್ರೆಯಲ್ಲಿ ಅಕಾಲಮರಣಕ್ಕೀಡಾದದ್ದು ಶ್ವೆಯಿಟ್ಸರ್‌ಗೆ ಅತೀವ ದುಃಖವನ್ನುಂಟುಮಾಡಿತು. ಕಾಂಗೋ ಸಮಸ್ಯೆಯ ವಿಷಯದಲ್ಲಿ ಅವರಿಬ್ಬರೂ ಪರಸ್ಪರ ವಿರೋಧದ ಅಭಿಪ್ರಾಯ ಹೊಂದುವಂತಾದುದು ಅವನಿಗೆ ಬೇಸರ ತಂದ ಇನ್ನೊಂದು ವಿಷಯ.

ಆಫ್ರಿಕಾದ ರಾಜಕೀಯದಲ್ಲಿ ಪ್ರಕ್ಷುಬ್ಧ ವಾತಾವರಣ ಇರುವಾಗಲೇ ಸುಮಾರು ೧೯೬೨ರ ಅಕ್ಟೋಬರ್‌ನಲ್ಲಿ ಇನ್ನೇನು ಪರಮಾಣು ಅಸ್ತ್ರಗಳ ಸಮರ ಸನ್ನಿಹಿತವಾಗುವಂಥ ವಾತಾವರಣ ತಲೆದೋರಿತು. ಅಮೆರಿಕಾದ ತೀರ ಪ್ರದೇಶದ ದ್ವೀಪ ರಾಷ್ಟ್ರ ಕ್ಯೂಬಾದಲ್ಲಿ ರಷ್ಯಾದೇಶದವರು ಕ್ಷಿಪಣಿಗಳನ್ನು ಸ್ಥಾಪಿಸಿ ಅಮೆರಿಕಾದ ಭದ್ರತೆಗೆ ಸವಾಲು ಎಸಗಿದ್ದರು. ಆಗಿನ ಅಮೆರಿಕಾ ರಾಷ್ಟ್ರಾಧ್ಯಕ್ಷ ಜಾನ್. ಎಫ್. ಕೆನಡಿ ನಡೆಸಿದ ಮಾತುಕತೆಗಳು ವಿಫಲವಾದವು. ಇನ್ನೇನು ಅಣುಸಮರ ಸನ್ನಿಹಿತ ವಾಯಿತೆಂದು ಪ್ರಪಂಚದಾದ್ಯಂತ ಪ್ರಜ್ಞಾವಂತರನ್ನೆಲ್ಲಾ ಯೋಚನೆಗೀಡು ಮಾಡಿತು. ಈ ದಿಸೆಯಲ್ಲಿ ಸ್ವತಃ ಏನೂ ಮಾಡಲಾಗದ ಅಸಹಾಯಕ ಡಾ॥ ಶ್ವೆಯಿಟ್ಸರ್, ಬರ್ಟ್ರೆಂಡ್ ರಸೆಲ್‌ರು ಈ ದಿಸೆಯಲ್ಲಿ ಮಧ್ಯಸ್ಥಿಕೆ ವಹಿಸಬೇಕೆಂದು ಮನವಿ ಮಾಡಿಕೊಂಡ. ಸಮಸ್ಯೆ ಹೇಗೋ ಪರಿಹಾರವಾಗಿ ಎಲ್ಲರೂ ಹಾಯಾಗಿ ಉಸಿರಾಡುವಷ್ಟರಲ್ಲೇ ಅಧ್ಯಕ್ಷ ಕೆನಡಿ ಹಂತಕನ ಗುಂಡಿಗೆ ಬಲಿಯಾದರು. ಇದರಿಂದ ಇಡೀ ವಿಶ್ವವೇ ಪರಿತಪಿಸಿತು. ಶ್ವೆಯಿಟ್ಸರ್, ಕೆನಡಿಯವರ ಸಾಮಾಜಿಕ ಕಳಕಳಿ ಮತ್ತು ಮಾನವೀಯ ಗುಣಗಳಿಗೆ ಮಾರುಹೋಗಿದ್ದರು. ಕೆನಡಿಯವರ ತಾಯಿಗೆ ಸಾಂತ್ವನ ಪತ್ರ ಬರೆದು ತನ್ನ ಸಂತಾಪ ವ್ಯಕ್ತಪಡಿಸಿದ.

## ೨೩. ಸಂತೃಪ್ತಿ - ಅತೃಪ್ತಿ

ಡಾ॥ ಆಲ್ಬರ್ಟ್ ಶ್ವೆಯಿಟ್ಸರ್, ಪತ್ನಿ ಹೆಲೆನ್ ಜೊತೆ ೧೯೧೩ರ ಈಸ್ಟರ್ ಸಮಯದಲ್ಲಿ ಲ್ಯಾಂಬರೀನೆಗೆ ಬಂದು ಅರ್ಧಶತಮಾನದ ಮೈಲಿಗಲ್ಲು (೧೯೬೩) ತಲ್ಪಿದ್ದಾಯಿತು. ಕೋಳಿ ಗೂಡಿನಂಥ ಕೊಟ್ಟಿಗೆಯಲ್ಲಿ ಶುರುವಾದ ಆಸ್ಪತ್ರೆ ಈ ಐವತ್ತು

ವರ್ಷಗಳಲ್ಲಾದ ಬದಲಾವಣೆಗಳನ್ನು ವೀಕ್ಷಿಸಿದಾಗ ಅದೊಂದು ವಿಸ್ಮಯಕರ ಪವಾಡವೆನಿಸದಿರಲಾರದು. ಈಗಲ್ಲಿ ೭೨ ಕಟ್ಟಡಗಳು ಎದ್ದು ನಿಂತಿವೆ. ಪ್ರತಿದಿನ ೪೫೦-೫೦೦ ಜನ ಸಾಮಾನ್ಯ ಒಳ ರೋಗಿಗಳಿಗೆ ಶುಶ್ರೂಷೆ ಮಾಡುವಷ್ಟು ಸ್ಥಳಾವಕಾಶವಿದೆ. ಇದಲ್ಲದೆ ಸುಮಾರು ೩೦೦ ಕುಷ್ಠ ರೋಗಿಗಳ ಚಿಕಿತ್ಸೆ ಮತ್ತು ಮರುವಸತಿಯ ಪ್ರತ್ಯೇಕ ವಸಾಹತು ನಿರ್ಮಾಣವಾಗಿದೆ. ಪ್ರತಿದಿನ ದೂರದೂರದ ಪ್ರದೇಶಗಳಿಂದ ಬರುವ ಸಾವಿರಾರು ಹೊರ ರೋಗಿಗಳ ಚಿಕಿತ್ಸೆಗೆ ಅವಕಾಶಗಳಿವೆ. ಪ್ರತಿವರ್ಷ ಸುಮಾರು ೩೫೦ ಶಿಶುಗಳು ಅಲ್ಲಿ ಜನಿಸುತ್ತಿವೆ. ಸಾವಿರಕ್ಕೂ ಹೆಚ್ಚು ಶಸ್ತ್ರ ಚಿಕಿತ್ಸೆಗಳು ಜರಗುತ್ತವೆ. ಆಧುನಿಕ ವೈದ್ಯಕೀಯದ ವಿಭಾಗಗಳಲ್ಲಿ ನುರಿತ ವೈದ್ಯರ ತಂಡಗಳಿವೆ. ಸೇವೆಯೇ ತಮ್ಮ ಜೀವನ ಧರ್ಮವೆಂದು ಪರಿಗಣಿಸಿದ ಕರುಣಾಮಯಿ ದಾದಿಗಳ ಸಮೂಹವೇ ಇದೆ. ಸುಸಜ್ಜಿತ ಶಸ್ತ್ರ ಚಿಕಿತ್ಸಾಗಾರ, ಪ್ರಯೋಗಶಾಲೆ, ಎಕ್ಸರೇ ಯಂತ್ರ, ಹೊರ ರೋಗಿಗಳ ವಿಭಾಗ, ಔಷಧಾಗಾರಗಳಿವೆ. ಆಸ್ಪತ್ರೆಯ ವೈದ್ಯರು, ದಾದಿಯರು ಮತ್ತು ಇತರ ಸಿಬ್ಬಂದಿಗಳಿಗೆ ಪ್ರತ್ಯೇಕ ವಸತಿ ನಿರ್ಮಾಣ ವಾಗಿದೆ. ಅವರೆಲ್ಲರ ಉಪಯೋಗಕ್ಕೆ ಬೇಕಾಗುವ ಹಣ್ಣು, ತರಕಾರಿ ಮೊದಲಾದ ಆಹಾರ-ವಸ್ತುಗಳನ್ನು ಬೆಳೆದಿರುವ ತೋಟಗಳೂ ಇವೆ. ಒಟ್ಟಿನಲ್ಲಿ ಹೇಳುವುದಾದರೆ, ಆಫ್ರಿಕಾದ ಅನಾಗರಿಕ ನೀಗ್ರೋಗಳು ಪಡುತ್ತಿರುವ ಬವಣೆಯನ್ನು ನಿವಾರಿಸಲು ಅಂತರಾತ್ಮನ ಕರೆಗೆ ಓಗೊಟ್ಟು, ಅವರಿರುವ ಪೊದೆಗಳ ನಡುವೆ ಸರಳ-ಚಿಕಿತ್ಸಾ-ಸೌಲಭ್ಯ ಒದಗಿಸುವ ಪರಿಮಿತ ಧ್ಯೇಯವನ್ನಿಟ್ಟುಕೊಂಡು ಬಂದ ಆಲ್ಬರ್ಟ್ ಶ್ವೆಯಿಟ್ಸರ್‌ನ ಸಾಧನೆ ಅವನೇ ನಂಬಲಾರದಷ್ಟು ಮಟ್ಟಿಗೆ ಜಯಗಳಿಸಿತ್ತು. ತನ್ನವರೇ ಆದ ನಾಗರಿಕ ಬಿಳಿಯ-ಜನಾಂಗದವರು ಆಫ್ರಿಕಾದ ಮುಗ್ಧರನ್ನು ಗುಲಾಮರನ್ನಾಗಿ ಪರಿವರ್ತಿಸಿ ಮಾಡುತ್ತಿದ್ದ ಶೋಷಣೆಯ ಪಾಪದ ಋಣವನ್ನು ಸ್ವಲ್ಪ ಮಟ್ಟಿಗಾದರೂ ತೀರಿಸುವಲ್ಲಿ ಯಶಸ್ಸುಗಳಿಸಿದ ಸಂತೃಪ್ತಿ ಡಾ॥ ಶ್ವೆಯಿಟ್ಸರ್‌ನಿಗಾದುದರಲ್ಲಿ ಸಂದೇಹವಿಲ್ಲ.

ಐವತ್ತು ವರ್ಷಗಳ ಸತತವಾದ ನಿಸ್ವಾರ್ಥ ವೈದ್ಯಕೀಯ ಸೇವೆ, ಜತೆಗೆ ಆಸ್ಪತ್ರೆ ಕಟ್ಟಡ, ತೋಟಗಳೇ ಅಲ್ಲದೇ ಇಡೀ ವಸಾಹತಿನ ನಿರ್ಮಾಣ ಅವನ ಕನಸಿನ ಕೂಸುಗಳಾಗಿಯೇ ಉದ್ಭವಿಸಿದ್ದು, ಅದಕ್ಕಾಗಿ ವಯಕ್ತಿಕವಾಗಿ ದೈಹಿಕ ಶ್ರಮ ಪಡುತ್ತಿದ್ದನಲ್ಲದೆ ಸಂಪನ್ಮೂಲಗಳ ಶೇಖರಣೆಗಾಗಿ ಸತತ ತಿರುಗಾಟ ಮಾಡುತ್ತಿದ್ದ. ಇಷ್ಟೂ ಸಾಲದೆಂಬಂತೆ ಧಾರ್ಮಿಕ-ವಲಯದಲ್ಲಿ ಪ್ರಕಾಂಡ ಪಾಂಡಿತ್ಯ; ಇತರರ ಧರ್ಮಗಳ ಬಗೆಗೂ ಆಳವಾದ ಅಭ್ಯಾಸ, ಗ್ರಂಥ ರಚನೆ; ಸಂಗೀತ ಶಾಸ್ತ್ರದಲ್ಲಿಯೂ ಮುಂಚೂಣಿಯ ಪಾತ್ರ, ಎಂಭತ್ತೆಂಟು ವರ್ಷಗಳಾದಾಗಲೂ ಮುಖ ಸ್ವಲ್ಪ ಸುಕ್ಕುಗಟ್ಟಿ ತಲೆಕೂದಲೂ ಒರಟಾಗಿದ್ದನ್ನು ಹೊರತುಪಡಿಸಿದರೆ ವೃದ್ಧಾಪ್ಯದ ಇತರ

ಚಿಹ್ನೆಗಳಿರಲಿಲ್ಲ. ಬೆನ್ನು ಬಾಗದ ನೇರ ನಿಲುವು, ನಡಿಗೆ, ಕೊನೆಯ ತನಕ. ಆಸ್ಪತ್ರೆ ವಿಸ್ತಾರಗೊಂಡು ಒಂದು ಹಂತಕ್ಕೆ ಬಂದಿದ್ದು ಅದನ್ನು ನಿಭಾಯಿಸಲು ಸಾಕಷ್ಟು ಸಿಬ್ಬಂದಿಗಳಿದ್ದರೂ, ಅದರ ದೈನಂದಿನ ಚಟುವಟಿಕೆಗಳಲ್ಲೂ ಅವನ ಕೈವಾಡ ಇರಲೇಬೇಕಾಗಿತ್ತು. ಪ್ರತಿಯೊಬ್ಬ ಸಿಬ್ಬಂದಿಯ ಗುಣಾವಗುಣಗಳ ಪರಿಚಯವಿದ್ದು ಯಾರೊಬ್ಬರೂ ಅವನ ದೃಷ್ಟಿಯಿಂದ ತಪ್ಪಿಸಿಕೊಳ್ಳುವುದು ಅಸಾಧ್ಯವಾಗಿತ್ತು. ಕೊನೆಯ ಹಂತದಲ್ಲಿ ಆಸ್ಪತ್ರೆಯ ಚಿಕಿತ್ಸಾ ವಿಧಾನಗಳಲ್ಲಿ ನೇರವಾಗಿ ಭಾಗವಹಿಸಲು ಸಾಧ್ಯವಾಗದಿದ್ದರೂ, ಹೊರರೋಗಿಗಳ ವಿಭಾಗದಲ್ಲಿ ಬಂದು ಕುಳಿತುಕೊಳ್ಳುವುದನ್ನು ಬಿಡುತ್ತಿರಲಿಲ್ಲ. ಕಟ್ಟಡಗಳ ಮೇಲ್ವಿಚಾರಣೆ, ತೋಟದ ಬೆಳೆಗಳ ಉಸ್ತುವಾರಿ ಅವನಿಂದ ಪ್ರತಿದಿನ ನಡೆಯಲೇಬೇಕಾಗಿತ್ತು. ಅವನೆಲ್ಲಿಯಾದರೂ ಅಸ್ವಸ್ಥತೆಯಿಂದ ಆಸ್ಪತ್ರೆಕಡೆ ಸುಳಿಯಲಾಗದಿದ್ದರೆ, ಆ ದಿನ ಸೂರ್ಯೋದಯವೇ ಆಗಲಿಲ್ಲವೇ ಎಂಬ ಆತಂಕ ಎಲ್ಲರಿಗೆ!

**ಕರುಣಾಮಯ ದಾದಿಯರ ತಂಡ**

ಲ್ಯಾಂಬರೀನೆ ಆಸ್ಪತ್ರೆ ವೃದ್ಧಿಯಾಗಿ ಅಲ್ಲಿಯ ಸೇವಾ ಕಾರ್ಯಗಳು ಅತ್ಯುತ್ತಮವಾಗಿ ನಡೆಯಲು ಡಾ॥ ಶ್ವೆಯಿಟ್ಸರ್‌ನ ಮೂಲ ಪ್ರೇರಣೆ ಮತ್ತು ಶ್ರಮ ಪ್ರಮುಖ ಪಾತ್ರ ವಹಿಸುತ್ತದೆಂಬುದರಲ್ಲಿ ಸಂದೇಹವಿಲ್ಲ. ಆದರೆ ಅಲ್ಲಿ ನಡೆಯುತ್ತಿದ್ದ ಕೆಲಸ-ಕಾರ್ಯಗಳೆಲ್ಲಾ ಅವನೊಬ್ಬನಿಂದಲೇ ನಡೆಯುವುದೂ ಅಸಾಧ್ಯವೇ. ಅವನ ಸಹಾಯಕ್ಕಾಗಿ ಸ್ವಪ್ರೇರಣೆಯಿಂದ ಮುಂದೆ ಬಂದ ಕೀರ್ತಿ, ಸೇವಾ ಮನೋಭಾವದಿಂದ ಲ್ಯಾಂಬರೀನೆಗೆ ಧಾವಿಸಿ ಬಂದಿದ್ದ ದಾದಿಯರ ಸಮೂಹಕ್ಕೂ ಸಲ್ಲುತ್ತದೆ.

ಎಳೆಯ ಆಲ್ಬರ್ಟ್ ಶ್ವೆಯಿಟ್ಸರ್‌ನ ವ್ಯಕ್ತಿತ್ವ, ಸೇವಾ-ಮನೋಭಾವ, ವಿದ್ವತ್ತು ಮತ್ತು ಚಟುವಟಿಕೆಗಳಿಗೆ ಮೊಟ್ಟಮೊದಲು ಮಾರುಹೋಗಿ ಅವನ ಯೋಜನೆಗಳಲ್ಲಿ ಸಹಕರಿಸಲು ಮುಂದಾದವಳು ಹೆಲೆನ್ ಬ್ರೂಸ್ಲೂ. ವಿದ್ಯಾರ್ಥಿ ದೆಸೆಯಲ್ಲೇ ಆಲ್ಬರ್ಟ್ ನಡೆಸುತ್ತಿದ್ದ ಸಮಾಜ ಸೇವಾ ಕಾರ್ಯಗಳಲ್ಲಿ ಅವನಿಗೆ ನೆರವಾಗಿದ್ದಳು. ಅವರಿಬ್ಬರಲ್ಲಿ ಅನುರಾಗ ಉಂಟಾಗಿ ಸತಿ ಪತಿಗಳಾಗುವ ನಿರ್ಧಾರವಾಗಿದ್ದರೂ ಶ್ವೆಯಿಟ್ಸರ್ ಹಠಾತ್ತನೆ ತನ್ನ ಜೀವನದ ಗುರಿಯನ್ನು ಬದಲಾಯಿಸಿದಾಗಲೂ ಆಕೆ ಆತನನ್ನು ಕೈ ಬಿಡಲಿಲ್ಲ. ವಿಶ್ವವಿದ್ಯಾಲಯದ ಪ್ರಾಧ್ಯಾಪಕರೊಬ್ಬರ ಪುತ್ರಿಯಾಗಿದ್ದ ಅವಳಿಗೆ ಯುರೋಪಿನಲ್ಲಿ ಸುಖ ಸಂಪತ್ತಿನ ಜೀವನ ನಡೆಸುವ ಅವಕಾಶಗಳಿದ್ದವು. ಆದರೂ ತಾನು ಮೆಚ್ಚಿ ಒಲಿದ ಆಲ್ಬರ್ಟ್ ಸಹಾ ಸುಖ ಜೀವನದ ಮಾರ್ಗಗಳನ್ನು ತ್ಯಾಗಮಾಡಿ ಗೊಂಡಾರಣ್ಯದ ಅನಾಗರಿಕರ ಸೇವೆಗಾಗಿ ಕಾಡಿಗೆ ಹೊರಟಾಗ ಶ್ರೀರಾಮಚಂದ್ರನನ್ನು ಹಿಂಬಾಲಿಸಿದ ಸೀತೆಯಂತೆ ಅವಳೂ ತಯಾರಾದಳು.

ಆಲ್ಬರ್ಟ್ ವೈದ್ಯ-ತರಬೇತಿಯನ್ನು ಪಡೆದರೆ, ಅವಳು ದಾದಿಯಾಗಿ ತಯಾರಾದಳು. ದುರ್ಗಮ ಆಫ್ರಿಕಾದ ಕಾಡಿನಲ್ಲಿ ಪತಿಯ ನೆರಳಂತೆ ಜೀವನ ನಡೆಸಿ ಯುದ್ಧ ಕೈದಿಯಾಗಿ ಪಡಬಾರದ ಕಷ್ಟನಷ್ಟಗಳನ್ನು ಅನುಭವಿಸಿದಳು. ಈ ಸಮಯದಲ್ಲೇ ಅವಳ ಬೆನ್ನು ಹತ್ತಿದ ಕ್ಷಯರೋಗ ಜೀವಮಾನವೆಲ್ಲಾ ಅಸ್ವಸ್ಥಗೊಳಿಸಿ, ಕೊನೆಗೂ ಅದಕ್ಕೇ ಬಲಿಯಾದ ದುರಂತ ಕತೆ ಅವಳದು. ಅಸ್ವಸ್ಥತೆಯಿಂದ ಬಳಲುತ್ತಿದ್ದರೂ ಆಗಾಗ್ಗೆ ಲ್ಯಾಂಬರೀನೆಗೆ ಬಂದು ಪತಿಯ ಜೊತೆ ಆಸ್ಪತ್ರೆಯಲ್ಲಿ ಸೇವೆ ಮಾಡುವ ಸ್ವಾಭಿಮಾನಿ. ಜೀವನದ ಸಂಜೆಯಲ್ಲಿ ಸತಿಪತಿಗಳಿಬ್ಬರ ನಡುವೆ ವಿರಸ ಉಂಟಾಗಿದ್ದರ ಕುರುಹುಗಳು ಕಂಡುಬಂದರೂ ಅದೆಂದೂ ವಿಕೋಪಕ್ಕೆ ಹೋಗಿದ್ದಿಲ್ಲ. ಡಾ॥ ಶ್ವೈಯಿಟ್ಸರ್ ಮುಳುಗಿ ಹೋಗಿದ್ದ ಎಡಬಿಡದ ಸೇವಾ ಕಾರ್ಯಕ್ರಮಗಳ ನಡುವೆಯೂ ತ್ಯಾಗಮಯಿಯಾದ ಹೆಂಡತಿಗೆ ಸಹಾನುಭೂತಿಯಿಂದ ಶುಶ್ರೂಷೆ ಮಾಡುತ್ತಿದ್ದ. ನಿಸ್ವಾರ್ಥ ಸೇವೆಗಾಗಿ ಪಣತೊಟ್ಟಿದ್ದ ಹೆಲೆನ್ ಅದಕ್ಕೇ ಬಲಿಯಾದದ್ದು ಲ್ಯಾಂಬರೀನೆಯ ದುರಂತವೇ ಸರಿ.

ಶ್ವೈಯಿಟ್ಸರ್‌ನ ತ್ಯಾಗಮಯ ನಿಸ್ವಾರ್ಥ ಸೇವೆಗೆ ಮನಸೋತು ಲಾಂಬರೀನೆಯ ಆಸ್ಪತ್ರೆಯಲ್ಲಿ ಸೇವೆ ಸಲ್ಲಿಸಲು ಬಂದವರಲ್ಲಿ ಆಲ್‌ಸೇಶ್‌ನ ದಾದಿ ಎಮ್ಮಾ ಹುಸ್ಕನಟ್ ಮೊದಲನೆಯವಳು. ಸುಮಾರು ಮೂರು ದಶಕಗಳ ಕಾಲ ಶ್ವೈಯಿಟ್ಸರ್‌ನ ಬಲಗೈಯಂತೆ ಕೆಲಸ ಮಾಡಿ ಕೀರ್ತಿಶೇಷಳಾದಳು.

ಲ್ಯಾಂಬರೀನೆಯಲ್ಲಿ ಡಾ॥ ಶ್ವೈಯಿಟ್ಸರ್ ಹೆಚ್ಚು ಕಡಿಮೆ ಆಸ್ಪತ್ರೆಯನ್ನು ಆರಂಭಿಸಿದಾಗಿನಿಂದಲೂ ಅಲ್ಲಿದ್ದ ಇನ್ನೊಬ್ಬ ಹೆಸರಾಂತ ದಾದಿ ಮಥಿಲ್ಡ ಕೊಟ್ಟಮನ್. ಆಲ್‌ಸೇಶ್ ಪ್ರಾಂತದವಳೇ ಆದ ಮಥಿಲ್ಡ ಸಹ ಮೂರು ದಶಕಗಳಷ್ಟು ದೀರ್ಘಕಾಲ ಲ್ಯಾಂಬರೀನೆಯಲ್ಲಿ ಸೇವೆ ಸಲ್ಲಿಸಿದವಳು. ಸೌಂದರ್ಯದ ರಾಣಿಯಂತಿದ್ದ ಆಕೆ ಸುಖಕರ ಜೀವನದ ಮಾರ್ಗವನ್ನು ತ್ಯಜಿಸಿ ಗೊಂಡಾರಣ್ಯದಲ್ಲಿ ನೀಗ್ರೋಗಳ ಸೇವೆಗೆ ಟೊಂಕಕಟ್ಟಿ ದುಡಿದಳು.

ಮಿಸ್ ಆಲಿ ಸಿಲ್ವರ್ ಹಾಲೆಂಡ್ ದೇಶದವಳು, ಲ್ಯಾಂಬರೀನೆಯಲ್ಲಿ ಹದಿನಾರು ವರ್ಷ ಸೇವೆ ಸಲ್ಲಿಸಿದಳು. ಅಲ್ಲಿನ ಕೆಲಸ ಕಾರ್ಯಗಳಲ್ಲಿ ಅವಳದೇ ಮೇಲುಗೈ. ಚೆನ್ನಾಗಿ ಇಂಗ್ಲಿಷ್ ಭಾಷೆಯಲ್ಲಿ ಮಾತಾಡುತ್ತಿದ್ದಳಾದ್ದರಿಂದ ಹೊರಗಿನ ಸಂಪರ್ಕದ ಪತ್ರವ್ಯವಹಾರಗಳು ಅವಳದ್ದೇ. ಪ್ರತಿದಿನ ರೋಗಿಗಳ ಶುಶ್ರೂಷೆಯೇ ಅಲ್ಲದೇ ವಯಸ್ಸಾಗುತ್ತಿದ್ದ ಅವರ ಆರಾಧ್ಯ ದೇವರೆನಿಸಿದ ಡಾ॥ ಶ್ವೈಯಿಟ್ಸರ್ ಯೋಗಕ್ಷೇಮದ ಜವಾಬ್ದಾರಿ ಹೊತ್ತವರೆಂದರೆ ಆಲಿ ಸಿಲ್ವರ್ ಮತ್ತು ಮಥಿಲ್ಡ ಕೊಟ್ಟಮನ್, ಅವನ ನಿಷ್ಠಾವಂತ ಸೇವಕರಂತೆ ಕೆಲಸ ಮಾಡುತ್ತಿದ್ದ ಅವರನ್ನು ಆಸ್ಪತ್ರೆಯ ಆಧಾರ ಸ್ಥಂಭಗಳೆನ್ನಲಾಗುತ್ತಿತ್ತು. ಲ್ಯಾಂಬರೀನೆಯ ಆಸ್ಪತ್ರೆ ಮತ್ತು ಡಾ॥ ಶ್ವೈಯಿಟ್ಸರ್‌ನ ಕೀರ್ತಿ ಜಗದಾದ್ಯಂತ ಹರಡಿದಂತೆಲ್ಲಾ ಅಲ್ಲಿಗೆ ಸ್ವ ಪ್ರೇರಿತರಾಗಿ ಬಂದು ಕೆಲಸ ಮಾಡುವವರ

ಸಂಖ್ಯೆ, ಅಲ್ಲಿನ ಅವಶ್ಯಕತೆಗಿಂತಲೂ ಒಂದೊಂದು ಸಾರಿ ಮಿಗಿಲಾಗುತ್ತಿತ್ತು. ಜೀನ್ ಆಂಡರ್‌ಸನ್, ಆಲ್ಬರ್ಟಿನಾ ವಾನ್‌ಬೆಶ್, ವೆಲೆನ್ ಹೋವೆನ್, ಟ್ರೂಡಿ ಬ್ರೂಸ್ಲೂರ್, ಓರಿ ಡೆಟರ್‌ಡಿಂಗ್ - ಹೀಗೆ ಒಂದು ದಾದಿಯರ ಸೇನೆ ಅಲ್ಲಿ ನೆರೆದಿತ್ತು. ಅವರೆಲ್ಲಾ ದಾದಿ ವೃತ್ತಿಯಲ್ಲಿನ ಅತ್ಯಂತ ಶ್ರೇಷ್ಠ ಕುಸುಮಗಳು. ಕರುಣಾಳು ಫ್ಲಾರೆನ್ಸ್ ನೈಟಿಂಗೇಲ್‌ಳ ಅರ್ಹ ಪ್ರತಿನಿಧಿಗಳು. ಯುರೋಪಿನ ಹೆಸರಾಂತ, ಶ್ರೀಮಂತ ಕುಟುಂಬಗಳಿಗೆ ಸೇರಿದವರು ಕೆಲವರಾದರೆ ಮತ್ತೆ ಕೆಲವರು ಸೌಂದರ್ಯ ರಾಣಿಯರು. ಪ್ರತಿಯೊಬ್ಬರಲ್ಲೂ ವಿಶಿಷ್ಠ ಗುಣವಿಶೇಷಗಳು, ಭಾವನೆಗಳು, ವಿಚಾರ ಲಹರಿಗಳು. ಅವರೆಲ್ಲಾ ಒಟ್ಟುಗೂಡಿದರೆ ಅದೊಂದು ಅಪೂರ್ವ ಶಕ್ತಿಯ ನೆಲೆ. ತಮಗಿಂತ ಕೆಳಸ್ತರದ ದೀನ ದಲಿತರಿಗೆ ಅಂಟಿದ ಅಸಹ್ಯಕರ ರೋಗ-ರುಜಿನಗಳ ಶುಶ್ರೂಷೆಗೆ ಅವರೆಂದೂ ಅಂಜಲಿಲ್ಲ, ಅಳುಕಲಿಲ್ಲ. ರಾತ್ರಿ ಹಗಲೂ ಅರಣ್ಯದಲ್ಲಿ ಹರಡಿಕೊಂಡಿದ್ದ ಗುಡಿಸಲುಗಳ ನಡುವೆ, ಒಬ್ಬೊಬ್ಬರೆ ಧೈರ್ಯದಿಂದ ಓಡಾಡಿ ಕೆಲಸ ನಿರ್ವಹಿಸುತ್ತಿದ್ದರು. ಶಿಸ್ತಿನ ಸಿಪಾಯಿಗಳಾಗಿದ್ದುಕೊಂಡು, ಜೀವನದ ಹಲವಾರು ಅವಶ್ಯಕತೆಗಳನ್ನು ತ್ಯಜಿಸಿ, ಮಾನಸಿಕ ಉನ್ಮಾದಗಳನ್ನು ಹಿಡಿತದಲ್ಲಿಟ್ಟುಕೊಂಡು ಶ್ವೈಯಿಟ್ಸರ್‌ನ ಭಕ್ತರಾಗಿ ಕಾರ್ಯೋನ್ಮುಖರಾದವರು. ಆ ಕಾಲದಲ್ಲಿ ಪವಿತ್ರ-ಜೀವನವನ್ನು ನಡೆಸುತ್ತಿದ್ದ ಆಲ್ಬರ್ಟ್ ಶ್ವೈಯಿಟ್ಸರ್‌ನಂಥ ಮಹಾತ್ಮನ ಜತೆ ಕೆಲಸ ಮಾಡುವ ಸೌಭಾಗ್ಯದ ಅವಕಾಶವೊಂದೇ ಆ ಕಾಡಿನ ನಡುವೆ ಕಷ್ಟಕರ ಜೀವನ ನಡೆಸುವುದಕ್ಕೆ ಅವರಿಗೆ ದೊರೆಯುತ್ತಿದ್ದ ತೃಪ್ತಿ.

ವೃತ್ತಿಯಲ್ಲಿ ದಾದಿಯರಾಗಿ ಲ್ಯಾಂಬರೀನೆಗೆ ಬಂದು ಸೇವೆ ಸಲ್ಲಿಸುತ್ತಿದ್ದವರೇ ಅಲ್ಲದೆ ಹೊರಗಿನಿಂದಲೇ ಡಾ॥ ಶ್ವೈಯಿಟ್ಸರ್‌ನ ಪವಿತ್ರ ಕೆಲಸಕ್ಕೆ ಹಲವು ವಿಧಗಳಿಂದ ನೆರವಾಗುತ್ತಿದ್ದ ಮಹಿಳೆಯರ ತಂಡವೂ ಇತ್ತು. ಲ್ಯಾಂಬರೀನೆ ಮತ್ತು ಶ್ವೈಯಿಟ್ಸರ್ ಬಗೆಗೆ ಪ್ರಚಾರ, ಔಷಧ, ಆಹಾರ ವಸ್ತುಗಳು ಮತ್ತು ಹಣ-ಸಹಾಯವನ್ನು ಒದಗಿಸುವುದು ಅವರ ಕೆಲಸ.

ದಿವಂಗತ ಶ್ರೀಮತಿ ಸಿ. ಇ. ಬಿ. ರಸೆಲ್ ಎರಡನೇ ಮಹಾಯುದ್ಧದ ಸಮಯದಲ್ಲಿ ತನ್ನ ಶಕ್ತಿ ಮೀರಿ ಪ್ರಚಾರ ನಡೆಸಿ, ಲ್ಯಾಂಬರೀನೆಗೆ ಔಷಧ ಸಾಮಗ್ರಿಗಳನ್ನು ಸರಬರಾಜು ಮಾಡಿಸುತ್ತಿದ್ದಳು. ಶ್ವೈಯಿಟ್ಸರ್‌ನ ಗ್ರಂಥಗಳ ಭಾಷಾಂತರ, ಅವನ ಪ್ರಯಾಣದ ಸಮಯದಲ್ಲಿ ಭಾಷಣಗಳ ಭಾಷಾಂತರ ಮಾಡುವುದು ಅವಳ ಜವಾಬ್ದಾರಿಯಾಗುತ್ತಿತ್ತು. ಲ್ಯಾಂಬರೀನೆಯೇ ಅಲ್ಲದೆ, ಇತರ ಕಡೆಗಳಲ್ಲಿದ್ದ ಕಾಡಿನ ಆಸ್ಪತ್ರೆಗಳಿಗೂ ಭೇಟಿಯಿತ್ತು. ಅಲ್ಲಿಯ ಸಿಬ್ಬಂದಿಗಳಿಗೂ ಸ್ಫೂರ್ತಿ ನೀಡುತ್ತಿದ್ದಳು.

ಶ್ರೀಮತಿ ರಸೆಲ್ ಗತಿಸಿದ ಮೇಲೆ ದಕ್ಷಿಣ-ಆಫ್ರಿಕಾದ ಶ್ರೀಮಂತ ಮಹಿಳೆ ಕ್ಲಾರಾ

ಉರ್ಕ್ಹಾಟ್ ಅವಳ ಜವಾಬ್ದಾರಿಯನ್ನು ವಹಿಸಿಕೊಂಡಳು. ಉಕ್ಕಿನ ಕೈಗಾರಿಕೋದ್ಯಮಿಯೊಬ್ಬನ ಉತ್ತರಾಧಿಕಾರಿಣಿಯಾದ ಕ್ಲಾರಾ ಲಂಡನ್ನಿನಲ್ಲೇ ವಾಸ ಮಾಡುತ್ತಿದ್ದಳು. ಶ್ವೈಟ್ಸರ್ ಸೇವೆಯೇ ತನ್ನ ಜೀವನದ ಧ್ಯೇಯವೆಂದು ಪರಿಗಣಿಸಿದ್ದಳು. ಡಾ|| ಶ್ವೈಟ್ಸರ್ ಮತ್ತು ಅವನ ತತ್ವಗಳ ಪ್ರಚಾರ, ಅವನ ಗ್ರಂಥಗಳ ಪ್ರಕಟಣಾ ಕಾರ್ಯಗಳ ಜವಾಬ್ದಾರಿ ಅವಳದಾಗಿತ್ತು. ಪರಮಾಣು ಬಾಂಬಿನ ಬಗೆಗೆ ಶ್ವೈಟ್ಸರ್‌ನ ಅಭಿಪ್ರಾಯಗಳನ್ನು ಆಕೆಗಿಂತ ಇನ್ನಾರೂ ಚೆನ್ನಾಗಿ ಪ್ರತಿಪಾದಿಸಲಾರರು. ಶ್ವೈಟ್ಸರ್‌ನ ಸಮ್ಮುಖದಲ್ಲಿದ್ದಾಗ ಮಾತ್ರ ತನಗೆ ಸಂಪೂರ್ಣ ಶಾಂತಿಯು ದೊರಕುತ್ತಿತ್ತೆಂದು ಅವಳೇ ಹೇಳುತ್ತಿದ್ದಳು.

ಎರಿಕಾ ಆಂಡರ್‌ಸನ್ ಶ್ವೈಟ್ಸರ್ ಬಗೆಗೆ ಹಲವಾರು ಪುಸ್ತಕಗಳನ್ನು ಬರೆದಿದ್ದಳು. ತನ್ನ ಜೀವನದ ಬಗೆಗೆ ಚಲನಚಿತ್ರ ತೆಗೆಯಲು ಎಂದಿಗೂ ಒಪ್ಪಿಗೆ ನೀಡಲಾರೆನೆಂದು ಶಪಥ ಮಾಡಿದ ಶ್ವೈಟ್ಸರ್‌ನ ಮನವೊಲಿಸಿ ಹಲವಾರು ವರ್ಷ ಶ್ರಮವಹಿಸಿ ಚಲನಚಿತ್ರ ನಿರ್ಮಾಣ ಮಾಡುವುದರಲ್ಲಿ ಛಲ ಬಿಡದ ವಿಕ್ರಮನಂಥ ಮಹಿಳೆ. ಅದೊಂದು ಅತ್ಯಂತ ಶ್ರೇಷ್ಠ ಚಿತ್ರವಾಗಿ ಅಮೆರಿಕಾದ ಅಕಾಡೆಮಿ ಅವಾರ್ಡ್ ಸಹಾ ದೊರಕಿತ್ತು. ಶ್ವೈಟ್ಸರ್‌ನ ಸೇವಯನ್ನು ಪವಿತ್ರವೆಂದು ಗ್ರಹಿಸಿದ ಎರಿಕಾ ಯುರೋಪಿನಲ್ಲಿ ಅವನ ತಿರುಗಾಟಕ್ಕೆ ಅವಳದ್ದೇ ಕಾರು ತರುತ್ತಿದ್ದುದಲ್ಲದೇ ಸಾರಥ್ಯವನ್ನೂ ಅವಳೇ ಮಾಡುತ್ತಿದ್ದಳು.

ಶ್ರೀಮತಿ ಮೇರಿಯಾನ್ ಮಿಲ್ ಪ್ರಿಮಿಂಜರ್ (ಚಲನಚಿತ್ರ ನಿರ್ಮಾಪಕನ ಪತ್ನಿ) ಶ್ವೈಟ್ಸರ್‌ನ ಪ್ರತಿವರ್ಷದ ಹುಟ್ಟುಹಬ್ಬದ ಸಮಾರಂಭದಲ್ಲಿ ಲ್ಯಾಂಬರೀನೆಯಲ್ಲಿ ಹಾಜರು. ಅಲ್ಲಿಯ ರೋಗಿಗಳಿಗೆ ಬಟ್ಟೆ ಬರೆ ಮತ್ತಿತರ ಉಡುಗೊರೆಗಳನ್ನು ಕೊಂಡು ಹೋಗಿ ಹಂಚಿ ಆನಂದಪಡುತ್ತಿದ್ದಳು. ಅಮೆರಿಕಾಕ್ಕೆ ಹಿಂದಿರುಗಿದ ನಂತರ ಮತ್ತೆ ಲ್ಯಾಂಬರೀನೆಯ ಬಗೆಗೆ ಪ್ರಚಾರ, ಹಣ ಸಂಗ್ರಹ ಕಾರ್ಯದಲ್ಲಿ ನಿರತಳಾಗುತ್ತಿದ್ದಳು.

ಡಾ|| ಶ್ವೈಟ್ಸರ್‌ನ ಸಹಾಯಕರಲ್ಲಿ ಅವನ ಮಗಳು ರೆನ್ನಾ ತುಂಬ ತಡವಾಗಿ ಕಣಕ್ಕಿಳಿದವಳು. ಜನಿಸಿದಾರಭ್ಯ ತಂದೆಯಿಂದ ಬೇರೆಯಾದ ತಬ್ಬಲಿಯಂತೆ ಬೆಳೆದವಳು. ನಂತರ ತನ್ನ ಸಂಸಾರದ ನಿರ್ವಹಣೆಯ ಭಾರದಿಂದ ಹೆಚ್ಚು ಸಮಯ ತಂದೆಯ ಸೇವೆ ಮಾಡಲಾಗಲಿಲ್ಲ. ಮುಂದೆ ತಾಯಿ ಗತಿಸಿ, ಅವಳ ಸಂಸಾರವು ಒಡೆದ ಮೇಲೆ ತಂದೆಯ ಜೊತೆಯೇ ಕಾಲಹಾಕುವ ನಿರ್ಧಾರಮಾಡಿ ಲ್ಯಾಂಬರೀನೆಗೆ ಬಂದಳು. ತಂದೆಗೆ ಅವಳನ್ನು ತನ್ನ ಅಡಿಯಾಳಾಗಿ ಕೆಲಸಮಾಡಿಸಲು ಇಷ್ಟವಿಲ್ಲವೆಂದಾಗಲೂ ಹಠ ಹಿಡಿದು ಪ್ರಯೋಗ ಶಾಲಾ ಪರೀಕ್ಷೆಗಳಲ್ಲಿ ಪರಿಣತಿ ಪಡೆದು ಅಲ್ಲೇ ನೆಲಸಿದಳು. ಶ್ವೈಟ್ಸರ್‌ನ ಎಲ್ಲಾ ಗುಣಗಳು - ದಯಾಪರತೆ ಕಷ್ಟಸಹಿಷ್ಣುತೆ

ಮತ್ತು ತ್ಯಾಗಮಯ ಜೀವನ ಅವಳಲ್ಲಿ ಮೈದೋರಿದ್ದರಲ್ಲಿ ಆಶ್ಚರ್ಯವಿಲ್ಲ. ಮುಂದೆ ತಂದೆ ಗತಿಸಿದ ನಂತರ ಆಸ್ಪತ್ರೆಯ ಉತ್ತರಾಧಿಕಾರಿಣಿಯಾದಳು. ತಂದೆ ತೋರಿಸಿ ಕೊಟ್ಟ ಹಾದಿಯಲ್ಲೇ ನಡೆದು ಆಸ್ಪತ್ರೆಯ ಜ್ಯೋತಿ ಸದಾ ಉರಿಯುತ್ತಿರುವಂತೆ ನೋಡಿಕೊಳ್ಳುತ್ತಿದ್ದಳು.

ಡಾ॥ ಶ್ವೈಯಿಟ್ಸರ್‌ಗೆ ತನ್ನ ಸಿಬ್ಬಂದಿ-ವರ್ಗದವರ ಮೇಲೆ ಎಲ್ಲಿಲ್ಲದ ಅಭಿಮಾನ. ಅವರೆಲ್ಲರನ್ನೂ ಪ್ರೀತಿ ವಿಶ್ವಾಸದಿಂದ ನೋಡಿಕೊಳ್ಳುತ್ತಿದ್ದನು. ಕೆಲ ಸಾರಿ ಕೆಲವರ ವರ್ತನೆ ಸರಿಯಿಲ್ಲವೆಂದು ಕಂಡುಬಂದಾಗ ಅಥವಾ ಕೆಲಸ ಅವನ ಇಚ್ಛೆಗನು ಗುಣವಾಗಿ ನಡೆಯದಿದ್ದಾಗ ಸಿಟ್ಟಿನಿಂದ ಸಿಡಿಮಿಡಿಗೊಳ್ಳುತ್ತಿದ್ದುದೂ ಉಂಟು, ಅದು ಸ್ವಂತ ಮಕ್ಕಳು ಅಡ್ಡದಾರಿ ಹಿಡಿದಾಗ ಸರಿಪಡಿಸಲು ತಂದೆಯಾದವನು ಕ್ರಮ ತೆಗೆದುಕೊಳ್ಳುವ ಹಾಗೆ. ಅವರೆಲ್ಲಾ ತ್ಯಾಗಮಾಡಿ ಮನಃ ಪೂರ್ವಕವಾಗಿ ಸಮರ್ಪಣಾ ಭಾವದಿಂದ ಲ್ಯಾಂಬರೀನೆಯಲ್ಲಿ ಸೇವೆ ಮಾಡದಿದ್ದಲ್ಲಿ ಡಾ॥ ಶ್ವೈಯಿಟ್ಸರ್ ಎಷ್ಟೇ ಉದಾತ್ತ ಆದರ್ಶಗಳನ್ನು ಹೊತ್ತು ಬಂದಿದ್ದರೂ ಯಶಸ್ಸು ದೊರೆಯುತ್ತಿತ್ತು ಎನ್ನಲಾಗುವುದಿಲ್ಲ. ಅವರಿಗೆಲ್ಲಾ ಅವನು ತುಂಬಾ ಕೃತಜ್ಞ. ಆದರೆ ಆ ರೀತಿ ಯಾರಿಗೂ ಬಹಿರಂಗವಾಗಿ ಹೇಳಲಾರದಷ್ಟು ಮುಜಗರ; ನಾಚಿಕೆ ಸ್ವಭಾವ ಮೊದಲಿನಿಂದಲೂ ಅವನಲ್ಲಿ ಬೆಳೆದು ಬಂದಿತ್ತು. ತನಗೆ ಉಪಕಾರ ಮಾಡಿದವರಿಗೆ ಕೃತಜ್ಞತೆಯನ್ನು ತೋರಿಸುವ ಬಗೆಗೆ ಅವನೇ ಹೇಳಿದ್ದು:

''ನನ್ನ ಜೀವನವನ್ನು ಹಿಂದಿರುಗಿ ನೋಡಿದಾಗ, ನನಗೆ ಸಹಾಯ ಮಾಡಿದವರ ಸಂಖ್ಯೆ ಅಪಾರ. ನನ್ನನ್ನು ನೋಡಿಕೊಂಡ ರೀತಿ ಮತ್ತು ಸಹಾಯ ಮಾಡಿದ್ದಕ್ಕೆ ಅವರಿಗೆಲ್ಲಾ ನಾನು ಚಿರಋಣಿ. ಅವರೆಲ್ಲರಿಗೂ ನಾನು ಯಾವ ಉಪಕಾರವನ್ನೆಸಗ ಲಾಗದಿದ್ದುದಕ್ಕೆ ನನ್ನ ಆತ್ಮ ಮಿಡಿಯುತ್ತದೆ, ಅವರಲ್ಲೆಷ್ಟೋ ಮಂದಿ ಈಗಾಗಲೇ ಗತಿಸಿದ್ದಾರೆ. ಅವರಿಗೆಲ್ಲಾ ವಂದಿಸಿ, ಕೃತಜ್ಞತೆ ಸಲ್ಲಿಸದಿದ್ದುದಕ್ಕೆ ನನಗೇ ನಾಚಿಕೆ ಯಾಗುತ್ತಿದೆ. ಆದರೆ, ನಾನು ಅವರಿಗೆಲ್ಲಾ ಕೃತಘ್ನನೆಂದರ್ಥವಲ್ಲ, ನನ್ನ ಹೃದಯಾಂತರಾಳದಲ್ಲಿ ಕೃತಜ್ಞತಾ ಭಾವನೆಯಿದ್ದು, ವಂದನೆ ಸಲ್ಲಿಸಲಾಗದಿದ್ದುದಕ್ಕೆ ವ್ಯಥೆಯಾಗುತ್ತದೆ. ನನ್ನ ಅನುಭವದಿಂದ ಪ್ರಪಂಚವೆಲ್ಲಾ ಕೃತಘ್ನರಿಂದ ಕೂಡಿದೆ ಎಂದು ಹೇಳಲಾರೆ. ಬೈಬಲ್ಲಿನ ನೀತಿಕತೆಯಲ್ಲಿರುವ ಹತ್ತೂ ಜನ ಕುಷ್ಠರೋಗಿಗಳಲ್ಲಿ ಒಬ್ಬನೇ ಕೃತಜ್ಞನೆಂದು ನಾನು ಭಾವಿಸಿಲ್ಲ. ಭಗವಾನ್ ಏಸುವಿನ ಚಿಕಿತ್ಸೆಯಿಂದ ಗುಣಹೊಂದಿದ ಹತ್ತು ಜನ ಕುಷ್ಠರೋಗಿಗಳೂ ಅವನಿಗೆ ಕೃತಜ್ಞರಾಗಿಯೇ ಇದ್ದರು. ಒಂಭತ್ತು ಜನ ಕೂಡಲೇ ತಮ್ಮ ಮನೆಗಳಿಗೆ ಹೋಗಿ ಬಂಧು ಮಿತ್ರರನ್ನು ನೋಡಿ, ಕೆಲಸ ಕಾರ್ಯಗಳನ್ನು ಮುಗಿಸಿದ ನಂತರ ಏಸುವನ್ನು ಆದಷ್ಟು ಜಾಗ್ರತೆ ಕಂಡು ಕೃತಜ್ಞತೆ ಸಲ್ಲಿಸಬೇಕೆಂದಿದ್ದರು. ಮನೆಯಲ್ಲಿ ಅವರು ಯೋಚಿಸಿದ್ದಕ್ಕಿಂತ ಹೆಚ್ಚು ಕಾಲ

ಹಿಡಿಯಿತು. ಅವರು ಏಸುವನ್ನು ಮತ್ತೆ ಹುಡುಕಿಕೊಂಡು ಬರುವಷ್ಟರಲ್ಲಿ ಅವನನ್ನು ಶಿಲುಬೆಗೇರಿಸಿದ್ದಾಗಿತ್ತು. ಆದರೆ ಒಬ್ಬನು ಮಾತ್ರ ತಕ್ಷಣ ಏಸುವಿಗೆ ವಂದನೆ ಸಲ್ಲಿಸಿ ಮುಕ್ತಿ ಪಡೆದನು.

''ಇದರಿಂದ ನಮಗೆ ಸಹಾಯ ಮಾಡಿದವರಿಗೆ ತತ್‌ಕ್ಷಣ ನಮ್ಮ ಗೌರವ, ಕೃತಜ್ಞತೆ ತೋರಿಸಬೇಕೆಂಬುದರ ಅರಿವಾಗುತ್ತದೆ; ಪ್ರಪಂಚದಲ್ಲಿ ಸೂರ್ಯ ಪ್ರಕಾಶ ಹೆಚ್ಚಿದಂತಾಗುತ್ತದೆ; ಒಳ್ಳೆಯ ಕೆಲಸ ಮಾಡುವವರಿಗೆ ಹೆಚ್ಚು ಶಕ್ತಿ ಬಂದಂತಾಗುತ್ತದೆ. ನಮ್ಮ ಸ್ವಂತ ವಿಷಯದಲ್ಲಿ ಮಾತ್ರ ಇಂತಹ ಭಾವನೆಯನ್ನು ಇತರರಿಂದ ಅಪೇಕ್ಷಿಸುವುದು ಸರಿಯಲ್ಲ. ಹಾಗೆ ಮಾಡದಿದ್ದವರಿಗೆ ನಾವು ಕೃತಘ್ನರೆಂದು ಪರಿಗಣಿಸುವುದು ಸರಿಯಲ್ಲ.

''ಭೂಗರ್ಭದಲ್ಲಿ ಹರಿಯುವ ನೀರೇ ಮೇಲೆ ಬುಗ್ಗೆಯಾಗಿ ಬಂದಿದ್ದನ್ನು ನೋಡಿದಾಗ ನಮಗೆ ಸಂತೋಷವಾಗುವುದು ಸಹಜವೇ. ನಾವೂ ಹಾಗೆ ಭೂಮಿಯೊಳಗಡೆಯಿಂದ ಬುಗ್ಗೆಯಾಗಿ ಬಂದು ಇತರರ ಬಾಯಾರಿಕೆಯನ್ನು ಹೋಗಲಾಡಿಸುವಂತಾಗಬೇಕು''

ಹೀಗೆ ಡಾ॥ ಶ್ವೈಟ್ಸರ್, ಆಸ್ಪತ್ರೆ, ಮತ್ತು ಸಿಬ್ಬಂದಿ ವರ್ಗದವರೆಲ್ಲಾ ಅರ್ಧ ಶತಮಾನ ಶ್ರಮವಹಿಸಿ, ಇಡೀ ಪ್ರಪಂಚದ ಗಮನ ಸೆಳೆದು ಸಂತೃಪ್ತಿಯನ್ನು ಪಡೆದಿದ್ದರು. ಆದರೂ ಇವರೆಲ್ಲರ ಕಾರ್ಯಕಲಾಪಗಳು ಮತ್ತೂ ಆಸ್ಪತ್ರೆಯ ಸ್ಥಿತಿಗತಿಗಳನ್ನು ಉಗ್ರವಾಗಿ ಟೀಕಿಸಿದವರೂ ಇಲ್ಲದಿರಲಿಲ್ಲ.

ಆಸ್ಪತ್ರೆ ದೊಡ್ಡದಾಗಿ ಬೆಳೆದು, ರೋಗಿಗಳ ಸಂಖ್ಯೆ ಹೆಚ್ಚಾಗಿ, ಸಿಬ್ಬಂದಿಗಳೂ ಹೆಚ್ಚಿದರು. ಡಾ॥ ಶ್ವೈಟ್ಸರ್‌ಗೂ ವಯಸ್ಸಾಗುತ್ತಾ ಬಂದಂತೆಲ್ಲಾ ಅದರ ಆಡಳಿತ ಮತ್ತು ಕಾರ್ಯಕಲಾಪಗಳಲ್ಲಿ ಸಡಿಲತೆ ಉಂಟಾಗುತ್ತಿದ್ದುದು ಸ್ವಾಭಾವಿಕವೇ. ಮಗಳು ರೆನ್ನಾ ಅಲ್ಲಿಗೆ ಬಂದು ನೆಲಸಿ ಆಡಳಿತದಲ್ಲಿ ಸುಧಾರಣೆ ತರಲು ಪ್ರಯತ್ನಿಸುತ್ತಿದ್ದರೂ, ಶ್ವೈಟ್ಸರ್‌ನ ಹಳೇ ಕಂದಾಚಾರದ ಮೌಲ್ಯಗಳನ್ನು ಬದಲಾಯಿಸಲು ಆಕೆಗೆ ಕಷ್ಟವಾಗುತ್ತಿತ್ತು. ವೈದ್ಯಕೀಯ ವಿಜ್ಞಾನ ಮತ್ತು ಆಸ್ಪತ್ರೆಗಳ ನಿರ್ವಹಣೆಯ ಕ್ರಮಗಳಲ್ಲಿ ಪ್ರಪಂಚದಾದ್ಯಂತ ಅಗಾಧ ಬದಲಾವಣೆ ಆಗಿದ್ದರೂ ಶ್ವೈಟ್ಸರ್ ಅವುಗಳನ್ನು ಲ್ಯಾಂಬರೀನೆಯಲ್ಲಿ ಅಳವಡಿಸಲು ತಕ್ಷಣ ತಯಾರಿರಲಿಲ್ಲ. ಹಾಗಾಗಿ ಶುಚಿತ್ವ ಮತ್ತು ಆಡಳಿತ ಕ್ರಮಗಳಲ್ಲಿ ಬಹಳ ಹಿಂದುಳಿದಿತ್ತು. ಅಲ್ಲಿಯ ಶೌಚ ಮತ್ತು ನೈರ್ಮಲ್ಯ ವ್ಯವಸ್ಥೆಗಳು ಓಬೀರಾಯನ ಕಾಲದವಾಗಿದ್ದವು. ಇಂಥ ಪರಿಸ್ಥಿತಿಯನ್ನು ಲ್ಯಾಂಬರೀನೆಗೆ ಹೊರಜಗತ್ತಿನಿಂದ ಭೇಟಿಗಾಗಿ ಬರುತ್ತಿದ್ದ ಆಧುನಿಕ ವೈದ್ಯರು, ಪತ್ರಿಕಾ ಕರ್ತರು, ಮತ್ತಿತರ ಸಮಾಜ ಸುಧಾರಕರು ಕೆಲವರು ಕಟುವಾಗಿ ಟೀಕಿಸುತ್ತಿದ್ದರು. ಅವರು ಹಿಂದಿರುಗಿದ ಮೇಲೆ ಶ್ವೈಟ್ಸರ್ ಮತ್ತು ಆಸ್ಪತ್ರೆ ಬಗೆಗೆ

ಬರೆದ ಲೇಖನಗಳಲ್ಲಿ ಇಂಥ ವಿಷಯಗಳಿಗೇ ಹೆಚ್ಚಿನ ಒತ್ತು ಕೊಡುತ್ತಿದ್ದರು. ವೈಯಕ್ತಿಕವಾಗಿ ಡಾ॥ ಶ್ವೈಯಿಟ್ಸರ್‌ನಲ್ಲಿ ಮುಂಗೋಪ, ಸಿಡುಕುತನ, ಸರ್ವಾಧಿಕಾರಿ ಮನೋಭಾವ ಇತ್ಯಾದಿಗಳು ಕೆಲ ಸಂದರ್ಭಗಳಲ್ಲಿ ಪ್ರಕಟವಾಗುತ್ತಿದ್ದುದನ್ನೇ ಉತ್ಪ್ರೇಕ್ಷೆ ಮಾಡಿ ಬರೆಯುತ್ತಿದ್ದರು. ಹುಟ್ಟು ಸೋಮಾರಿಗಳಾದ ಆಫ್ರಿಕನ್ನರಿಂದ ಕೆಲಸ ಮಾಡಿಸುವಾಗ ಅವನು ಅನುಸರಿಸುತ್ತಿದ್ದ ರೀತಿಗಳನ್ನು ಕೆಲವರು ಅಲ್ಲಗಳೆಯುತ್ತಿದ್ದರು. ಅವನು ನಿರೂಪಿಸಿದ್ದ ಜೀವೋಪಾಸನ-ತತ್ವಗಳನ್ನು ಈ ತರಹೆಯ ನಡೆವಳಿಕೆಗಳಿಗೆ ಹೋಲಿಸಿ ಅವನನ್ನು ಗೇಲಿಮಾಡಿ ಬರೆಯುವವರೂ ಇದ್ದರು. ಡಾ॥ ಶ್ವೈಯಿಟ್ಸರ್‌ನ ಕೀರ್ತಿ ಪ್ರಪಂಚದಾದ್ಯಂತ ಹರಡಿ ಅವನೊಬ್ಬ ಮಹೋನ್ನತ ವ್ಯಕ್ತಿಯೆಂಬ ಭಾವನೆ ಯುಂಟಾಗಿದ್ದನ್ನು ಸಹಿಸದ ಕೆಲವರು ತಮಗೆ ಸಿಕ್ಕಿದ ಇಂಥ ಅವಕಾಶಗಳನ್ನು ಉಪಯೋಗಿಸಿಕೊಂಡು ಅವಹೇಳನಕ್ಕೆ ಗುರಿಪಡಿಸುವ ಪಣತೊಟ್ಟಿದ್ದರು.

ಆದರೆ ಈ ಟೀಕಾಕಾರರು ಆಲ್ಬರ್ಟ್ ಶ್ವೈಯಿಟ್ಸರ್, ತನ್ನ ಮೂವತ್ತನೆಯ ವಯಸ್ಸಿನಲ್ಲಿ ಎರಡು ಡಾಕ್ಟರೇಟುಗಳನ್ನು ಬಗಲಲ್ಲಿಟ್ಟುಕೊಂಡು, ಸಂಗೀತವಿದ್ಯೆಯ ಪರಾಕಾಷ್ಠತೆಯನ್ನು ಮುಟ್ಟಿ, ಸುಖ ಜೀವನದ ಹೊಸ್ತಿಲಿನಲ್ಲಿದ್ದಾಗ, ಅಂತರಾತ್ಮನ ಕರೆಗೆ ಓಗೊಟ್ಟು ಆಫ್ರಿಕಾದ ಮೂಲ ನಿವಾಸಿಗಳ ಉದ್ಧಾರಕ್ಕಾಗಿ ಎಲ್ಲವನ್ನು ತ್ಯಜಿಸಿ ಬಂದಾಗಿನ ಮನೋಭೂಮಿಕೆಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದವರಲ್ಲ. ಅರ್ಧಶತಮಾನದಲ್ಲಿ ಅವನು ಆಸ್ಪತ್ರೆಯನ್ನು ಈಗಿನ ಸ್ಥಿತಿಗೆ ತರುವಲ್ಲಿ ಪಟ್ಟ ಬವಣೆಗಳ ಅರಿವಿದ್ದವರಲ್ಲ. ಎಲ್ಲಕ್ಕಿಂತ ಮಿಗಿಲಾಗಿ ಲ್ಯಾಂಬರೀನೆಯ ಆಸ್ಪತ್ರೆ ಯಾರ ಉಪಯೋಗಕ್ಕಾಗಿ ರೂಪಿತವಾಗಿತ್ತೋ ಅಂಥ ಅನಾಗರಿಕ ಆಫ್ರಿಕನ್ನರ ಜೀವನ ಕ್ರಮ, ರೀತಿ-ನೀತಿ ಮತ್ತು ಅಭ್ಯಾಸಗಳನ್ನು ತೀರಾ ಹತ್ತಿರದಿಂದ ನೋಡಿದ ಅನುಭವ ವಿದ್ದವರಲ್ಲ. ಸದಾ ಅಲೆಮಾರಿಗಳಾದ ಅವರು ತಮಗೆ ಒಗ್ಗದ ವಾತಾವರಣ ವಿಲ್ಲದಿರುವ ಕಡೆ ಅದು ಆಸ್ಪತ್ರೆಯಾದರೂ ಸರಿ, ಅಲ್ಲಿ ಹೆಚ್ಚು ಸಮಯ ಉಳಿಯುವ ಸ್ವಭಾವದವರಲ್ಲ. ಲ್ಯಾಂಬರೀನೆಯ ಹತ್ತಿರದಲ್ಲೇ ಸ್ವಲ್ಪ ಕಾಲದ ಹಿಂದೆ ಆರಂಭ ವಾಗಿದ್ದ ಸರ್ಕಾರದ ಆಸ್ಪತ್ರೆಯಲ್ಲಿ ಶೌಚ ಮತ್ತು ನೈರ್ಮಲ್ಯ ವ್ಯವಸ್ಥೆಯಿದ್ದರೂ, ಅಲ್ಲಿ ಚಿಕಿತ್ಸೆಗಾಗಿ ಸೇರಿದವರು ಒಂದೆರಡು ದಿನಗಳಲ್ಲಿ ಅದನ್ನು ತ್ಯಜಿಸಿ ಶ್ವೈಯಿಟ್ಸರ್‌ನ ಆಸ್ಪತ್ರೆಗೆ ಸೇರಿಕೊಳ್ಳುತ್ತಿದ್ದುದೂ ಅಪರೂಪವಾಗಿರಲಿಲ್ಲ. ಲ್ಯಾಂಬರೀನೆಯ ನದಿಯ ಆಚೆ ದಡದಲ್ಲಿದ್ದ ಶುಚಿತ್ವದ ಆಗರವೆನ್ನಬಹುದಾದ ಸರ್ಕಾರಿ-ಆಸ್ಪತ್ರೆ ಖಾಲಿ ಇದ್ದು, ಶ್ವೈಯಿಟ್ಸರ್‌ನ ಆಸ್ಪತ್ರೆ ರೋಗಿಗಳಿಂದ ತುಂಬಿ ತುಳುಕುತ್ತಿದ್ದುದನ್ನು ಕೆಲವು ಟೀಕಾಕಾರರು ಖುದ್ದು ನೋಡಿ ಆ ಬಗೆಗೂ ಬರೆದಿದ್ದರು. ಅತ್ಯಾಧುನಿಕ ಸೌಲಭ್ಯ ಗಳಿರುವ ಲಂಡನ್, ನ್ಯೂಯಾರ್ಕ್ ನಗರಗಳಲ್ಲಿರುವಂಥ ಆಸ್ಪತ್ರೆಯ ನಿರ್ಮಾಣ ಶ್ವೈಯಿಟ್ಸರ್ ಮನಸ್ಸು ಮಾಡಿದ್ದರೆ, ಅದರಲ್ಲೂ ಅವನು ಕೀರ್ತಿ ಶಿಖರದಲ್ಲಿದ್ದಾಗ,

ಅಸಾಧ್ಯವೇನಾಗಿರಲಿಲ್ಲ. ಅಂಥ ಆಸ್ಪತ್ರೆ ಯಾರ ಪ್ರಯೋಜನಕ್ಕಾಗಿ ಎನ್ನುವ ವಿಷಯ ನಾಗರಿಕ ಜಗತ್ತಿನಿಂದ ಕೆಲವೇ ದಿನಗಳು ಅಲ್ಲಿ ಬಂದಿದ್ದು ಹೋಗುವ ಟೀಕಾಕಾರರಿಗೆ ಹೊಳೆಯುವುದು ಅಸಾಧ್ಯವೇ. ಅಂತಹ ಆಸ್ಪತ್ರೆ ಬಹುಪಾಲು ಆಫ್ರಿಕನ್ನರ ಉಪಯೋಗಕ್ಕೆ ಬರುತ್ತಿರಲಿಲ್ಲವೆಂಬುದು ಶ್ವೈಯಿಟ್ಸರ್ ಮತ್ತು ಅವನ ಸಹೋದ್ಯೋಗಿಗಳಿಗೆ ಮಾತ್ರ ತಿಳಿದಿತ್ತು.

ಈ ಎಲ್ಲಾ ಕಾರಣಗಳಿಂದ ಲ್ಯಾಂಬರೀನೆಯ ಆಸ್ಪತ್ರೆ ಅದರ ಸೃಷ್ಟಿಕರ್ತೃ ಡಾ॥ ಆಲ್ಬರ್ಟ್ ಶ್ವೈಯಿಟ್ಸರ್‌ನ ಮೂಲ ಉದ್ದೇಶ, ಆಕಾಂಕ್ಷೆಗಳಂತೆ ಬೆಳೆಯುವುದು ಅನಿವಾರ್ಯವಾಯಿತು. ಆದರೆ ಅವನ ಕಾಲಾನಂತರ ಅದರ ಎಲ್ಲಾ ವೈಶಿಷ್ಟ್ಯಗಳನ್ನು ಅವನಂತೆ ಮುಂದುವರೆಸಿಕೊಂಡು ಹೋಗುವ ದಕ್ಷತೆ ಮತ್ತು ದೂರದೃಷ್ಟಿ ಇರುವವರು ಸಿಗಬಹುದೇ ಎಂಬ ಪ್ರಶ್ನೆ ಹಿತಚಿಂತಕರ ಮನಸ್ಸುಗಳಲ್ಲಿ ಸದಾ ಹೊಯ್ದಾಡುತ್ತಿತ್ತು. ಗೇಬನ್‌ನ ಹೊಸ ಆಡಳಿತ-ವ್ಯವಸ್ಥೆಯವರು ಬಿಳಿಯರನ್ನು ಅನುಮಾನ ಪ್ರವೃತ್ತಿಯಿಂದ ನೋಡುವವರಾಗಿದ್ದು, ಅವರು ಶ್ವೈಯಿಟ್ಸರ್‌ನ ಕಾಲಾನಂತರ ಆಸ್ಪತ್ರೆ ಅದೇ ರೀತಿ ಮುಂದುವರೆಯಲು ಅವಕಾಶ ಮಾಡುವರೇ ಎಂಬ ಸಂಶಯವೂ ಹಲವರಲ್ಲಿತ್ತು. ಆಸ್ಪತ್ರೆಯ ನೆರವಿಗೆ ಈಗ ಸಾಕಷ್ಟು ಸಹಾಯ ಪ್ರಪಂಚದಲ್ಲೆಡೆಯಿಂದ ಬರುತ್ತಿದ್ದು, ಸ್ವತಃ ಶ್ವೈಯಿಟ್ಸರ್‌ನೇ ಈ ಬಗೆಗೆ ತಲೆ ಕೆಡಿಸಿಕೊಂಡಿರಲಿಲ್ಲ. ಆಸ್ಪತ್ರೆಯ ಹಿತಚಿಂತಕರು ಈ ಬಗೆಗೆ ಅವನಲ್ಲಿ ಪ್ರಸ್ತಾಪಿಸಿದಾಗ ಹಾರಿಕೆಯ ಉತ್ತರಕೊಟ್ಟು ಆ ಬಗೆಗೆ ಮುಂದೆ ಚರ್ಚೆಗೆ ಅವಕಾಶ ಕೊಡುತ್ತಿರಲಿಲ್ಲ. ತೊಂಭತ್ತನೇ ಹುಟ್ಟುಹಬ್ಬದ ಸಂದರ್ಭದಲ್ಲಿ ಅವನ ಚಿತ್ರೀಕರಣ ಮಾಡಲು ಲಂಡನ್ನಿನ ಬಿ.ಬಿ.ಸಿ. ದೂರದರ್ಶನ ತಂಡದವರು ಈ ಪ್ರಶ್ನೆಯನ್ನು ಎತ್ತಿದಾಗ, ಆ ಬಗೆಗೆ ಆಗಲೇ ಏರ್ಪಾಟಾಗಿದೆಯೆಂದು ಮತ್ತೊಮ್ಮೆ ಹಾರಿಕೆಯ ಉತ್ತರ ಕೊಟ್ಟು ನುಣುಚಿಕೊಂಡಿದ್ದ. ನಿಜವಾದ ಸಂಗತಿಯೆಂದರೆ ಆಸ್ಪತ್ರೆಯ ಭವಿಷ್ಯ ಮತ್ತು ಅದನ್ನು ನಿರ್ವಹಿಸುವವರ ಬಗೆಗೆ ಆ ತನಕ ಯಾವ ಯೋಜನೆಯೂ ತಯಾರಾಗಿರಲಿಲ್ಲ!

ಅನಿಶ್ಚಿತತೆಯ ನಡುವೆಯೂ ಆಸ್ಪತ್ರೆಯ ಬೆಳವಣಿಗೆ ಯಾವ ಆತಂಕವೂ ಇಲ್ಲದೆ ಮುಂದುವರಿಯುತ್ತಿತ್ತು. ಅಲ್ಲೀಗ ಆರು ಶೀತಕ-ಪೆಟ್ಟಿಗೆಗಳು, ಎರಡು ದಟ್ಟ ಶೀತಕ-ಪೆಟ್ಟಿಗೆಗಳು, ಎರಡು ಜೀಪು, ಮತ್ತಿತರ ವಾಹನಗಳೂ ಇದ್ದವು. ಎಕ್ಸರೇ ಕೊಠಡಿಯನ್ನು ಹವಾ ನಿಯಂತ್ರಣಕ್ಕೊಳಪಡಿಸಲಾಗಿತ್ತು. ರೋಗ ನಿರೋಧಕ ಲಸಿಕೆಗಳು ಲಭ್ಯವಿದ್ದು ಆಸ್ಪತ್ರೆಯ ದಾದಿಯರ ಸುತ್ತಮುತ್ತಲ ಊರುಗಳಿಗೆ ತೆರಳಿ ಮಕ್ಕಳಿಗೆ ನೀಡುತ್ತಿದ್ದರು. ಹೊರರೋಗಿಗಳ ಮತ್ತು ಒಳರೋಗಿಗಳ ಸಂಖ್ಯೆ ಇನ್ನೂ ಹೆಚ್ಚುತ್ತಲೇ ಇತ್ತು. ಆರು ಜನ ವೈದ್ಯರು ೩೫ ಜನ ದಾದಿಗಳಿದ್ದರು. ಅದನ್ನು ಅತ್ಯಾಧುನೀಕರಣಗೊಳಿಸುವಲ್ಲಿ ಅವನಿಗೂ ರೆನ್ನಾಳಿಗೂ ಆಗಾಗ್ಗೆ ಚಕಮಕಿಗಳು

ಉಂಟಾಗುತ್ತಿರುವುದು ಸಾಮಾನ್ಯ ಸಂಗತಿಯಾಗಿತ್ತು. ಆದರೂ ಶ್ವೈಯಿಟ್ಸರ್‌ನ ನಿರ್ಧಾರದಲ್ಲಿ ಬದಲಾವಣೆ ಅಸಾಧ್ಯವೆನಿಸಿತ್ತು.

## ೨೪. ಅವಸಾನ

ಡಾ॥ ಶ್ವೈಯಿಟ್ಸರ್‌ನ ಆರೋಗ್ಯ ಇತ್ತೀಚಿನ ದಿನಗಳಲ್ಲಿ ಆಗಾಗ್ಗೆ ಕೆಡುತ್ತಿತ್ತು. ಡಯಾಬಿಟಿಸ್ ಕಾಯಿಲೆ ಈಗ ಕೆಲವು ವರ್ಷಗಳಿಂದ ಅವನನ್ನು ಬಾಧಿಸುತ್ತಿತ್ತು. ಆಹಾರದ ಮೇಲೆ ಕಟ್ಟುನಿಟ್ಟಾದ ಹತೋಟಿಯನ್ನಿಟ್ಟುಕೊಂಡಿದ್ದರೂ ರಕ್ತದಲ್ಲಿನ ಸಕ್ಕರೆ ಮಟ್ಟ ಏರುತ್ತಲೇ ಇತ್ತು. ಪ್ರಯೋಗ ಪರೀಕ್ಷೆಗಳ ಹೊಣೆಯನ್ನು ಸ್ವತಃ ರೆನ್ನಾಳೇ ಹೊತ್ತಿದ್ದರೂ ಕಾಯಿಲೆಯನ್ನು ನಿಯಂತ್ರಿಸುವುದು ಕಷ್ಟಕರವಾಗಿತ್ತು. ಅವನೀಗ ಮಾಂಸಾಹಾರವನ್ನೇ ತ್ಯಜಿಸಿದ್ದ. ವಿದೇಶಗಳಿಂದ ಕೆಲವು ಮದ್ದುಗಳನ್ನು ತರಿಸಿ ಪ್ರಯೋಗಿಸುತ್ತಿದ್ದರೂ ಹೆಚ್ಚಿನ ಯಶಸ್ಸು ದೊರೆತಿರಲಿಲ್ಲ.

ಆರೋಗ್ಯ ಹದಗೆಡುತ್ತಿದ್ದರೂ ಶ್ವೈಯಿಟ್ಸರ್ ಆಸ್ಪತ್ರೆಯ ಆಗು ಹೋಗುಗಳಲ್ಲಿ ಕೊನೆಯವರೆಗೂ ಆಸಕ್ತಿ ಕಳೆದುಕೊಂಡಿರಲಿಲ್ಲ. ನಡೆಯಲು ಶಕ್ತಿ ಸಾಲದಿದ್ದರೂ ಜೀಪಿನಲ್ಲಿ ಆಸ್ಪತ್ರೆ ಮತ್ತು ತರಕಾರಿ-ತೋಟಗಳ ಪ್ರದೇಶದಲ್ಲಿ ತಿರುಗಾಡಿ ಬರುತ್ತಿದ್ದ. ಪ್ರತಿ ವಾರ ಚೀಲಗಟ್ಟಲೇ ಬರುತ್ತಿದ್ದ ಕಾಗದ ಪತ್ರಗಳಿಗೆ, ಕೈಸೆಡತವಿದ್ದರೂ ತಾನೇ ಉತ್ತರ ಬರೆಯುತ್ತಿದ್ದ. ಹೊರಗಿನ ರಾಜಕೀಯ ಸಂಪರ್ಕವನ್ನೂ ಬಿಟ್ಟಿರಲಿಲ್ಲ. ಅಧ್ಯಕ್ಷ ಕೆನಡಿಯವರ ಹತ್ಯೆಯ ವಿಚಾರಣೆಯ ಬಗೆಗೆ ಆಸಕ್ತಿ ವಹಿಸಬೇಕೆಂದು ಬರ್ಟ್ರೆಂಡ್ ರಸೆಲ್‌ರಿಂದ ಪತ್ರಗಳು ಬರುತ್ತಿದ್ದವು. ಅವರ ಜತೆ ಅಮೆರಿಕೆಯ ರಾಷ್ಟ್ರಾಧ್ಯಕ್ಷರ ಚುನಾವಣೆಯ ಪ್ರಚಾರಕ್ಕೆ ಸಹಾಯ ಮಾಡಲೂ ಸಮ್ಮತಿಸಿದ್ದ!

ದಿನಗಳುರಿಳಿದಂತೆಲ್ಲಾ ಶ್ವೈಯಿಟ್ಸರ್ ತನ್ನ ಸ್ವಂತ ಕೆಲಸಗಳನ್ನು ಮಾಡಿಕೊಳ್ಳ ಲಾರದಷ್ಟು ನಿಃಶ್ಯಕ್ತನಾದ. ನೆಚ್ಚಿನ ದಾದಿ ಆಲಿ ಸಿಲ್ವರ್ ಈಗ ಅವನ ಕೊಠಡಿಯಲ್ಲೇ ಉಳಿದುಕೊಂಡು ರಾತ್ರಿ ಹಗಲು ಶುಶ್ರೂಷೆ ಮಾಡುತ್ತಿದ್ದಳು. ಅವನ ಅವಸಾನ ಸಮೀಪಿಸುತ್ತಿರುವುದು ಬಹುಶಃ ಹಲವರಿಗೆ ತಿಳಿದಿತ್ತು. ಅಮೆರಿಕಾದಿಂದ ಎರಿಕಾ ಆಂಡರ್‌ಸನ್ ಬಂದು ಸ್ವಲ್ಪಕಾಲ ಇದ್ದು ಹೋದಳು. ಜೆರೋಮ್ ಹಿಲ್‌ಗೆ ಕಾಗದ ಬರೆದು ಸ್ವಲ್ಪ ಕಾಲ ಬಂದು ಹೋಗಲು ಶ್ವೈಯಿಟ್ಸರ್‌ನೇ ಕೇಳಿಕೊಂಡಿದ್ದ.

೧೯೬೫ರ ಆಗಸ್ಟ್ ೨೩ರಂದು ಆಸ್ಪತ್ರೆಯ ಸಿಬ್ಬಂದಿಯವರನ್ನೆಲ್ಲಾ ಒಂದು ಕಡೆ ಸೇರಿಸಿ ಒಂದು ಮಹತ್ವದ ನಿರ್ಧಾರವನ್ನು ತೆಗೆದುಕೊಂಡು ಲ್ಯಾಂಬರೀನೆಯ ಆಸ್ಪತ್ರೆಯನ್ನು ಅಧಿಕೃತವಾಗಿ ನಡೆಸುವ ಜವಾಬ್ದಾರಿಯನ್ನು ಹೊತ್ತಿದ್ದ ಸ್ಟ್ರಾಸ್‌ಬರ್ಗ್‌ನ ಪುದುವಟ್ಟಿನವರಿಗೆ ಪತ್ರ ಬರೆಸಿದರು. ಅದರಲ್ಲಿ ಅವನ ಮರಣಾನಂತರ

ಲ್ಯಾಂಬರೀನೆಯ ಆಸ್ಪತ್ರೆಯ ನಿರ್ವಹಣೆಯ ಜವಾಬ್ದಾರಿಯನ್ನು ಅವನ ಮಗಳು ರೆನ್ನಾ ಶ್ವೆಯಿಟ್ಸರ್ ಎರ್ಕಾರ್ಟ್ ನಿರ್ವಹಿಸತಕ್ಕದೆಂಬ ನಿರ್ಧಾರವನ್ನು ತಿಳಿಸಿದ. ಈ ಮಹತ್ವದ ನಿರ್ಣಯ ಆ ದಿನ ಆಸ್ಪತ್ರೆಯ ಸಿಬ್ಬಂದಿಗಳಂತೆ, ರೆನ್ನಾಳಿಗೂ ತಿಳಿದದ್ದು ಅದೇ ಮೊದಲಬಾರಿಗೆ !

ಅಂದಿನಿಂದ ಶ್ವೆಯಿಟ್ಸರ್‌ನ ಆರೋಗ್ಯ ಹದಗೆಡಲಾರಂಭಿಸಿತು. ಎಂದಿನಂತೆ ಊಟದ ಮನೆಗೆ ಬರುವುದೂ ಅಸಾಧ್ಯವಾಯಿತು. ಆಸ್ಪತ್ರೆಯ ತಿರುಗಾಟ ಮೊಟಕಾಯಿತು. ಒಂದು ದಿನ ಊರುಗೋಲಿನ ಸಹಾಯದಿಂದ ದ್ರಾಕ್ಷಿಯ ತೋಟದಲ್ಲಿ ತಿರುಗಾಡಿದ. ತಾನೇ ನೆಟ್ಟಿದ್ದ ಗಿಡಗಳ ಬೆಳವಣಿಗೆ ನೋಡಿ ಬೆರಗಾದ. ಅತ್ಯಂತ ಪ್ರಯಾಸದಿಂದ ಹತ್ತಿರದ ದಿಬ್ಬವನ್ನೇರಿ ಆಸ್ಪತ್ರೆಯ ದೃಶ್ಯವನ್ನು ನೋಡಿ ಆನಂದಪರವಶನಾದಂತೆ ಕಂಡ. ಅದೇ ಅವನ ಕೊನೆಯ ಹೊರಗಡೆ ತಿರುಗಾಟವಾಯಿತು. ಮುಂದೆ ಊಟ ಉಪಚಾರಗಳೆಲ್ಲಾ ಅವನ ಕೊಠಡಿಯಲ್ಲೇ ನಡೆಯುವುದು ಅನಿವಾರ್ಯವಾಯಿತು.

ದಿನ ಕಳೆದಂತೆಲ್ಲಾ ಅವನ ಮಿದುಳಿಗೆ ರಕ್ತ ಸಂಚಾರದ ಕೊರತೆಯ ಚಿಹ್ನೆಗಳು ವ್ಯಕ್ತವಾದವು; ಆಗಸ್ಟ್ ೨೮ರಂದು ಸ್ವಲ್ಪ ಸಮಯ ಪ್ರಜ್ಞಾಹೀನನೂ ಆಗಿದ್ದ, ಮುಂದಿನ ವಾರ ಹೃದಯ ಬಡಿತದ ದೌರ್ಬಲ್ಯದ ಚಿಹ್ನೆಗಳು ಪ್ರಕಟವಾದವು. ಮುಂದೆ ಎದ್ದು ನಿಲ್ಲುವುದೂ ಕಷ್ಟವಾಗುತ್ತಿತ್ತು. ಪದೇ ಪದೇ ಪ್ರಜ್ಞೆ ಕಳೆದುಕೊಳ್ಳುತ್ತಿದ್ದ ಬಾಯಿ ಮೂಲಕ ಆಹಾರ ನೀಡುವುದಕ್ಕೂ ತೊಂದರೆಯಾಗುತ್ತಿತ್ತು. ಕೆಲ ಸಾರಿ ರಕ್ತನಾಳಗಳ ಮೂಲಕ ದ್ರವೀಕರಿಸಿದ ಆಹಾರವನ್ನು ನೀಡಬೇಕಾಗುತ್ತಿತ್ತು.

ಸೆಪ್ಟಂಬರ್ ೩ರ ಹೊತ್ತಿಗೆ ಶ್ವೆಯಿಟ್ಸರ್ ಅರೆ ಪ್ರಜ್ಞಾವಸ್ಥೆಯಲ್ಲಿದ್ದ. ಎಷ್ಟೇ ಉತ್ತಮ ತರದ ಚಿಕಿತ್ಸೆ ನೀಡುತ್ತಿದ್ದರೂ ಪರಿಸ್ಥಿತಿ ಉತ್ತಮವಾಗಲಿಲ್ಲ. ಕ್ರಮೇಣ ಸಂಪೂರ್ಣ ಪ್ರಜ್ಞಾಹೀನಸ್ಥಿತಿ ಉಂಟಾಯಿತು. ಸೆಪ್ಟಂಬರ್ ೪ (೧೯೬೫) ರಾತ್ರಿ ಹನ್ನೊಂದು ಗಂಟೆಗೆ ಡಾ|| ಆಲ್ಬರ್ಟ್ ಶ್ವೆಯಿಟ್ಸರ್‌ನ ಅವಸಾನವಾಯಿತು.

ಶ್ವೆಯಿಟ್ಸರ್‌ನ ಅಂತಿಮ ಸಮೀಪವಾಗುತ್ತಿದ್ದ ಸುದ್ದಿ ಆಸ್ಪತ್ರೆಯ ವಸಾಹತಿನಲ್ಲೆಲ್ಲಾ ಹರಡಿತು. ಆಸ್ಪತ್ರೆಯ ಸಿಬ್ಬಂದಿಗಳು, ರೋಗಿಗಳು ಮತ್ತು ಆಸ್ಪತ್ರೆಯ ನಿವಾಸಿಗಳೆಲ್ಲಾ ಅಲ್ಲಿ ಬಂದು ಕಣ್ಣೀರು ಸುರಿಸುತ್ತಾ ನಿಂತಿದ್ದರು. ಅಂತ್ಯವಾದ ಕೂಡಲೇ ಜನರ ಭಯಂಕರ ರೋಧನ ಮುಗಿಲು ಮುಟ್ಟುವಂತಿತ್ತು. ಸ್ವಲ್ಪ ಸಮಯದಲ್ಲೇ ಚರಮಗೀತ ಮತ್ತು ಸಾಮೂಹಿಕ ಬೈಬಲ್-ಪಠಣ ಶುರುವಾಯಿತು.

ಡಾ|| ಆಲ್ಬರ್ಟ್ ಶ್ವೆಯಿಟ್ಸರ್ ಮೊದಲೇ ಅಂತ್ಯಕ್ರಿಯೆಯ ಬಗೆಗೆ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದ. ಯುರೋಪಿಗೆ ಹೋದಾಗ ಹುಟ್ಟೂರಾದ ಗನ್ಸ್‌ಬಾಕ್‌ಸಲ್ಲೇನಾದರೂ ತನ್ನ ಅಂತ್ಯವಾದರೆ, ಕುಟುಂಬದವರನ್ನು ಸಮಾಧಿ

ಮಾಡಿದಲ್ಲೇ ಸಮಾಧಿ ಮಾಡಬಹುದು, ಲ್ಯಾಂಬರೀನೆಯಲ್ಲಿದ್ದಾಗ ಜೀವನ ಕೊನೆಗೊಂಡರೆ ಅಲ್ಲೇ ತನ್ನ ಸಮಾಧಿಯಾಗತಕ್ಕದ್ದೆಂದು ಆದೇಶ ಮಾಡಿದ್ದನಂತೆ. ಯಾರದೇ ಅಂತ್ಯ ಎಲ್ಲಿ ಆಗುತ್ತದೋ ಅಲ್ಲೇ ಅವರ ಸಮಾಧಿಯಾಗುವುದು ನ್ಯಾಯಸಮ್ಮತ. ಎಲ್ಲಾ ಕಡೆ ಇರುವ ಭೂಮಿ ದೇವರ ಸಾಮ್ರಾಜ್ಯದ್ದೇ ಆಗಿರುವಾಗ ಸಮಾಧಿಯಾಗಬೇಕಾದ ಜಾಗದ ವಿಷಯದಲ್ಲಿ ಜಿಜ್ಞಾಸೆ ಸಲ್ಲ ಎಂಬುದು ಅವನ ಅಭಿಪ್ರಾಯವಾಗಿತ್ತು.

ಮರುದಿನ ಬೆಳಗಿನ ಜಾವ ಐದೂವರೆ ಗಂಟೆಗೆ ಆಸ್ಪತ್ರೆಯ ದೊಡ್ಡ ಘಂಟಾನಾದ ಡಾ॥ ಆಲ್ಬರ್ಟ್ ಶ್ವೆಯಿಟ್ಸರ್ - ಮಾಂತ್ರಿಕ ವೈದ್ಯ, ಓ ಗಂಗಾ, ದೊಡ್ಡ ಡಾಕ್ಟರ್‌ನ ಮರಣದ ಸುದ್ದಿಯನ್ನು ಲ್ಯಾಂಬರೀನೆ ಮತ್ತು ಅದರ ಸುತ್ತಮುತ್ತಲ ಪ್ರದೇಶಗಳಿಗೆ ಸಾರಿತು. ಅವರ ನೆಚ್ಚಿನ 'ಓ ಗಂಗಾ' ಇನ್ನಿಲ್ಲವೆಂಬುದನ್ನರಿತ ಆಫ್ರಿಕನ್ನರು ದಿಗ್ಭ್ರಮೆಗೊಂಡು ಶೋಕ ಸಾಗರದಲ್ಲಿ ಮುಳುಗಿದರು. ದೂರ ದೂರದ ಹಳ್ಳಿಗಳಲ್ಲೂ ಟಾಂ ಟಾಂ ಮಾಡಿ ದಾರುಣ ವಾರ್ತೆ ಎಲ್ಲರಿಗೂ ತಿಳಿಯುವಂತೆ ಮಾಡಿದರು. ಡಾ॥ ಶ್ವೆಯಿಟ್ಸರ್ ಮೊದಲು ಲ್ಯಾಂಬರೀನೆಗೆ ಬಂದ ಸುದ್ದಿಯನ್ನೂ ಟಾಂ ಟಾಂ ಮಾಡಿದ್ದರಂತೆ!

ಬೆಳಗಿನ ಆರು ಗಂಟೆಗಾಗಲೇ ಅಲ್ಲಿಗೆ ಜನರ ಮಹಾಪೂರ ಉಕ್ಕಿ ಬಂದಿತ್ತು. ಅಂತಿಮವಾಗಿ ಅವನ ಮುಖದರ್ಶನಕ್ಕಾಗಿ ಜನ ಕಿಕ್ಕಿರಿದು ನೆರೆದಿದ್ದರು. ನಾಗರಿಕತೆಯ ಬೆಳಕನ್ನೇ ಕಾಣದ ಘೋರಾರಣ್ಯದಲ್ಲಿ ಅರ್ಧಶತಮಾನಕ್ಕೂ ಹೆಚ್ಚು ಕಾಲ ಪ್ರಕಾಶಮಾನವಾಗಿ ಬೆಳಗಿದ ಸೂರ್ಯಾಸ್ತಮಾನವನ್ನು ಅವರೆಲ್ಲಾ ಸಹಿಸ ದಾದರು. ಆಫ್ರಿಕಾದ ಶತಶತಮಾನಗಳ ಇತಿಹಾಸದಲ್ಲಿ ಅವರನ್ನು ಯಾರೂ ಅವನಂತೆ ಕರುಣೆ, ಅನುಕಂಪ, ಪ್ರೀತಿ ವಿಶ್ವಾಸಗಳಿಂದ ನೋಡಿಕೊಂಡು, ಅವರು ಅನುಭವಿಸುತ್ತಿದ್ದ ಭಯಂಕರ ರೋಗರುಜಿನಗಳನ್ನು ವಾಸಿ ಮಾಡಿ, ನಡೆ-ನುಡಿಗಳನ್ನು ತಿದ್ದಿ, ನೀತಿ-ಧರ್ಮಗಳನ್ನು ಬೋಧಿಸಿ, ಕೆಲಸ-ಕಾರ್ಯಗಳನ್ನು ಕಲಿಸಿ, ಕಾಡುಪ್ರಾಣಿ ಗಳಂತಿದ್ದವರನ್ನು ನಾಗರಿಕ ಜಗತ್ತಿಗೆ ಮಾನವರನ್ನಾಗಿ ಪರಿಚಯಿಸಿದ ದೇವಮಾನವನ ಅಗಲಿಕೆ ಅವರ ಅಂತರಾಳವನ್ನು ಕಲಕಿತ್ತು. ತಮ್ಮ ತಮ್ಮ ಭಾಷೆ, ನುಡಿಗಟ್ಟುಗಳಲ್ಲಿ ಅವನ ಗುಣಗಾನ ಮಾಡಿಕೊಳ್ಳುತ್ತಿದ್ದರು.

ಗತಿಸಿದ ಡಾ॥ ಆಲ್ಬರ್ಟ್ ಶ್ವೆಯಿಟ್ಸರ್‌ನ ಶವಸಂಸ್ಕಾರ ಅಂದು ಸಂಜೆ ಐದು ಗಂಟೆಗಾಯಿತು. ಸರ್ಕಾರದ ಪರವಾಗಿ ಅಂತಿಮ ಗೌರವ ಸೂಚಿಸಲು ಗೇಬನ್ ಗಣರಾಜ್ಯದ ಹಲವು ಸಚಿವರು ಅಲ್ಲಿಗೆ ಧಾವಿಸಿ ಬಂದಿದ್ದರು. ಫ್ರೆಂಚ್ ಮತ್ತು ಗೇಬನ್ ಹಿರಿಯ ಆಡಳಿತಾಧಿಕಾರಗಳು, ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ, ಅಮೆರಿಕಾ ಇಸ್ರೇಲ್ ಮುಂತಾದ ರಾಷ್ಟ್ರಗಳ ರಾಯಭಾರಿಗಳು ಅಲ್ಲಿ ಹಾಜರಿದ್ದರು.

ಮತಪಂಗಡಗಳ ಭೇದ-ಭಾವ ತೊರೆದು ಸುತ್ತಮುತ್ತಲ ಪ್ರದೇಶಗಳಲ್ಲಿದ್ದ ಪ್ರಾಟೆಸ್‌ಟೆಂಟ್ ಮತ್ತು ಕ್ಯಾಥೋಲಿಕ್ ಪಂಗಡಗಳ ಗುರುಗಳು, ಮಿಷನರಿಗಳು ಸಹಾ ಬಂದು ಸೇರಿದ್ದರು. ಗೇಬನ್ ಸರ್ಕಾರದ ಪೋಲಿಸ್ ಪಡೆಯೊಂದು ಅಂತಿಮ ಗೌರವ ರಕ್ಷೆಯನ್ನು ನೀಡಲು ಕಾದು ನಿಂತು ಚರಮಗೀತೆಯನ್ನು ನುಡಿಸುತ್ತಿತ್ತು.

ಡಾ॥ ಶ್ವೈಯಿಟ್ಸರ್ ವಾಸಿಸುತ್ತಿದ್ದ ಕುಟೀರದ ಎದಿರಗಡೆ ಹಿಂದೆ ಪತ್ನಿ ಹೆಲೆನ್‌ಳ ಚಿತಾಭಸ್ಮವನ್ನು ಸಮಾಧಿ ಮಾಡಿದ ಜಾಗದ ಪಕ್ಕದಲ್ಲೇ ಡಾ॥ ಶ್ವೈಯಿಟ್ಸರ್‌ನ ಸಮಾಧಿಗೂ ಏರ್ಪಾಡಾಗಿತ್ತು. ಡಾ॥ ವಾಲ್ಟರ್ ಮುಂಚ್ ಅಂತಿಮ ಸಂಸ್ಕಾರದ ಧಾರ್ಮಿಕ ಕಟ್ಟಳೆಗಳನ್ನು ನೆರವೇರಿಸಿದರು. ಆಸ್ಪತ್ರೆಯ ಸಿಬ್ಬಂದಿಯವರು ಚರಮಗೀತೆಗಳನ್ನು ಹಾಡುತ್ತಿದ್ದರು. ಆಫ್ರಿಕನ್ನರು ತಮ್ಮದೇ ಆದ ಶೋಕಗೀತೆಗಳನ್ನು ಹಾಡುತ್ತಿದ್ದರು. ನಂತರ ಗೇಬನ್ ಸರ್ಕಾರದ ಪ್ರತಿನಿಧಿ, ಡಾ॥ ಶ್ವೈಯಿಟ್ಸರ್‌ನ ಜೀವನ ಮತ್ತು ನಿಸ್ವಾರ್ಥ ಸೇವಾ ಕಾರ್ಯಗಳನ್ನು ಹೊಗಳಿ ಕಿರುಭಾಷಣ ಮಾಡಿದರು. ಆಲ್‌ಸೇಶ್ ಪ್ರತಿನಿಧಿಯೊಬ್ಬರು ಡಾ॥ ಶ್ವೈಯಿಟ್ಸರ್‌ನ ಸೇವೆಗೆ ಗೌರವ ಸೂಚಕವಾದ ಮಾತುಗಳನ್ನಾಡಿದರು.

ಶವದ ಪೆಟ್ಟಿಗೆಯನ್ನು ನಾಲ್ಕು ಜನ ಆಫ್ರಿಕನ್ನರು ಮತ್ತು ನಾಲ್ಕು ಜನ ಯುರೋಪಿಯನ್ನರು ಹೊತ್ತುತಂದು ಗೋರಿಯೊಳಗೆ ಇಳಿಸಿದರು. ಅಲ್ಲಿ ನೆರೆದಿದ್ದ ಸಹಸ್ರಾರು ಮಂದಿ ತಮ್ಮ ಕೈಗಳಿಂದ ಹಿಡಿ ಮಣ್ಣನ್ನು ಸುರಿಯುವುದರ ಮೂಲಕ ಸಮಾಧಿಯನ್ನು ಮುಚ್ಚಿದರು. ಡಾ॥ ಆಲ್ಬರ್ಟ್ ಶ್ವೈಯಿಟ್ಸರ್ ಎಂಬ ವ್ಯಕ್ತಿ ಹೀಗೆ ಕಣ್ಮರೆಯಾದ. ಆದರೆ ಅವನೊಬ್ಬ ಬರೇ ವ್ಯಕ್ತಿಯಾಗಿರಲಿಲ್ಲ, ಅದೊಂದು ಶಕ್ತಿ, ಚೇತನ, ಮಾನವಕುಲದ ಆಶಾದೀಪ, ಅದು ಮರೆಯಾಗಲಾರದು, ನಂದಲಾರದು. ಮನುಕುಲದ ಉಳಿವಿಗೆ ಆ ಚೇತನ ಸದಾ ಸ್ಫೂರ್ತಿ ಒದಗಿಸುವುದರಲ್ಲಿ ಸಂದೇಹವಿಲ್ಲ.

# ೨೫. ಹಿನ್ನೋಟ

ತೊಂಭತ್ತು ವರ್ಷ, ಎಂಟು ತಿಂಗಳು, ಇಪ್ಪತ್ತು ದಿನಗಳ ಸುದೀರ್ಘವಾಗಿ ಬದುಕಿ ಬಾಳಿದ ಡಾ॥ ಆಲ್ಬರ್ಟ್ ಶ್ವೈಯಿಟ್ಸರ್ ಎಂಬ ವ್ಯಕ್ತಿ ಯುರೋಪಿನ ನಾಗರಿಕತೆಯ ತೊಟ್ಟಲಲ್ಲಿ ಜನಿಸಿದ್ದ. ಆಫ್ರಿಕಾದ ಅನಾಗರಿಕರಿದ್ದ ಕಗ್ಗಾಡಿನಲ್ಲಿ ಅಸುನೀಗಿದ. ಅವನೀಗ ಜೀವಂತವಾಗಿಲ್ಲ. ಆದರೆ ಅವನ ಖ್ಯಾತಿ ಉಳಿದುಕೊಂಡಿದೆ, ಅವನ ಜೀವನ ಇತರರಿಗೆ ಮಾರ್ಗದರ್ಶನ ನೀಡುತ್ತಿದೆ. ಅವನ ಮೂಲ- ಧ್ಯೇಯೋದ್ದೇಶ ಗಳನ್ನು ಸರಿಯಾಗಿ ಅರಿಯದಿದ್ದವರು ಸ್ವಲ್ಪಮಟ್ಟಿನ ಅಪಖ್ಯಾತಿಯನ್ನೂ ಅವನ ಹೆಸರಿಗೆ ಲೇಪಿಸಲು ಪ್ರಯತ್ನಿಸಿದ್ದುಂಟು. ಆದರೆ ಪ್ರಾಜ್ವಲ್ಯಮಾನವಾದ ಅವನ ಘನ

ಧ್ಯೇಯೋದ್ದೇಶ ಸಾಧನೆಗಳ ಎದುರಿಗೆ ಅವೆಲ್ಲಾ ಅಳಿಸಿಹೋದವು.

ಲ್ಯಾಂಬರೀನೆಯ ಕಾಡಿನಲ್ಲಿ ಅವನು ಸ್ಥಾಪಿಸಿದ್ದ ಆಸ್ಪತ್ರೆ ಇನ್ನೂ ಮುಂದುವರಿಯುತ್ತಿದೆ. ಬಹುಶಃ ಡಾ॥ ಶ್ವೈಟ್ಸರ್ ಜೀವಿಸಿದ್ದಾಗಿನ ರೀತಿಯಲ್ಲಿರಲಾರದು. ಬಹಳ ಕಾಲದಿಂದ ಫ್ರೆಂಚರ ವಸಾಹತಾಗಿದ್ದು ದಾಸ್ಯದ ಶೃಂಖಲೆಯಲ್ಲಿ ತೊಳಲಾಡುತ್ತಿದ್ದ ಗೇಬನ್ ಪ್ರದೇಶ ಈಗ ಸಂಪದ್ಭರಿತ, ಸರ್ವತಂತ್ರ ಗಣರಾಜ್ಯವಾಗಿದೆ. ಆಧುನಿಕತೆಯ ಗಾಳಿ ಬಿರುಸಿನಿಂದಲೇ ಬೀಸುತ್ತಿದೆ. ಅಲ್ಲಿನ ಜನರ ಜೀವನ ಕ್ರಮದಲ್ಲಿ ಬದಲಾವಣೆಗಳಾಗುತ್ತಿವೆ. ಲ್ಯಾಂಬರೀನೆಯ ಆಸ್ಪತ್ರೆಯೂ ಪೂರಕ-ಬದಲಾವಣೆಗಳಾಗುತ್ತಿವೆ. ಲ್ಯಾಂಬರೀನೆಯ ಆಸ್ಪತ್ರೆಯಲ್ಲಿಯೂ ಪೂರಕ ಬದಲಾವಣೆಗಳಾಗುವುದು ಅನಿವಾರ್ಯ. ಶ್ವೈಟ್ಸರ್ ಜೀವಿಸಿ ಇರುವ ತನಕ ಅದು, ಮೂಲ ಆಫ್ರಿಕನ್ನರಿಗಾಗಿ, ಅವರ ಆಗಿನ ಪರಿಸರಕ್ಕನುಗುಣವಾಗಿ ರೂಪಿತವಾಗಿತ್ತು. ಹಾಗೆಯೇ ಮುಂದುವರೆಯಬೇಕೆಂಬುದು ಬಹುಶಃ ಅವನ ಆಶಯ ಕೂಡ ಆಗಿತ್ತು. ಆಸ್ಪತ್ರೆಯನ್ನು ಶ್ವೈಟ್ಸರ್‌ನ ಮಗಳು ರೆನ್ನಾ ನಿರ್ವಹಿಸುತ್ತಿದ್ದಾಳೆ. ಶ್ವೈಟ್ಸರ್ ಜೀವಿಸಿರುವಾಗಲೇ ಅಲ್ಲಿ ಆಧುನಿಕ ಬದಲಾವಣೆಗಳಾಗಬೇಕೆಂದು ತಂದೆಯೊಡನೆ ವಾದಿಸುತ್ತಿದ್ದಳು. ಈಗ ಗೇಬನ್ ಮತ್ತು ಅಲ್ಲಿನ ಜನರಲ್ಲಾಗುತ್ತಿರುವ ಬದಲಾವಣೆಗನುಸಾರ ಹಲವಾರು ಆಧುನಿಕ ಸೌಕರ್ಯಗಳು ಅಲ್ಲಿ ತಲೆ ಎತ್ತಿವೆ. ಈಗಲ್ಲಿ ಹಲವು ವಿದ್ಯುತ್‌ಜನಕ ಯಂತ್ರಗಳನ್ನು ಸ್ಥಾಪಿಸಲಾಗಿದೆ. ಆಸ್ಪತ್ರೆಯೇ ಅಲ್ಲದೇ ಇಡೀ ಲ್ಯಾಂಬರೀನೆಯ ವಸಾಹತು ವಿದ್ಯುತ್‌ಮಯವಾಗಿದೆ. ಶುದ್ಧೀಕರಿಸಿದ ನೀರು ಅಲ್ಲಿನ ನಲ್ಲಿಗಳಲ್ಲಿ ಹರಿಯುತ್ತಿದೆ. ಆಧುನಿಕ ಶೌಚಾಲಯಗಳು, ಸ್ನಾನದ ಗೃಹಗಳು ನಿರ್ಮಾಣವಾಗಿವೆ. ಆಸ್ಪತ್ರೆಯ ಕಟ್ಟಡಗಳು ಗಟ್ಟಿಮುಟ್ಟಾಗಿರುವುದರಿಂದ ಅವುಗಳ ಪುನರ್‌ನಿರ್ಮಾಣದ ಬಗೆಗೆ ಇನ್ನೂ ಯೋಜನೆಗಳಾಗಿಲ್ಲ. ಸಿಬ್ಬಂದಿ ವರ್ಗದವರೆಲ್ಲಾ ಶ್ವೈಟ್ಸರ್ ಕಾಲದಂತೆ ಇನ್ನೂ ಒಂದೇ ಕಡೆ ಸೇರಿ ಭೋಜನ ಮಾಡುತ್ತಾರೆ. ಅಂದಿನ ಹಾಗೆ ಪ್ರಾರ್ಥನೆ ಮಾಡುತ್ತಾರೆ. ಪ್ರತಿ ಭಾನುವಾರ ಆಸ್ಪತ್ರೆಯಲ್ಲೂ ಸಾಮೂಹಿಕ ಪ್ರಾರ್ಥನೆ ಮಾಡುವ ಅಭ್ಯಾಸ ಮುಂದುವರಿಯುತ್ತಿದೆ.

ಆಸ್ಪತ್ರೆಗೆ ಡಾ॥ ಶ್ವೈಟ್ಸರ್ ಇದ್ದಾಗ ಹರಿದು ಬರುತ್ತಿದ್ದ ಹಣ ಮತ್ತು ಸಾಮಗ್ರಿಗಳ ದಾನದ ಹೊಳೆ ಬತ್ತಲಾರಂಭಿಸಿದೆ. ಅದಕ್ಕೀಗ ಸ್ಥಳೀಯ ಸರ್ಕಾರದ ಆಶ್ರಯ, ಅನುದಾನ ಅತ್ಯವಶ್ಯಕವಾಗಿದೆ. ಸರ್ಕಾರವು ಆಸ್ಪತ್ರೆಯಲ್ಲಿ ಇನ್ನೂ ಹೆಚ್ಚಿನ ವಿಶೇಷ ಚಿಕಿತ್ಸಾ ವಿಭಾಗಗಳು ಮತ್ತು ಉತ್ತಮ ಚಿಕಿತ್ಸಾ-ಸೌಲಭ್ಯಗಳಾಗಬೇಕೆಂದು ಒತ್ತಾಯ ಮಾಡುತ್ತಿದೆ. ಅದಕ್ಕನುಗುಣವಾಗಿ ವಿಸ್ತಾರವಾಗುತ್ತಲೂ ಇದೆ.

ಆಸ್ಪತ್ರೆಯಲ್ಲಿ ಶ್ವೈಟ್ಸರ್ ಇದ್ದಾಗಿನ ಆನಂದಮಯ ವಾತಾವರಣ

ಮಾಯವಾದಂತಿದೆ. ಮೇಕೆ, ಆಡು, ನಾಯಿ, ಕೋಳಿಗಳು ಈಗಲ್ಲಿ ಬೇಕಾಬಿಟ್ಟಿ ತಿರುಗಾಡುವಂತಿಲ್ಲ. ಆಹಾರ-ಸಾಮಗ್ರಿಗಳಿಗಾಗಿ ಬೆಳೆಸಿದ್ದ ತೋಟಗಳು ವಿನಾಶದ ಹಾದಿಹಿಡಿದಿವೆ. ಜೀವೋಪಾಸನ-ತತ್ವ ಅಲ್ಲಿ ಜೀವಂತವಾಗಿರುವ ಲಕ್ಷಣಗಳಿರ ಬಹುದಾದರೂ, ಶ್ವೆಯಿಟ್ಸರ್‌ನಷ್ಟು ಅಕ್ಷರಶಃ ನಡೆಸುವವರು ವಿರಳ. ಶ್ವೆಯಿಟ್ಸರ್ ವಾಸಿಸುತ್ತಿದ್ದ ಕುಟೀರವನ್ನು ಅವನ ಸ್ಮಾರಕವಾಗಿ ಕಾಪಾಡಿಕೊಂಡು ಬರಲಾಗಿದೆ. ಅವನ ಜೀವನ ಮತ್ತು ಸಾಧನೆಗಳನ್ನು ಪ್ರತಿಬಿಂಬಿಸುವ ವಸ್ತು ಪ್ರದರ್ಶನಾಲಯ ಅದಾಗಿದೆ.

ಡಾ॥ ಆಲ್ಬರ್ಟ್ ಶ್ವೆಯಿಟ್ಸರ್ ಜೀವಿಸಿದ್ದಾಗ ಮತ್ತು ಗತಿಸಿದ ನಂತರವೂ ಗೌರವಾದರಗಳ ಪ್ರವಾಹ ಪ್ರಪಂಚದಾದ್ಯಂತ ಮೂಲೆ ಮೂಲೆಗಳಿಂದ ಹರಿದು ಬರುತ್ತಿತ್ತು. ಆದರೆ ಅವನು ತನ್ನ ಜೀವಮಾನವನ್ನೆಲ್ಲಾ ದೀನ ದಲಿತರ ಸೇವೆಗಾಗಿ ಸವೆಸಿದ ಲ್ಯಾಂಬರೀನೆ ಮತ್ತು ಗೇಬನ್ ರಾಷ್ಟ್ರದಲ್ಲಿ ಅವನಿಗೆ ಹೆಚ್ಚಿನ ಗೌರವಾದರ ಗಳಾದ ಸೂಚನೆಗಳು ಕಂಡುಬಂದಿಲ್ಲವೆನ್ನಲಾಗಿದೆ. ಅಲ್ಲೆಲ್ಲೂ ಅವನ ಪ್ರತಿರೂಪದ ಶಿಲಾವಿನ್ಯಾಸಗಳಿಲ್ಲ. ಅವನ ಹೆಸರು ಹೊತ್ತ ಬೀದಿಗಳಿಲ್ಲ, ಸ್ಮಾರಕ ಅಂಚೆ ಚೀಟಿ ಹೊರಡಿಸಿದಂತಿಲ್ಲ, ಎಂಬ ಅಸಮಾಧಾನ ಕೆಲವರಲ್ಲಿದೆ. ಹೊಸದಾಗಿ ದಾಸ್ಯ ವಿಮುಕ್ತಿ ಪಡೆದ ಗೇಬನ್ ಈಗಿನ ಮತ್ತು ಸರ್ಕಾರದವರಲ್ಲಿ ಜನತೆ ನೂರಾರು ವರ್ಷಗಳು ಬಿಳಿಯರು ಅವರನ್ನು ಗುಲಾಮರನ್ನಾಗಿಸಿಕೊಂಡು ಸತಾಯಿಸುತ್ತಿದ್ದ ಕಹಿ ಅನುಭವ ಅವರಿಗಿದ್ದರೂ ಇರಬಹುದು. ಡಾ॥ ಶ್ವೆಯಿಟ್ಸರ್ ಆಫ್ರಿಕಾಕ್ಕೆ ಬಂದಾಗಿನ ಸನ್ನಿವೇಶ, ಅವನ ತ್ಯಾಗಮಯ ಜೀವನ ಮತ್ತು ಸೇವೆಯ ಮಹತ್ವವನ್ನು ಈಗಿನ ತಲೆಮಾರಿನವರು ಮೆಚ್ಚಿಕೊಳ್ಳಲು ಸಾಧ್ಯವಾಗಿರಲಾರದು. ಸ್ಮಾರಕಗಳನ್ನು ರಚಿಸುವುದರಲ್ಲಿ ಅವರ ದೃಷ್ಟಿಕೋನವೇ ಇತರರಿಗಿಂತ ವ್ಯತಿರಿಕ್ತವಾಗಿರಲೂಬಹುದು.

ಆಲ್ಬರ್ಟ್ ಶ್ವೆಯಿಟ್ಸರ್‌ನಂಥವರಿಗೆ ಸ್ಮಾರಕಗಳನ್ನೇರ್ಪಡಿಸುವುದು ಒಂದು ವಿಧದಲ್ಲಿ ನಿರರ್ಥಕವೇ ಸರಿ. ಶ್ವೆಯಿಟ್ಸರ್‌ನ ಜೀವನ ಮತ್ತು ವ್ಯಕ್ತಿತ್ವವೇ ಅವನ ಸ್ಮಾರಕವೆನ್ನುವುದೇ ಸಮಂಜಸ. ಪ್ರಪಂಚದಲ್ಲಿ ಈ ತನಕ ಆಗಿಹೋದ ಬುದ್ಧ, ಏಸು, ಗಾಂಧಿಯಂತಹವರಿಗೆ ಸ್ಮಾರಕಗಳು ಏರ್ಪಟ್ಟಿರುವುದಿದೆ. ಅವರ ಪ್ರತಿಮೆಗಳು ಎಲ್ಲೆಡೆ ಸ್ಥಾಪಿಸಲ್ಪಟ್ಟಿವೆ. ರಸ್ತೆ, ಬೀದಿ, ಬಡಾವಣೆಗಳು ಅವರ ಹೆಸರನ್ನು ಹೊತ್ತು ರಾರಾಜಿಸುತ್ತಿವೆ. ಅವರೆಲ್ಲರ ಸರಳ ಜೀವನಕ್ರಮ ಮತ್ತು ಧ್ಯೇಯೋದ್ದೇಶಗಳನ್ನು ಹಿಂದಿರುಗಿ ನೋಡಿ, ಅಂಥ ಸ್ಮಾರಕಗಳೊಡನೆ ತುಲನೆ ಮಾಡಿದರೆ ಬಹುಶಃ ಅವುಗಳೆಲ್ಲಾ ಅವರುಗಳ ತತ್ವ ಮತ್ತು ಸಾಧನೆಗಳ ಅಣಕುವಾಡಗಳಂತಾಗಿರುವುದನ್ನು ಗಮನಿಸಲು ಸಾಧ್ಯ. ಆಲ್ಬರ್ಟ್ ಶ್ವೆಯಿಟ್ಸರ್ ತೀರಾ ಎಳೆಯ ವಯಸ್ಸಿನಲ್ಲೇ ಏಸು ಕ್ರಿಸ್ತನ ಜೀವನ ಮತ್ತು ಬೋಧನೆಗಳಿಗೆ ಆತ್ಮಸಾಕ್ಷಿಯಾಗಿ ಮಾರುಹೋದವನು.

ಏಸುಕ್ರಿಸ್ತನ ಬಗೆಗೆ ಸುದೀರ್ಘ ಸಂಶೋಧನೆಗಳನ್ನು ನಡೆಸಿ, ಅವನು ನಿರೂಪಿಸಿದ ತತ್ವ ಮತ್ತು ಬೋಧನೆಗಳಿಗೆ ಕ್ರಮೇಣ ಅಂಟಿಕೊಂಡು ಮೂಢನಂಬಿಕೆ, ಅಂಧ ಶ್ರದ್ಧೆ ಮತ್ತು ಕಂದಾಚಾರದ ಸಂಸ್ಕಾರಗಳನ್ನು ಅಲ್ಲಗಳೆದವನು. ಏಸುವಿನ ಸೇವೆ ಮಾಡುವುದೆಂದರೆ ಕೇವಲ ಭಾನುವಾರದ ಪ್ರವಚನಗಳಿಂದಲ್ಲ. ಅವನು ಬೋಧಿಸಿದ ಪ್ರೀತಿ, ಭ್ರಾತೃತ್ವ ಮತ್ತು ಇತರರಿಗೆ ಸಹಾಯ ಮಾಡಬೇಕೆಂಬುದನ್ನು ಪ್ರತ್ಯಕ್ಷವಾಗಿ ಕೃತಿಗಿಳಿಸಿದವನು. ಹಲವು ವಿಷಯಗಳಲ್ಲಿ ಪಾಂಡಿತ್ಯ ಗಳಿಸಿ, ಸುಖ ಜೀವನದ ಹಾದಿಯಲ್ಲಿದ್ದ ಸಮಯದಲ್ಲೇ ಆಫ್ರಿಕಾದ ನೀಗ್ರೋಗಳ ಬವಣೆ ಅರಿವಾದಾಕ್ಷಣ "ಓ ದೇವರೇ ನಾನಲ್ಲಿಗೆ ಬರುತ್ತೇನೆ" ಎಂದು ಕಾಡಿಗೆ ಹೋದವ, ಅತ್ಯಂತ ಕಠಿಣ ಪರಿಸರ ಮತ್ತು ಹತ್ತು ಹಲವು ಎಡರು-ತೊಡರುಗಳನ್ನೆದುರಿಸಿ, ಮಾನವ ಮೃಗಗಳಂತಿದ್ದ ನಿಗ್ರೋಗಳ ನೋವು-ನರಳಾಟಗಳಿಗೆ ಸಾಂತ್ವನ ಗೈದವ, ಭಗವಾನ್ ಏಸು, ಅನುಯಾಯಿಗಳ ಹಲವು ಕಾಯಿಲೆ ಕಸಾಲೆಗಳನ್ನು ವಾಸಿಮಾಡಿ ಪವಾಡಗೈದ ವನೆಂದು ಬೀಗದೆ, ಪ್ರತ್ಯಕ್ಷವಾಗಿ ಅಂಥ ಭಯಾನಕ ಕಾಯಿಲೆಗಳಿಂದ ನರಳುತ್ತಿದ್ದ ಅಸಂಖ್ಯಾತ ದೀನದರಿದ್ರ ಆಫ್ರಿಕರನ್ನು ಶುಶ್ರೂಷೆ ಮಾಡಿ ಬದುಕಿಸಿದವ. ಆಧುನಿಕ ವೈದ್ಯ ವಿಜ್ಞಾನದ ಪ್ರಗತಿಯಿಂದ ಅತ್ಯಂತ ಪರಿಣಾಮಕಾರಿಯಾದ ಔಷಧಗಳು ಮತ್ತು ಚಿಕಿತ್ಸಾ ವಿಧಾನಗಳು ಈಗ ಲಭ್ಯವಿರುವುದಾದರೂ, ಅವುಗಳ ಅತ್ಯಂತ ಅವಶ್ಯಕತೆ ಇರುವವರಿಗೆ ಈಗಲೂ ದೊರೆಯುವುದು ದುಸ್ಸಾಧ್ಯ. ಡಾ॥ ಶ್ವೈಯಿಟ್ಸರ್ ಅಂತಹವರಿರುವ ಕಗ್ಗಾಡಿಗೇ ಹೋಗಿ ತನ್ನ ಜೀವಮಾನವೆಲ್ಲಾ ಅಂಥ ಚಿಕಿತ್ಸೆಗಳನ್ನು ಒದಗಿಸಿದವ. ಇಂಥವನಿಗೆ ಯಾವ ಶಿಲಾವಿನ್ಯಾಸ ಅಥವಾ ಇತರ ತರಹೆಯ ಸ್ಮಾರಕ ಅರ್ಥಪೂರ್ಣವಾಗಬಹುದು? ಅವನ ಆದರ್ಶಗಳನ್ನನುಸರಿಸಿ ಅನಂತರ ಉದ್ಭವಿಸಿದ ಹಲವು ಕಾಡಿನ ಆಸ್ಪತ್ರೆಗಳು – ಹೈಥಿಯಲ್ಲಿ ಡಾ॥ ಮೆಲ್ಲೋನ್ (MELLON)ರ ಆಸ್ಪತ್ರೆ, ಮೆಕ್ಸಿಕೋದಲ್ಲಿ ಡಾ॥ ಬಿಂದರ್ (BINDER) ರ ಆಸ್ಪತ್ರೆ, ಕೋರಿಯಾದಲ್ಲಿ ಡಾ॥ ರ್ಹೀ (RHEE)ಯವರ ಆಸ್ಪತ್ರೆ, ಬ್ರೆಜಿಲ್‌ನಲ್ಲಿ ಹುಮ್‌ಬರ್ಟೋ (HUMERTO), ಆಸ್ಪತ್ರೆ ಲಾವೋಸ್‌ಲ್ಲಿ ಡಾ॥ ಟಾಮ್ ಡೂಲೀ (TOM DOOLY) ಆಸ್ಪತ್ರೆ, ಕರ್ನಾಟಕದಲ್ಲಿ ಗಿರಿಜನ ಸೋಲಿಗರಿಗಾಗಿ ಬಿಳಿಗಿರಿ ರಂಗನ ಬೆಟ್ಟದಲ್ಲಿ ಡಾ॥ ಎಚ್. ಸುದರ್ಶನ್ ನಡೆಸುತ್ತಿರುವ "ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ"ಗಳಂಥ ಸಾವಿರಾರು "ಲ್ಯಾಂಬರೀನೆ"ಗಳು ಮಾತ್ರ ಡಾ॥ ಆಲ್ಬರ್ಟ್ ಶ್ವೈಯಿಟ್ಸರ್‌ನ ನಿಜವಾದ ಸ್ಮಾರಕಗಳಾಗಬಲ್ಲವು. ಜತೆಗೆ ಡಾ॥ ಆಲ್ಬರ್ಟ್ ಶ್ವೈಯಿಟ್ಸರ್‌ನ ನೆನಪು ಮತ್ತು ಆದರ್ಶಗಳನ್ನು ಸದಾ ಹಸಿರಾಗಿಸಲು ಅನೇಕ ಪುದುವಟ್ಟುಗಳು ಪ್ರಪಂಚದಾದ್ಯಂತ ಕೆಲಸ ಮಾಡುತ್ತಿವೆ. ಅವನಂತೆ ಮಾನವೀಯ ಮೌಲ್ಯಗಳನ್ನು ಪಾಲಿಸುವವರು, ಜೀವರಾಶಿಗಳಿಗೆ ಹಿಂಸೆಯಾಗದಂತೆ

ಜೀವದಯಾ ತತ್ವಗಳನ್ನು ಪ್ರತಿಪಾದಿಸುವವರು, ನಿಸ್ವಾರ್ಥ ವೈದ್ಯಕೀಯ ಸೇವೆಯಲ್ಲಿ ತೊಡಗಿರುವವರೂ ಹಾಗೂ ಸಂಗೀತ-ಕಲೆಯಲ್ಲಿ ನೈಪುಣ್ಯತೆ ಪಡೆದವರನ್ನು ಪ್ರತಿವರ್ಷ ಗುರುತಿಸಿ ಸನ್ಮಾನಿಸುವ ಕಾರ್ಯ ಈ ಪುದವಟ್ಟುಗಳು ಮಾಡುತ್ತಿವೆ.

ಈ ಎಲ್ಲಾ ಸ್ಮಾರಕಗಳಿಗಿಂತಲೂ ಆಲ್ಬರ್ಟ್ ಶ್ವೆಯಿಟ್ಸರ್ ತೀರಾ ಎಳೆಯ ವಯಸ್ಸಿನಿಂದಲೂ ಸಾಯುವ ತನಕ ಒಳ್ಳೆಯ ಆದರ್ಶದ ಹಾದಿಯಲ್ಲೇ ನಡೆಸಿದ ಜೀವನ ಕ್ರಮ ಎಲ್ಲರಿಗೂ ಅನುಕರಣೀಯವಾಗಬೇಕು. ನಿಜ, ಅವನಿಗಿದ್ದ ಧಾರ್ಮಿಕ ಪರಿಸರ, ಶೈಕ್ಷಣಿಕ ಮಾರ್ಗದರ್ಶನ, ಸಂಗೀತಮಯ ವಾತಾವರಣ ಮುಂತಾದವುಗಳ ತಳಹದಿ ಬಹಳ ಮಂದಿಗೆ ಇರಲಾರದು. ಜೊತೆಗೆ ಅವನಲ್ಲಿದ್ದ ಉತ್ಸಾಹ, ಶ್ರದ್ಧೆ, ಒಳ್ಳೆಯ ಆರೋಗ್ಯ, ದೃಢ ಮನಸ್ಸು ಇತ್ಯಾದಿಗಳು ದೊರಕಿದ ಅವಕಾಶ, ಮಾರ್ಗದರ್ಶನಗಳನ್ನು ಉಪಯೋಗಿಸಿಕೊಂಡು ತನ್ನ ಗುರಿಗಳನ್ನು ಸಾಧಿಸಲು ಸಾಧ್ಯವಾಯಿತೆಂದು ಅವನೇ ಹೇಳಿಕೊಂಡಿದ್ದಾನೆ. ಭಾವೋದ್ರಿಕ್ತ ಯುವಕ ಆಲ್ಬರ್ಟ್, ಸಹಪಾಠಿಗಳಾದ ಇತರ ಬಡಮಕ್ಕಳಿಗಿಲ್ಲದ ಉಣ್ಣೆ ಕೋಟನ್ನು ತಾನೂ ಧರಿಸುವುದನ್ನು ನಿರಾಕರಿಸುತ್ತಾನೆ. ಸತ್ಯಶೋಧನೆಗಾಗಿ ಸದಾ ವಾದಿಸುತ್ತಾನೆ. ಸಂಗೀತ ಶಾಸ್ತ್ರದ ಆಳವನ್ನು ಒಳಹೊಕ್ಕು ಪರಿಶೋಧಿಸುವ ಉತ್ಸಾಹ, ಏಸು, ವ್ಯಾಗ್ನರ್, ಗಯಟೆಯಂಥ ಮಹಾಪುರುಷರ ವೀರಾರಾಧನೆ (HERO-WORSHIP), ಮಾನವ-ಮನಸ್ಸಿನ ಆವೇಗದ ಮೂಲವನ್ನು ಕಂಡುಹಿಡಿಯುವ ಕಾತರ, ತನ್ನ ನಂಬಿಕೆಗಳನ್ನು ಬದಲಾಯಿಸದಷ್ಟು ಸ್ಥಿರ ಮನಸ್ಸು ಬಹಳ ಜನರಲ್ಲಿರಲಾರದು. ತಮ್ಮ ದೈಹಿಕ ಮತ್ತು ಮಾನಸಿಕ ದೌರ್ಬಲ್ಯಗಳಿಗೆ ಶರಣಾಗದೇ ಜೀವನದ ಸಮಸ್ಯೆಗಳನ್ನು ದೃಢತೆಯಿಂದ ಎದಿರಿಸುವ ಸ್ಥೈರ್ಯವಿದ್ದವರು ಬಹುಶಃ ಗಾಂಧಿ ಮತ್ತು ಶ್ವೆಯಿಟ್ಸರ್ ಹೊರತುಪಡಿಸದರೆ ಬಹಳ ಮಂದಿ ಸಿಗಲಾರರು. ಒಂದೊಂದೇ ವಿಷಯದಲ್ಲಿ ಪ್ರಾವಿಣ್ಯತೆ ಪಡೆಯುವುದು ಎಷ್ಟೋ ಜನರಿಗೆ ಅಸಾಧ್ಯವೆನಿಸುವಾಗ ತತ್ವ-ಶಾಸ್ತ್ರದ ಪರಿಣತಿಯ ಜತೆಗೇ, ಸಂಗೀತ ವಿದ್ಯೆಯಲ್ಲಿ ಉತ್ತುಂಗ ಸಾಧನೆ; ಆಧ್ಯಾತ್ಮ, ಮತ ಧರ್ಮ ಬೋಧಿಸುವ ಪಾದ್ರಿಯಾಗಿರುವಾಗಲೇ ದೇಹದ ಸ್ವಾಸ್ಥ್ಯ ಕಾಪಾಡುವ ವೈದ್ಯ-ವಿದ್ಯಾಪಾರಂಗತನಾಗುವುದು; ಧರ್ಮಶಾಸ್ತ್ರ ತತ್ವಶಾಸ್ತ್ರಗಳು ಕರತಲಾಮಲಕ ವಾದಂತೆ ದೈಹಿಕ ಶ್ರಮದಲ್ಲೂ ಮುಂಚೂಣಿಯ ಕೆಲಸಗಾರನಾಗುವುದು, ಆಲ್ಬರ್ಟ ಶ್ವೆಯಿಟ್ಸರ್‌ನಂಥ ಉದ್ದಾಮ ವ್ಯಕ್ತಿಗೇ ಸಾಧ್ಯವಾಗಬಹುದಷ್ಟೇ. ಆದರೂ ಅತ್ಯಂತ ಸರಳ ವ್ಯಕ್ತಿತ್ವ, ಬಾಹ್ಯಾಡಂಬರಗಳಿಗೆ ಬಲಿಯಾಗದೇ ತೀರಾ ಸಾಮಾನ್ಯ ಉಡುಪು ಪ್ರಾಯದ ಕಾಲದಲ್ಲಿ ಗನ್ಸ್‌ಬಾಕ್‌ನಲ್ಲಿ ಹೊಲಿಸಿದ ಉದ್ದನೆಯ ಕರಿ ಕೋಟು, ತಂದೆಯಿಂದ ಬಂದಿದ್ದ ಬಿಲ್ಲಾಕಾರದ ಕಂಠ-ವಸ್ತ್ರ ಇವನ್ನು ಜೀವಮಾನವೆಲ್ಲಾ ಧರಿಸಿದ್ದು, ಮೂರು ಅಥವಾ ನಾಲ್ಕನೆಯ ದರ್ಜೆಯ ರೈಲ್ವೇ ಪ್ರಯಾಣ ಸಮ್ಮ

ಗಾಂಧಿ ಜೀವನದ ಮಾದರಿ. ''ಬಿಳಿಯರ ಗಾಂಧಿ'' ಎಂದು ಕೆಲವರು ಸಂಬೋಧಿಸುತ್ತಿದ್ದುದೆಷ್ಟು ಅರ್ಥಪೂರ್ಣ! ಕೃತಕ ಘನತೆಯ ಸೋಗು ಎಂದೂ ಅವನ ಹತ್ತಿರ ಸುಳಿಯಲಿಲ್ಲ.

ಸಾಂಪ್ರದಾಯಿಕ ಚಿಂತನೆ ಮತ್ತು ತರ್ಕಬದ್ಧ ವಿಚಾರಗಳನ್ನು ಸಹಜ ಪ್ರವೃತ್ತಿ (INSTINCT) ಸಾಮಾನ್ಯವಾಗಿ ಎದಿರುಸುತ್ತದೆ ಎನ್ನುತ್ತಾರೆ. ಅದೇ ರೀತಿ ವೈಜ್ಞಾನಿಕ ವಿಚಾರಗಳಿಗೂ, ಕಲಾತ್ಮಕ ವಿಷಯಗಳಿಗೂ, ಕ್ರಾಂತಿಕಾರಕ ವಿಚಾರಗಳ ಹಾಗೂ ಪರಂಪರಾಗತ ಅಭ್ಯಾಸಗಳ ನಡುವೆಯೂ ಈ ತೆರನ ದ್ವಂದ್ವಗಳಿರುತ್ತವೆ. ತರ್ಕ ಮತ್ತು ಸಹಜ ಪ್ರವೃತ್ತಿಗಳೆರಡೂ ಮನಸ್ಸಿನ ಏಕಾಗ್ರತೆಯಿಂದ ಉದ್ಭವಿಸುತ್ತವೆ. ಸ್ಫೂರ್ತಿ ಮತ್ತು ಕಲ್ಪನೆಯ ಪರಿಣಾಮಗಳಿಂದ, ವೈಜ್ಞಾನಿಕ ಮತ್ತು ಕಲಾತ್ಮಕ ವಿಚಾರಗಳು ಪ್ರಕಟವಾಗುತ್ತವೆ. ತಾತ್ವಿಕಾಧಾರದ ತಳಹದಿ ಇಲ್ಲದೆ ಪ್ರಯೋಗಗಳು ನಡೆಯಲು ಸಾಧ್ಯವಿಲ್ಲ. ಹಾಗೇ ಕ್ರಾಂತಿಕಾರಕ ಬದಲಾವಣೆಗಳಿಗೆ ಅವಕಾಶಗಳಿರದ ಸಮಾಜದಲ್ಲಿ ಪರಂಪರೆ ಪೆಡಸಾಗುತ್ತದೆ, ಪ್ರಗತಿ ಕುಂಠಿತವಾಗುತ್ತದೆ. ಇವುಗಳೆಲ್ಲದರ ಪರಸ್ಪರ ಪ್ರಭಾವಗಳ ಮಿಲನವೇ ಆರೋಗ್ಯಕರ ಸಮಾಜ ವ್ಯವಸ್ಥೆಯೆನ್ನಬಹುದು. ಬಹುಪಾಲು ಜನ ಇಂಥ ಒಂದೆರಡು ವಿಷಯಗಳ ಬಗೆಗೆ ಸ್ವಾಭಾವಿಕವಾಗಿ ತಮ್ಮ ಒಲವನ್ನು ತೋರಿಸಬಹುದು. ಆದರೆ ಡಾ॥ ಆಲ್ಬರ್ಟ್ ಶ್ವೆಯಿಟ್ಸರ್ ಒಬ್ಬನಲ್ಲೇ ಈ ಎಲ್ಲಾ ಪ್ರಭಾವಗಳೂ ಮೇಳವಿಸಿ ಅವನ ವ್ಯಕ್ತಿತ್ವ ರೂಪುಗೊಂಡಿತ್ತೆನ್ನಬಹುದು. ಆಳವಾದ ಚಿಂತನೆ ಮತ್ತು ಚುರುಕು ಬುದ್ಧಿ, ಮನಸ್ಸಿನ ಅಂತರಾಳವನ್ನು ಪ್ರವೇಶಿಸಿ ಈ ದ್ವಂದ್ವಗಳನ್ನು ಅರ್ಥೈಸಿ, ಹೊಂದಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದೇ ಡಾ॥ ಆಲ್ಬರ್ಟ್ ಶ್ವೆಯಿಟ್ಸರ್‌ನ ಮಹೋನ್ನತ ಆದರೂ ಸರಳ ವ್ಯಕ್ತಿತ್ವದ ಗುಟ್ಟೇನ್ನಬಹುದು.

ಆಲ್ಬರ್ಟ್ ಶ್ವೆಯಿಟ್ಸರ್‌ನ ಜೀವೋಪಾಸನ ತತ್ವ ಉದ್ಭವಿಸಿದ್ದು ಇಂತಹ ಆಳವಾದ ಚಿಂತನೆಯ ಪರಿಣಾಮದಿಂದಲೇ. ಇಡೀ ಜಗತ್‌ಸೃಷ್ಟಿಯ ಮೂಲೋದ್ದೇಶದ ಅರಿವು, ಅದರ ಅಳಿವು, ಉಳಿವಿನ ಬಗೆಗೆ ದೀರ್ಘ-ಚಿಂತನೆಗೊಳಗಾದ ಸಮಯದಲ್ಲಿ ಮನುಷ್ಯನೂ ಸೇರಿದಂತೆ ಎಲ್ಲಾ ಜೀವರಾಶಿಗಳೂ ಪರಸ್ಪರ ಹಿಂಸೆಯಲ್ಲಿ ತೊಡಗಿಕೊಳ್ಳದೆ ಒಬ್ಬರನ್ನೊಬ್ಬರು, ಪ್ರೀತಿ, ವಿಶ್ವಾಸ, ಗೌರವ ಆದರಗಳಿಂದ ನೋಡುವ ಪ್ರವೃತ್ತಿಯನ್ನು ರೂಢಿಸಿಕೊಳ್ಳುವುದೇ 'ಜೀವೋಪಾಸನೆ' - ಗಾಂಧೀ ಪ್ರತಿಪಾದಿಸಿದ ನಮ್ಮ ಧರ್ಮಗಳ ತಿರುಳಾದ ''ಅಹಿಂಸಾ ಪರಮೋ ಧರ್ಮಃ'' ತತ್ವದ ಪ್ರತಿರೂಪ.

ಜೀವಮಾನವೆಲ್ಲಾ ಕಗ್ಗಾಡಿನಲ್ಲಿದ್ದುಕೊಂಡು ಸದಾ ಒಂದಲ್ಲ ಒಂದು ಕಾರ್ಯದಲ್ಲಿ ಮಗ್ನನಾಗಿರುತ್ತಿದ್ದರೂ ವಿಶ್ವಮಾನ್ಯತೆ ಗಳಿಸಲು ಸಾಧ್ಯವಾದ ಆಲ್ಬರ್ಟ್

ಶ್ವೈಯಿಟ್ಸರ್‌ನ ಜೀವನ ಕ್ರಮ ಊಹೆಗೆ ನಿಲುಕಲಾರದ್ದು. ನಿಜವಾದ ಜೀವನ ಕಲೆಯನ್ನು ಅರಿತು ಅದರಂತೆ ನಡೆದ ಪ್ರತಿಭಾವಂತ ಅವನು. ಸಹಜ ಪ್ರವೃತ್ತಿ, ತರ್ಕಬದ್ಧ ವಿಚಾರಶೀಲತೆ ಹಾಗೂ ದೃಢನಿರ್ಧಾರ ತೆಗೆದುಕೊಳ್ಳುವ ವ್ಯಕ್ತಿತ್ವ ಅವನಲ್ಲಿದ್ದುದು ಇದಕ್ಕೆಲ್ಲಾ ಸಹಕಾರಿಯಾಯಿತು. ಜೀವನದ ಮೊದಲು ಮೂರು ದಶಕಗಳವರೆಗೆ ಧಾರ್ಮಿಕ ಮತ್ತು ಸಾಮಾಜಿಕ ರಂಗಗಳಲ್ಲಿ ಕಾರ್ಯೋನ್ಮುಖನಾಗಿದ್ದು, ಅನಂತರ ಸಾರ್ವಜನಿಕ ಹಾಗೂ ಜನೋಪಯೋಗಿ ಕೆಲಸಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುವುದೆಂದು ಎಳೆಯ ವಯಸ್ಸಿನಲ್ಲೇ ತೀರ್ಮಾನಿಸಿಕೊಂಡಿದ್ದನೆಂದು ಶ್ವೈಯಿಟ್ಸರ್ ತನ್ನ ಆತ್ಮಕಥೆಯಲ್ಲಿ ಹೇಳಿಕೊಂಡಿದ್ದಾನೆ. ಮೂವತ್ತು ವರ್ಷಗಳಾಗುತ್ತಿದ್ದಂತೆ, ಅವನಿಗೆ ಮೊದಲು ಕೇಳಿಸಿದ ಆತ್ಮದ ಕರೆಗೆ ಓಗೊಟ್ಟವನು ಹಿಂದಿರುಗಿ ನೋಡಲಿಲ್ಲ. ನಮ್ಮ ಪ್ರಾಚೀನ ಋಷಿ-ಮುನಿಗಳು ಆಧ್ಯಾತ್ಮ ಗುರಿಗಳಿಗಾಗಿ ತಮ್ಮನ್ನೇ ಮುಡಿಪಾಗಿಟ್ಟುಕೊಳ್ಳುವಂತೆ ಸಾಧನೆಗಿಳಿದವನು ಆಲ್ಬರ್ಟ್ ಶ್ವೈಯಿಟ್ಸರ್. ಸೇವಾ ಕಾರ್ಯಗಳಲ್ಲಿ ಈಗ ಅಪರೂಪವಾಗಿರುವ ನಿಸ್ವಾರ್ಥತೆ, ಏಕಾಗ್ರ ಚಿತ್ತತೆಗಳಿಂದ ದೀನದಲಿತರ ಸೇವೆಯಲ್ಲಿ ತನ್ನನ್ನು ತೊಡಗಿಸಿಕೊಂಡನು. ಹಿಡಿದಿರುವ ಕೆಲಸವನ್ನು ಯಾರು ಹೊಗಳಲೀ ಇಲ್ಲವೇ ತೆಗಳಲೀ ತನ್ನ ನಿಯೋಜಿತ ಮಾರ್ಗವನ್ನು ಎಳ್ಳಷ್ಟೂ ಬದಲಾಯಿಸದ ದಿಟ್ಟನಿರ್ಧಾರ ಅವನದಾಗಿತ್ತು. ಅವನ ಕಲಿಕೆ ಹಾಗೂ ಸಾಧನೆಗಳಿಗೆ ಮಿತಿಯೆಂಬುದೇ ಇರಲಿಲ್ಲ. ಅವನಿಗಿದ್ದ ಮಿತಿಯಿಂದರೆ ಕಾಲದ್ದೊಂದೇ. ಪ್ರತಿದಿನವೂ ಇನ್ನೂ ಹೆಚ್ಚು ಸಮಯ ಸಿಗುವುದಿಲ್ಲವಲ್ಲ ಎಂಬುದೊಂದೇ ಅವನಿಗಿದ್ದ ವ್ಯಥೆ! ಡಾ॥ ಆಲ್ಬರ್ಟ್ ಶ್ವೈಯಿಟ್ಸರ್‌ನಂಥ ಬಹುಮುಖ ಪ್ರತಿಭೆಯ, ಸರ್ವತೋಮುಖ ಜೀವನದ ಪರಿಚಯ ಇಂತಹದೊಂದು ಕಿರು ಹೊತ್ತಗೆಯಲ್ಲಿ ಮೂಡಿಬರುವುದು ಅಸಾಧ್ಯ. ಅವನು ಪರಿಣತಿ ಪಡೆದಿದ್ದ ಧಾರ್ಮಿಕ, ತಾತ್ವಿಕ, ಸಂಗೀತ, ವೈದ್ಯಕೀಯ ಹಾಗೂ ರಾಜಕೀಯ ವಿಷಯಗಳಲ್ಲಿ ಪಾಂಡಿತ್ಯವಿದ್ದವರು ಇಂಥ ಹಲವಾರು ಗ್ರಂಥಗಳನ್ನು ಬರೆಯುವಷ್ಟು ವಿಪುಲ ಅವಕಾಶಗಳಿವೆ. ಹಲವಾರು ಭಾಷೆಗಳಲ್ಲಿ ಈಗಾಗಲೇ ಅಂಥ ಲೇಖನಗಳು, ಗ್ರಂಥಗಳೂ ಹೇರಳವಾಗಿವೆ. ಜತೆಗೆ ಆತ್ಮಕಥೆ, ಧರ್ಮ ಹಾಗೂ ನಾಗರಿಕತೆಯ ಬಗೆಗೆ ಹೇರಳವಾಗಿ ಅವನು ಬರೆದ ವ್ಯಾಖ್ಯಾನ ಗ್ರಂಥಗಳಿವೆ. ಕೇವಲ ವೈದ್ಯಕೀಯ ಸೇವೆಯಲ್ಲಿನ ಅವನ ಸಾಧನೆಗಳ ಇಣುಕು ನೋಟವನ್ನು ಕೊಡಲು ಮಾತ್ರ ಇಲ್ಲಿ ಪ್ರಯತ್ನಿಸಲಾಗಿದೆ. ಡಾ॥ ಶ್ವೈಯಿಟ್ಸರ್‌ನ ಸಂಪೂರ್ಣ ವ್ಯಕ್ತಿತ್ವವನ್ನರಿಯಲು ಅಂತಹ ಗ್ರಂಥಗಳ ಅವಲೋಕನದಿಂದ ಸಾಧ್ಯವಾಗಬಹುದು.

ಪ್ರಪಂಚ ಈಗ ಎದುರಿಸುತ್ತಿರುವ ಸಮಸ್ಯೆಗಳ ಪರಿಹಾರಕ್ಕೆ ಡಾ॥ ಶ್ವೈಯಿಟ್ಸರ್‌ನ ತತ್ವಗಳು ಎಷ್ಟರಮಟ್ಟಿಗೆ ಸಹಕಾರಿಯಾಗಬಹುದೆಂಬ ಪ್ರಶ್ನೆ ಏಳದಿರಲಾರದು.

ಜೀವಿಸಿದ್ದಾಗಲೇ ಅವನು ಧಾರ್ಮಿಕ, ತಾತ್ವಿಕ ವಿಷಯಗಳಿಗೆ ತಳೆಯುತ್ತಿದ್ದ ವೈಚಾರಿಕ ನಿಲುವುಗಳಿಗೆ ವಿರೋಧ ವ್ಯಕ್ತಪಡಿಸುವವರೂ ಇದ್ದರು. ಜೀವೋಪಾಸನಾ ತತ್ವಗಳನ್ನೂ ಸರಿಯಾಗಿ ಅರ್ಥೈಸಿಕೊಳ್ಳದೇ ಅದನ್ನು ಅಲ್ಲಗಳೆದವರೂ ಇದ್ದರು. ವೈದ್ಯಕೀಯ ಕ್ಷೇತ್ರದಲ್ಲೂ, ಹೊಸ ಬದಲಾವಣೆಗಳಿಗೆ ಹೊಂದಿಕೊಳ್ಳಲಾರದ ಹಳೇ ಕಂದಾಚಾರ ಪ್ರವೃತ್ತಿಯವನೆಂದು ದೋಷಾರೋಪಣೆಗಳಿಗೂ ಗುರಿಯಾಗಿದ್ದ. ಹಾಗಿದ್ದಲ್ಲಿ ಶ್ವೈಯಿಟ್ಸರ್ ಮತ್ತು ಅವನ ತತ್ವಗಳು ಈಗೆಷ್ಟು ಪ್ರಸ್ತುತವೆಂಬ ಅನುಮಾನ ಉದ್ಭವಿಸುವುದು ಸ್ವಾಭಾವಿಕವಾದರೂ, ಅವನ ಮಾರ್ಗದರ್ಶನ ಈಗ ಎಂದಿಗಿಂತ ಹೆಚ್ಚಿದೆಯೆಂಬುದರಲ್ಲಿ ಸಂಶಯವಿಲ್ಲ.

ಮೊದಲಿಗೆ, ಧಾರ್ಮಿಕ ಮತ್ತು ತಾತ್ವಿಕ ವಿಷಯಗಳಲ್ಲಿ ಅವನ ವೈಚಾರಿಕ ನಿಲುವು ಈಗೆಷ್ಟು ಪ್ರಸ್ತುತವೆನ್ನುವುದನ್ನು ನೋಡೋಣ. ಪ್ರಪಂಚದೆಲ್ಲೆಡೆ ಧರ್ಮ-ಸಂಸ್ಥಾಪಕ ಪ್ರವಾದಿಗಳು ಬೋಧಿಸಿದರೆನ್ನಲಾದ ತತ್ವಗಳನ್ನು ಈಗಲೂ ಅಷ್ಟೇ ಬಿಗಿಯಾಗಿ ಕೆಲಸಾರಿ ಅವುಗಳಿಗೆ ತಮ್ಮದೇ ಆದ ವ್ಯಾಖ್ಯಾನಗಳನ್ನಿತ್ತು, ಮುಗ್ಧ ಅನುಯಾಯಿ ಗಳನ್ನು ಮೂಢನಂಬಿಕೆ ಅಂಧ-ಶ್ರದ್ಧೆಯ ದಾಸರನ್ನಾಗಿ ಮಾಡುತ್ತಿರುವುದು ಸರ್ವವೇದ್ಯ. ಅವರು ತಮ್ಮ ತಮ್ಮ ಧರ್ಮಗಳೇ ಸರ್ವಶ್ರೇಷ್ಠವಾದವುಗಳೆಂದು ಒಬ್ಬರನ್ನೊಬ್ಬರ ಮೇಲೆ ಎತ್ತಿ ಕಟ್ಟಿ ಪ್ರಪಂಚಾದ್ಯಂತ ಮತೀಯ ಗಲಭೆಗಳಿಗೆ ಕಾರಣ ರಾಗುತ್ತಿದ್ದಾರೆ. ಮತಧರ್ಮದ ಬೋಧನೆಗಳಿಗೆ ಅರ್ಥವಿಲ್ಲದ ಸಂಸ್ಕಾರಗಳನ್ನು ತಗುಲಿಸಿ ಜನರಿಗೆ ಮೋಸಮಾಡುತ್ತಿದ್ದಾರೆ. ಅದರಿಂದ ಶ್ವೈಯಿಟ್ಸರ್ ಮತ ಧರ್ಮಗಳ ನಿಜವಾದ ಅರ್ಥವನ್ನು ಶೋಧಿಸಿ, ವೈಚಾರಿಕವಾಗಿ ಅವುಗಳನ್ನು ಪ್ರತಿಪಾದಿಸುತ್ತಿದ್ದ ರೀತಿ, ಅಂದಿಗಿಂತಲೂ ಈಗ ಬಹಳಷ್ಟು ಪ್ರಸ್ತುತವೆನ್ನಿಸದಿರಲಾರದು.

ಪ್ರಪಂಚಾದ್ಯಂತ ನಡೆಯುತ್ತಿದ್ದ ಯುದ್ಧ ಮತ್ತಿತರ ಹಿಂಸಾಚಾರಗಳ ಬಗೆಗೆ ಶ್ವೈಯಿಟ್ಸರ್ ತನ್ನ ಜೀವಿತಕಾಲದಲ್ಲಿ ಬಹಳಷ್ಟು ಮರುಗಿದವ. ಶಾಂತಿದೂತ ಏಸುಕ್ರಿಸ್ತನ ಅನುಯಾಯಿಗಳೇ ತಮ್ಮತಮ್ಮೊಳಗೆ ಹಿಂಸಾಕೃತ್ಯಗಳಲ್ಲಿ ತೊಡಗಿರುತ್ತಿದ್ದುದು ಅವನನ್ನು ಯೋಚಿಸುವಂತೆ ಮಾಡಿತ್ತು. ವಿವಿಧ ರಾಷ್ಟ್ರಗಳ ಮುತ್ಸದ್ದಿಗಳು ತಮ್ಮ ನೆರೆಹೊರೆಯ ದೇಶದವರನ್ನು ಭ್ರಾತೃತ್ವ, ಪ್ರೀತಿ, ವಿಶ್ವಾಸಗಳಿಂದ ನೋಡುವ ಸಹಜ ಪ್ರವೃತ್ತಿಯನ್ನು ಬೆಳೆಸಿಕೊಂಡರೆ ಈಗ ನಡೆಯುತ್ತಿರುವ ಹಿಂಸಾಕಾಂಡ ಕೊನೆಯಾಗ ಬಹುದು. ಈಗ ವಿಶ್ವಾದ್ಯಂತ ಹಲವು ದೇಶಗಳಲ್ಲಿ ಪರಸ್ಪರ ಗುಂಪುಗಳ ನಡುವೆ ಇರುವ ಹಗೆತನ, ಅನಾದರಣೆ, ಪ್ರಾಂತೀಯ ಅಥವಾ ಮತೀಯ ಭಾವನೆಗಳು ತಾಂಡವ ವಾಡುತ್ತಿವೆ. ಭಯೋತ್ಪಾದಕರ ಗುಂಡಿನೇಟುಗಳಿಂದಾಗುತ್ತಿರುವ ವಿನಾಶ ಕಾರ್ಯಗಳಿಗೆ ಸಂಕುಚಿತ ಧಾರ್ಮಿಕ ಭಾವನೆಗಳೇ ಕಾರಣವಲ್ಲವೆ? ಅದೆಷ್ಟು ಜನ ನಿರ್ದೋಷಿಗಳು ಪ್ರತಿದಿನ ಗುಂಡಿನೇಟುಗಳಿಗೆ ಬಲಿಯಾಗುತ್ತಿದ್ದಾರೆ! ಬಹುಶಃ ಶ್ವೈಯಿಟ್ಸರ್‌ನ ಹಾಗೆ

ಮತ ಧರ್ಮಗಳ ನಿಜವಾದ ವೈಚಾರಿಕ ಭಾವನೆಗಳನ್ನು ಇವರೆಲ್ಲೆಲ್ಲಾ ಮೂಡಿಸಿ, ಜೀವೋಪಾಸನ-ತತ್ವಗಳನ್ನನುಸರಿಸುವಂತೆ ಮಾಡಲು ಸಾಧ್ಯವಾದಲ್ಲಿ ಇಂಥ ಸಮಸ್ಯೆಗಳೂ ಕೊನೆಯಾಗಬಹುದಲ್ಲವೇ? ಶ್ವೆಯಿಟ್ಸರ್‌ನ ಕಾಲದಲ್ಲೇ ಆರಂಭವಾದ ಪರಮಾಣು ಬಾಂಬುಗಳು ಮತ್ತು ವಿಕಿರಣತೆಯ ಸಮಸ್ಯೆ ಈಗ ಬೃಹದಾಕಾರವಾಗಿ ಬೆಳೆದು ನಿಂತ ಪೆಡಂಭೂತವಾಗಿವೆ. 'ತಾರಾ ಸಮರ' ಇಂದೋ ನಾಳೆಯೋ ಜರುಗಿ ಪ್ರಪಂಚ ನಾಶವಾಗಬಹುದೆಂಬ ಶಂಕೆ ಜನರನ್ನಾವರಿಸಿದೆ. ಡಾ॥ ಶ್ವೆಯಿಟ್ಸರ್ ಕೇವಲ ತನ್ನ ನೈತಿಕ ಬಲದಿಂದ ಆಗಾಗ್ಗೆ ನೀಡುತ್ತಿದ್ದ ಹೇಳಿಕೆಗಳಿಂದಲೇ ಆ ಸಮಯದಲ್ಲಿ ಪ್ರಾಯೋಗಿಕ ಪರಮಾಣು ಪರೀಕ್ಷೆಗಳ ನಿಷೇಧದ ಒಪ್ಪಂದವೇರ್ಪಡು ವುದಕ್ಕೆ ಸಹಕಾರಿಯಾಗಿದ್ದನೆಂದರೂ ತಪ್ಪಾಗಲಾರದು. ಈಗೊಬ್ಬ ಗಾಂಧಿ ಅಥವಾ ಶ್ವೆಯಿಟ್ಸರ್ ಮತ್ತೆ ಹುಟ್ಟಿ ಬರಬಾರದೇ ಎಂಬ ಕಾತರತೆ ಇಡೀ ಮಾನವಕುಲದಲ್ಲಿದೆ.

ಶತ ಶತಮಾನಗಳುದ್ದಕ್ಕೂ ಭಯಾನಕ ರೋಗ ರುಜಿನಗಳಿಂದ ನರಳಿ ಸಾಯುತ್ತಿದ್ದ ಆಫ್ರಿಕನ್ನರಿಗೆ ತೀರಾ ಸರಳ ರೀತಿಯ ವೈದ್ಯಕೀಯ ನೆರವು ನೀಡಿದ್ದರಿಂದಲೇ ಡಾ॥ ಶ್ವೆಯಿಟ್ಸರ್ ಬಹುಮಟ್ಟಿಗೆ ಪ್ರಖ್ಯಾತಿ ಪಡೆದದ್ದು. ಲ್ಯಾಂಬರೀನೆಯಲ್ಲಿ ಅವನು ಯಾವುದೇ ಒಂದು ರೋಗದ ಮೂಲವನ್ನು ಕಂಡು ಹಿಡಿಯಲಿಲ್ಲ; ಹೊಸದೊಂದು ಸಂಜೀವಿನಿಯಂಥ ಔಷಧ ಸಂಶೋಧನೆ ಮಾಡಲಿಲ್ಲ; ಯಾರೂ ಮಾಡದೇ ಇದ್ದ ಚಮತ್ಕಾರಿಕ ಶಸ್ತ್ರಚಿಕಿತ್ಸೆ ಮಾಡಲಿಲ್ಲ; ಆದರೂ ಅವನು ಲ್ಯಾಂಬರೀನೆಯಲ್ಲಿ ಜರುಗಿಸಿದ 'ಪವಾಡ' ಇತ್ತೀಚಿನ ಯಾವುದೇ ಸಂಶೋಧನೆಗಿಂತ ಕಡಿಮೆಯಾದದ್ದಲ್ಲವೆಂದು ಘಂಟಾಘೋಷವಾಗಿ ಹೇಳಬಹುದು. ಹಾಗೆ ನೋಡಿದರೆ ಅವನ ಕಾಲಕ್ಕಿಂತಲೂ ಈಗ ಎಲ್ಲಾ ಕಾಯಿಲೆಗಳ ಗುಟ್ಟುಗಳು ಬಯಲಾಗಿವೆ. ''ಮಾಂತ್ರಿಕ ಪರಿಣಾಮ'' ಬೀರುವ ಮದ್ದುಗಳು, ಚಿಕಿತ್ಸಾ ವಿಧಾನ ಗಳಿವೆ. ಆದರೆ ಪ್ರಪಂಚದೆಲ್ಲೆಡೆ ತೀರಾ ಸಾಮಾನ್ಯ-ಕಾಯಿಲೆಗಳಿಂದ ಲಕ್ಷಾಂತರ ಜನ ಪ್ರತಿದಿನ ನರಳಿ ಸಾಯುವುದು ತಪ್ಪಿಲ್ಲ. ಅವನನ್ನು ಆ ಸಮಯದಲ್ಲಿ ಹಳೇ ಕಂದಾಚಾರದ ವೈದ್ಯನೆಂದು ತೆಗಳಿದರೂ, ಈಗಲೂ ಅವನು ಪ್ರಸ್ತುತ ನಾಗುತ್ತಾನೆ. ಪ್ರಪಂಚದ ಮೂಲೆಯೊಂದರಲ್ಲಿ ಕಾಯಿಲೆಗಳಿಂದ ನರಳುವವರ ಪೊದೆಗಳಿಗೇ ಹೋಗಿ, ಅವರ ಪರಿಸರಗಳಿಗನುಸಾರ ಔಷಧಿಗಳನ್ನು ನೀಡಿ ಶುಶ್ರೂಷೆಮಾಡಿ, ಆಧುನಿಕ ವೈದ್ಯಕೀಯ ಕ್ಷೇತ್ರದ ಪ್ರಗತಿಯನ್ನು ಅವರಿಗೆ ತಲ್ಪಿಸಿದ ಕಾರ್ಯ ಈಗ ಇತಿಹಾಸ ಪ್ರಸಿದ್ಧವಾಗಿದೆಯಷ್ಟೆ. ಈಗ ಬಹುತೇಕ ರಾಷ್ಟ್ರಗಳಲ್ಲಿ ವೈದ್ಯರಿಗೆ ಕೊರತೆಯಿಲ್ಲ: ಮದ್ದುಗಳಿಗೆ ಬರಗಾಲವಿಲ್ಲ. ಡಾ॥ ಶ್ವೆಯಿಟ್ಸರ್‌ನಂಥವರು ಮಾತ್ರ ಅತಿ ವಿರಳ. ಅವನು ತೋರಿಸಿದ ದಾರಿಯಲ್ಲಿ ನಡೆಯುವವರಿಲ್ಲ. ಆದರಿಂದ ಅವನು

ಮಾಡಿದ ಕಾರ್ಯವೇ ಈಗಿನ ಸಂಶೋಧನೆಗಳಷ್ಟೇ ಪ್ರಸ್ತುತವಾಗುತ್ತದೆಂದರೆ ಅತಿಶಯೋಕ್ತಿಯಲ್ಲ.

ಆಸ್ಪತ್ರೆಗೆ ದಾನವಾಗಿ ಬರುತ್ತಿದ್ದ ಹಾಲಿನಪುಡಿಯನ್ನು ಡಾ॥ ಶ್ವೈಯಿಟ್ಸರ್ ಬಾಟಲುಗಳಲ್ಲಿ ಶಿಶುಗಳಿಗೆ ನೀಡುವುದನ್ನು ವಿರೋಧಿಸುತ್ತಿದ್ದ. ಆ ಪುಡಿಗಳನ್ನು ತಾಯಂದಿರಿಗೋ, ಸಾಕು ಪ್ರಾಣಿಗಳ ಉಪಯೋಗಕ್ಕೋ ಬಳಸುತ್ತಿದ್ದ. ಶಿಶುಗಳಿಗೆ ತಾಯಿ ಮೊಲೆಯುಣಿಸಿ ಸಾಕುವುದೇ ಸಹಜ ಕ್ರಿಯೆಯೆಂಬುದು ಅವನ ಖಚಿತ ಅಭಿಪ್ರಾಯವಾಗಿತ್ತು. ಈ ಕಾರಣಕ್ಕಾಗಿಯೂ ಹಲವರ ದೂಷಣೆಗೊಳಗಾಗಿದ್ದ. ಆದರೆ ಈಗೇನಾಗುತ್ತಿದೆ, ಶಿಶುಗಳಿಗೆ ಮೊಲೆಹಾಲುಣಿಸಿ ಸಲಹಬೇಕೆಂಬ ಆಂದೋಲನ ಪ್ರಪಂಚದಾದ್ಯಂತ ನಡೆಯುತ್ತಿಲ್ಲವೆ? ''ಬಾಟಲಿನ ಹಾಲು ವಿಷ, ಅಮ್ಮನ ಹಾಲು ಅಮೃತ''ವಾಗಿದೆ. ಹಾಲು ಪುಡಿಯ ಉತ್ಪಾದನೆ, ಪ್ರಚಾರಗಳನ್ನು ನಿಯಂತ್ರಿಸಲು ಕಾಯಿದೆ ಕಟ್ಟಲೆಗಳಾಗುತ್ತಿವೆ. ಆಲ್ಬರ್ಟ್ ಶ್ವೈಯಿಟ್ಸರ್ ತನ್ನ ಗೋರಿಯಲ್ಲಿ ತಿರುಗಿ ಮುಗುಳ್ನಕ್ಕರೆ ಆಶ್ಚರ್ಯವಿಲ್ಲ !

ಇನ್ನು ಶ್ವೈಯಿಟ್ಸರ್ ಆಫ್ರಿಕನ್ನರನ್ನು ನಡೆಸಿಕೊಳ್ಳುತ್ತಿದ್ದ ರೀತಿ: ಶ್ವೈಯಿಟ್ಸರ್ ಆಫ್ರಿಕಾವನ್ನು ಮೊದಲು ತಲುಪಿದಾಗ ಆಫ್ರಿಕನ್ನರ ಪರಿಸ್ಥಿತಿಯನ್ನು ಮೊದಲೇ ವಿವರಿಸಲಾಗಿದೆ. ಅವಿದ್ಯಾವಂತ ಅನಾಗರಿಕರಾದ ಅವರು ಯಾವ ಜವಾಬ್ದಾರಿಯನ್ನೂ ಹೊರುವ ಸ್ಥಿತಿಯಲ್ಲಿರಲಿಲ್ಲ. ಹುಟ್ಟು ಸೋಮಾರಿಗಳಾದ ನೀಗ್ರೋಗಳಿಂದ ಕೆಲಸ ಮಾಡಿಸುವುದಂತೂ ಅತ್ಯಂತ ತ್ರಾಸದಾಯಕ. ಆದರೂ ವರ್ಷಗಳುರುಳಿದಂತೆಲ್ಲಾ ಜೋಸೆಫ್, ಡೊಮಿನಿಕ್‌ರಂಥ ಹಲವಾರು ನೀಗ್ರೋಗಳು ಆಸ್ಪತ್ರೆಯಲ್ಲಿ ಜವಾಬ್ದಾರಿ ಕೆಲಸ ನಿರ್ವಹಿಸುತ್ತಿದ್ದರು. ಆಫ್ರಿಕಾದ ರಾಷ್ಟ್ರಗಳಿಗೆ ಕೂಡಲೇ ಸಂಪೂರ್ಣ ಸ್ವಾತಂತ್ರ್ಯ ನೀಡುವ ಬಗೆಗೆ ಶ್ವೈಯಿಟ್ಸರ್‌ನ ಅಭಿಪ್ರಾಯಗಳು ಸ್ವಲ್ಪಮಟ್ಟಿಗೆ ಪ್ರತಿಗಾಮೀ ಸ್ವರೂಪದ್ದೆನ್ನಬಹುದು. ಇನ್ನೂ ಬೌದ್ಧಿಕವಾಗಿ ಮುಂದುವರಿಯದ, ರಾಜಕೀಯವಾಗಿ ತಯಾರಾಗದ ಜನರಿಗೆ ಏಕಾಏಕೀ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟರೆ ಅವರಲ್ಲೇ ಅಂತಃಕಲಹಗಳುಂಟಾಗಿ ಅನಾಹುತ ಗಳಾಗಬಹುದೆಂಬುದು ಅವನ ನಂಬುಗೆಯಾಗಿತ್ತು. ಅದನ್ನೇ ಶ್ವೈಯಿಟ್ಸರ್ ವರ್ಣ ಭೇದವನ್ನು ಬೆಂಬಲಿಸುತ್ತಾನೆಂದು ದೂರಿದರು. ಆದರೆ ಬೆಲ್ಜಿಯನ್ ಕಾಂಗೋದಂಥ ರಾಷ್ಟ್ರಗಳು ಸ್ವತಂತ್ರವಾದಾಗ ಉಂಟಾದ ಗಲಭೆ, ಅಂತರ್ಯುದ್ಧ, ಕೊಲೆಗಳು ಸ್ವಲ್ಪಮಟ್ಟಿಗಾದರೂ ಅವನ ವಾದಕ್ಕೆ ಬೆಂಬಲ ನೀಡುವಂತಿದ್ದವು.

ಡಾ॥ ಆಲ್ಬರ್ಟ್ ಶ್ವೈಯಿಟ್ಸರ್ ತನ್ನದೇ ಆದ ವೈಶಿಷ್ಟ್ಯಪೂರ್ಣ ಜೀವನವನ್ನು ರೂಪಿಸಿಕೊಂಡು ಅದರಂತೆ ನಡೆದು ಹಲವಾರು ಕ್ಷೇತ್ರಗಳಲ್ಲಿ ಮಹೋನ್ನತ ಸಾಧನೆ ಗಳನ್ನು ಮಾಡಿ ಈ ಲೋಕದಿಂದ ಮರೆಯಾಗಿದ್ದಾನೆ. ಅವನು ಪ್ರತಿಪಾದಿಸಿದ

ಜೀವೋಪಾಸನಾ ತತ್ವ ನಮ್ಮ ಮಹಾತ್ಮಾಗಾಂಧಿಯವರ ಅಹಿಂಸಾವಾದದಂತೆ ಈಗ ವಿಶ್ವದ ನಾಗರಿಕರ ಮುಂದಿವೆ. ಪ್ರಸ್ತುತ ಸಮಯದಲ್ಲಿ ಅವುಗಳನ್ನು ಧಿಕ್ಕರಿಸಿ ನಡೆದರೆ ಪ್ರಪಂಚದ ನಾಶ ಸನ್ನಿಹಿತವಾಗುತ್ತದೆಂಬುದರಲ್ಲಿ ಸಂದೇಹವಿಲ್ಲ.

## ಆಕರ ಗ್ರಂಥಗಳು


1. ALBERT SCHWEITZER : *My Life and thought* - An Autobiography - George Allen and Unwin, LONDON(1958)
2. ALBERT SCHWEITZER : *My Childhood and Youth* - Unwin Books - LONDON (1962)
3. ALBERT SCHWEITZER : *The Decay and the Resto Ration of Civilization* - Adam and Charles Black - LONDON (1955)
4. ALBERT SCHWEITZER : *The Indian Thought and its Development* -Wilco Publishing House, BOMBAY (1980)
5. KURT SINGER AND JANE SHERROD : DR. ALBERT SCHWEITZER -*Medical Missionary* -Wilco Publishing House BOMBAY (1969)
6. JAMES BRABAZON : ALBERT SCHWEITZER A Biography - Victor Gollancz Ltd. LONDON (1976)

# ಕೆಲವು ವಿಮರ್ಶೆಗಳು ಮತ್ತು ಅಭಿಪ್ರಾಯಗಳು

......ಬಿಡದೇ ಓದಿಸಿಕೊಂಡು ಹೋಗುವ ಒಂದು ಸುಂದರ ಕಾದಂಬರಿಯಂತಿದೆ. ಸಾಮಾನ್ಯವಾಗಿ ಜೀವನ ಚರಿತ್ರೆ ಅಂದ ಕೂಡಲೇ ತಲೆ ಹಾಕುವ ಅಂಕಿ ಅಂಶಗಳು, ವಿವರಣೆಗಳು ಇಲ್ಲಿ ಇಲ್ಲ. ಕೃತಿಯ ಆರಂಭ ಎಷ್ಟು ಪರಿಣಾಮಕಾರಿಯೋ ಅಷ್ಟೇ ಪರಿಣಾಮಕಾರಿಯಾಗಿ ಸಾಗುತ್ತದೆ, ಕೃತಿ ಅನಂತರವೂ. ಶ್ವೆಯಿಟ್ಸರ್ ವ್ಯಕ್ತಿತ್ವ ಅವರ ಚಿಂತನೆ, ಆಫ್ರಿಕಾದ ವರ್ಣನೆ, ನೀಗ್ರೋಗಳ ಬದುಕಿನ ದುರಂತಮಯ ಘಟನೆಗಳು, ಲ್ಯಾಂಬರೀನೆ, ಓಗಾವೆ ನದಿ, ನದಿಯಲ್ಲಿನ ನೀರಾನೆಗಳು, ಮಹಾಯುದ್ಧದ ಮುಗಿಲುಗಳು – ಹೀಗೆ ವಸ್ತುವಿಗೆ ಪೂರಕವಾಗಿ ಬರುವ ಎಲ್ಲವನ್ನೂ ಲೇಖಕರು ಸಮರ್ಪಕವಾಗಿ ಕಟ್ಟಿಕೊಡುತ್ತಾರೆ.

ಡಾ|| ಶ್ವೆಯಿಟ್ಸರ್ ಸರಳತೆ, ಅವನ ನಿರ್ಲಿಪ್ತತೆ ತನ್ನ ಉಡುಪಿನ ಬಗೆಗೆ ಅವನ ನಿರ್ಲಕ್ಷ್ಯ, ನೋಬೆಲ್ ಪಾರಿತೋಷಕ ಬಂತೆನ್ನುವಾಗ ಅವನು ತೋರಿಸುವ ನಿರುದ್ವಿಗ್ನತೆ, ಹೀಗೆ ಅವನ ವ್ಯಕ್ತಿತ್ವವನ್ನು ಘಟನೆಗಳ ಮೂಲಕ ಲೇಖಕರು ನಿರ್ಮಿಸುತ್ತಾರೆ.

**ಎನ್. ಡಿ. ಎಸ್** – ತರಂಗ ೩ ಜೂನ್ ೧೯೯೦

..... ಈ ಪುಸ್ತಕವನ್ನು ಬಹಳ ದಿನಗಳಿಂದ ಓದಬೇಕೆಂಬ ಆಸೆಯಿತ್ತು. ಅದೀಗ ಕೈಗೂಡಿದೆ. ಹೊತ್ತಗೆಯನ್ನು ಒಂದೇ ಉಸುರಿಗೆ ಓದಿ ಮುಗಿಸಿದೆ. ಹಾಗೆ ತನ್ಮಯವಾಗುವಂತಹ ಗುಣ ಅದಕ್ಕಿದೆ. ಡಾ|| ಶ್ವೆಯಿಟ್ಸರ್‌ನ ಬದುಕು, ಎಲ್ಲಾ ಡಾಕ್ಟರು ಗಳಿಗೂ ಆದರ್ಶವಾಗಬೇಕಾದದ್ದು. ಆತನ ಬದುಕಿನ ಮಹೋನ್ನತ ಘಟನೆಗಳನ್ನು ಸ್ವಾರಸ್ಯಕರವಾಗಿ ನಿರೂಪಿಸಿರುವುದೇ ನಿಮ್ಮ ಕೃತಿಯ ವೈಶಿಷ್ಟ್ಯ. ಇಷ್ಟೊಂದು ಮಾಹಿತಿ ಇರುವಾಗ ಯಾವುದನ್ನು ಆರಿಸಬೇಕು, ಯಾವುದನ್ನು ಬಿಡಬೇಕು ? ಎಂಬ ಜಿಜ್ಞಾಸೆ ಎದುರಾಗುತ್ತದೆ. ನಿಮ್ಮ ಆಯ್ಕೆ ಪರಿಪೂರ್ಣವಾಗಿದೆ. ಆ ಮಹಾನುಭಾವನ ಜೀವನದ ಪ್ರಮುಖ ಘಟನೆಗಳು ಯಥಾವತ್ತಾಗಿ ನಿರೂಪಿತವಾಗಿವೆ. ಡಾಕ್ಟರಲ್ಲದೆ ಬೇರೊಬ್ಬರು ಬರೆದಿದ್ದರೆ ಇಷ್ಟು ಚೆನ್ನಾಗಿ ಬರುತ್ತಿರಲಿಲ್ಲವೇನೋ.

ಮೊದಲ ಅಧ್ಯಾಯ –ವೃದ್ಧ ಪಿಯಾನೋ ಬಾರಿಸುತ್ತಿರುವ ಸನ್ನಿವೇಶ– ಬಹಳ ಹೃದಯಂಗಮ. ಅವನ ಬದುಕಿಗೆ ಮುನ್ನುಡಿ ಸಂಗೀತದಂತಿದೆ.

ಕನ್ನಡಕ್ಕೆ ಒಳ್ಳೆಯ ಪುಸ್ತಕ ಕೊಟ್ಟಿದ್ದೀರಿ; ಅಭಿನಂದನೆಗಳು.

**ಡಾ|| ಅನುಪಮಾ ನಿರಂಜನ**, ದಿನಾಂಕ : ೫-೫-೧೯೯೪

.... ಮಲೆನಾಡಿನಲ್ಲಿ ಜನಿಸಿ ಡಾ|| ಎಚ್. ಡಿ. ಚಂದ್ರಪ್ಪಗೌಡರಿಗೂ, ಫ್ರಾನ್ಸ್‌ನ ಸರಗಿನಲ್ಲಿ ಜನಿಸಿದ ಆಫ್ರಿಕಾದಲ್ಲಿ ಬದುಕಿನ ಸಾರ್ಥಕ್ಯ ಕಂಡುಕೊಂಡ ಡಾ|| ಆಲ್ಬರ್ಟ್ ಶ್ವೆಯಿಟ್ಸರ್ ಅವರಿಗೂ ಇರಬಹುದಾದ ಸಮಾನ ಅಂಶಗಳು ಆಫ್ರಿಕಾದ ಕಾಡು ಮತ್ತು

ವೈದ್ಯಕೀಯ. ಚಂದ್ರಪ್ಪಗೌಡರು ಈ ತೆಳುವಾದ ಸಂಬಂಧವನ್ನೇ ಹಿಡಿದು ಹೊರಟು ಶ್ವೈಯಿಟ್ಸರ್‌ನ ಹಲವಾರು ಅರ್ಥಪೂರ್ಣ ಮುಖಗಳನ್ನು ಹುಡುಕಿ ತಮ್ಮ ಖಚಿತವೂ ಅಸ್ಖಲಿತವೂ ಆದ ಸಾಹಿತ್ಯೇತರ ಶೈಲಿಯಲ್ಲಿ ಕನ್ನಡಿಗರಿಗೆ ನೀಡಿದ್ದಾರೆ. ಬದುಕಿನ ಬಗ್ಗೆ ಕುತೂಹಲವುಳ್ಳ ಮನುಷ್ಯನೊಬ್ಬ ತನ್ನಿಂದ ಹೊರಗಿರುವ ವಿಷಯಗಳನ್ನು ವ್ಯಕ್ತಿತ್ವದೊಳಗೆ ಆಹ್ವಾನಿಸಿಕೊಳ್ಳುವುದು ಹೀಗೆಯೇ.

.... ಡಾ|| ಚಂದ್ರಪ್ಪಗೌಡರು ಶ್ವೈಯಿಟ್ಸರ್ ಅವರ ಆತ್ಮಚರಿತ್ರೆ ಮತ್ತು ಹಲವಾರು ಜೀವನ ಚರಿತ್ರೆಗಳನ್ನು ಬಳಸಿಕೊಂಡು ಈ ಪುಸ್ತಕ ನೀಡಿದ್ದಾರೆ. ಇಡೀ ಪುಸ್ತಕದುದ್ದಕ್ಕೂ ಚಂದ್ರಪ್ಪಗೌಡರ ಜಾಣತನ, ಕುತೂಹಲ ಮತ್ತು ಆದರ್ಶ ಕಂಡುಬರುತ್ತದೆ.''

**ಪಿ. ಲಂಕೇಶ್**, ದಿನಾಂಕ ೧೮-೧೧-೯೦ ಲಂಕೇಶ್ ಪತ್ರಿಕೆ

..... ತಾವು ಬರೆದ ಡಾ|| ಆಲ್ಬರ್ಟ್ ಶ್ವೈಯಿಟ್ಸರ್, ಪುಸ್ತಕ ಓದಿ ಆನಂದಿಸಿದೆ. ಆ ಮಹಾಮಹಿಮನ ಜೀವನ ಚರಿತ್ರೆಯನ್ನು ಹೃದಯಂಗಮವಾಗಿ ಮತ್ತು ಆಕರ್ಷಕವಾದ ಶೈಲಿಯಲ್ಲಿ ಮನಮುಟ್ಟುವಂತೆ ಬರೆದು ಕನ್ನಡ ಸಾಹಿತ್ಯಕ್ಕೆ ಮತ್ತು ಕನ್ನಡ ಕುಲಕೋಟಿಗೆ ಹಿರಿಯ ಸೇವೆ ಸಲ್ಲಿಸಿರುವಿರಿ. ತಮಗೆ ಮನಃಪೂರ್ವಕ ವಂದನೆಗಳು.

**ಡಾ|| ಕೆ. ಚಿದಾನಂದ ಗೌಡ**, ಪ್ರೊಫೆಸರ್, ಎಸ್. ಜೆ. ಕಾಲೇಜ್ ಆಫ್ ಇಂಜಿನಿಯರಿಂಗ್, ಮೈಸೂರು. ೨೮-೧೧-೯೪

....ಡಾ|| ಚಂದ್ರಪ್ಪಗೌಡರು ಶ್ರಮವಹಿಸಿ ಬರೆದ ಈ ಕೃತಿಯಲ್ಲಿ ಶ್ವೈಯಿಟ್ಸರ್ ರವರ ಜೀವನದ ಹಲವು ಮುಖಗಳನ್ನು ಅತ್ಯಂತ ಎಚ್ಚರಿಕೆಯಿಂದ ಚಿತ್ರಿಸಿದ್ದಾರೆ. ಅವರ ಸಾಂಸಾರಿಕ, ಸಾಮಾಜಿಕ ಜೀವನದೊಂದಿಗೆ, ಅವರ ಆಲೋಚನೆಗಳು ಅಭಿಪ್ರಾಯಗಳು ಎಲ್ಲವನ್ನೂ ಸ್ಪಷ್ಟವಾಗಿ ದಾಖಲಿಸಿದ್ದಾರೆ. ಈ ಕಾರಣಕ್ಕಾಗಿಯೇ ಇದೊಂದು ಉತ್ತಮ ಜೀವನ ಚರಿತ್ರೆ.

ಕನ್ನಡ ಜೀವನ ಚರಿತ್ರೆಯ ಕ್ಷೇತ್ರಕ್ಕೆ ಡಾ|| ಚಂದ್ರಪ್ಪಗೌಡರ ಗ್ರಂಥ ಒಂದು ಅಪೂರ್ವ ಕೊಡುಗೆ.

**ಶ್ರೀ ವೇಣುಗೋಪಾಲ ಸೊರಬ**, ಪ್ರಜಾಮತ, ೯-೧೨-೯೦

...ಪುಸ್ತಕ ಬಹಳ ಚೆನ್ನಾಗಿದೆ. ಬಹಳ ಆಸಕ್ತಿಯಿಂದ ಓದಿಸಿಕೊಂಡು ಹೋಗುತ್ತದೆ. ನನಗೆ ಡಾ|| ಶ್ವೈಯಿಟ್ಸರ್‌ರ ಬಗೆಗೆ ಏನೂ ತಿಳಿದಿರಲಿಲ್ಲ. ತಿಳಿದುಕೊಳ್ಳಲು ಅವಕಾಶ ಮಾಡಿಕೊಟ್ಟಿದ್ದಕ್ಕೆ ಧನ್ಯವಾದಗಳು. ಬರವಣಿಗೆಯ ಶೈಲಿ ನಿಜವಾಗಿಯೂ ಬಹಳ ಸುಂದರವಾಗಿ ಮನಮುಟ್ಟುವಂತಿದೆ. ನಾನು ನೀವು ಬರೆದ ವೈದ್ಯಕೀಯ ವಿಷಯಗಳ ಬರವಣಿಗೆಯನ್ನು ಮಾತ್ರ ಓದಿದ್ದೆ. ನಿಮ್ಮ ಬರವಣಿಗೆಯ ಭಾಷಾ ಸಂಪತ್ತನ್ನು ನಾನು ಈ ಪುಸ್ತಕದಲ್ಲೇ ಕಂಡಿದ್ದು. ಶ್ರೀ ಗುರುದೇವರು ನಿಮ್ಮಿಂದ ಇಂತಹ ಇನ್ನೂ ಅನೇಕ ಎಲ್ಲರಿಗೂ ಜ್ಞಾನ ನೀಡುವಂತಹ ಬರವಣಿಗೆಗಳನ್ನು ಮಾಡುವಂತೆ ಬೇಡುತ್ತೇನೆ.

**ಡಾ|| ಡಿ. ಸಿ. ಚಿತ್ರಾ**, (ಹೆರಿಗೆ ಮತ್ತು ಸ್ತ್ರೀರೋಗ ತಜ್ಞರು, ಶಿವಮೊಗ್ಗ) ದಿನಾಂಕ ೨೬-೧-೯೧

.....ಕನ್ನಡದಲ್ಲಿ ಒಳ್ಳೆಯ ಜೀವನ ಚರಿತ್ರೆಗಳ ಪರಂಪರೆ ಇಲ್ಲ. ಹೆಸರಿಸಬಹುದಾದವು ಕೆಲವೇ ಕೆಲವು. ತೀ. ನಂ. ಶ್ರೀಕಂಠಯ್ಯ (ದೇ.ಜ.ಗೌ), ವಾಗ್ಗೇಯಕಾರ ವಾಸುದೇವಾ ಚಾರ್ಯ (ಎನ್. ಕೃಷ್ಣಮೂರ್ತಿ), ಸಂಸಸ್ಮರಣೆ (ಎ.ಎನ್. ಸುಬ್ರಹ್ಮಣ್ಯ) ಆಲ್ಬರ್ಟ್ ಶ್ವೆಯಿಟ್ಸರ್ (ಎಚ್. ಡಿ. ಚಂದ್ರಪ್ಪಗೌಡ) ಇಂತಹ ಕೆಲವು ಕೃತಿಗಳನ್ನು ಹೆಸರಿಸಬಹುದು.

**ಕೆ. ಸತ್ಯನಾರಾಯಣ,** ಕನ್ನಡಪ್ರಭ (ಸಾಹಿತ್ಯಲೋಕ) ೧೩-೪-೯೩

..... ಸಾಮಾನ್ಯ ಮನುಷ್ಯನಾಗಿದ್ದುಕೊಂಡು ಅಸಾಮಾನ್ಯ ಕೆಲಸ ಮಾಡಿ ಹೋದ ಶ್ವೆಯಿಟ್ಸರ್‌ನ ಬಗೆಗೆ ಇಷ್ಟು ದೊಡ್ಡ ಪುಸ್ತಕ ಪ್ರಕಟವಾಗಿರಲಿಲ್ಲ. ಒಂದು ಜೀವನ ವಿಧಾನವನ್ನೇ ಸೃಷ್ಟಿಸಿಹೋದ ಶ್ವೆಯಿಟ್ಸರ್‌ನ ಪೂರ್ಣ ಪ್ರಮಾಣದ ಜೀವನ ಚರಿತ್ರೆಯನ್ನು ಬರೆದು ಡಾ|| ಚಂದ್ರಪ್ಪಗೌಡರು ದೊಡ್ಡ ಉಪಕಾರ ಮಾಡಿದ್ದಾರೆ. ''ಶ್ವೆಯಿಟ್ಸರ್‌ನ ಜೀವನ ಆರದ ಬೆಳಕು. ಆ ಬೆಳಕಿನಿಂದ ಯಾರೂ ತಮ್ಮ ಬದುಕಿನ ಹಾದಿ ಕಂಡುಕೊಳ್ಳಬಹುದು. ಕನ್ನಡದ ತರುಣ ಓದುಗರಿಗೆ ಇಲ್ಲಿ ಒಂದು ಆದರ್ಶ ಪ್ರಾಯವಾದ ಜೀವನಕತೆ ಇದೆ.'' ಎಂದು ಮುನ್ನುಡಿ ಮಾತು ಬರೆದ ಡಾ|| ಹಾ. ಮಾ. ನಾಯಕರ ಮಾತಿಗೆ ನಾನು ಅವರು ಕೇಳದಿದ್ದರೂ ಬೆಂಬಲ ನೀಡುತ್ತೇನೆ. ಹಾಗೆ ಬೆಂಬಲಿಸಲು ಚಂದ್ರಪ್ಪಗೌಡರು ನನ್ನ ಮೇಲೆ ಮಾಡಿದ ವೈಯುಕ್ತಿಕ ಉಪಕಾರವೂ ಇನ್ನೊಂದು ಕಾರಣ. ಈಗ ಸುಮಾರು ೪೦ ವರ್ಷ ಗಳಿಂದಲೂ ನಾನು ಬರೆಯಬೇಕು; ಈ ವರ್ಷ ಮುಂದಿನ ವರ್ಷ ಎಂದು ತಳ್ಳುತ್ತಲೇ ಹೋಗಿರುವ ಉದ್ದೇಶಿತ ಕೃತಿ ಎಂದರೆ ಅದು ಶ್ವೆಯಿಟ್ಸರ್‌ರ ಜೀವನ; ಹೃದಯ ಸಂಪುಟ ದೊಳಗೆ ಜತನವಾಗಿ ಬಚ್ಚಿಟ್ಟಿದ್ದೆ. ಅದೇನು ಇನ್ನು ಧುಮುಕುವ ಒತ್ತಡವಾಗಿ ಬಿಡುತ್ತದೆ; ಹರಿದುಕೊಂಡು ಬಗೆಹರಿದುಕೊಂಡು ಬರುತ್ತಿದೆ ಎನ್ನುವಾಗ ಡಾ|| ಚಂದ್ರಪ್ಪಗೌಡರ ಸಮರ್ಥ ಗ್ರಂಥ ನನ್ನ ಕೈ ಸೇರಿತು. ಇನ್ನು ನಾನು ಬರೆಯದಿದ್ದರೂ ಕನ್ನಡಿಗರಿಗೆ ಶ್ವೆಯಿಟ್ಸರ್ ಹತ್ತಿರದವರಾಗುತ್ತಾರೆ. ವಿಭೂತಿ ಪುರುಷರೆಂದು, ಮಹಾತ್ಮರೆಂದು ೨೦ನೇ ಶತಮಾನದ ಕೆಲವೇ ಕೆಲವು ಮಹಾ ಪುರುಷರ ಸಾಲಿಗೆ ಸೇರಿಕೊಳ್ಳುತ್ತಾರೆಂಬುದು ನನಗೆ ಸಂತೋಷದ ವಿಷಯ. ಡಾ|| ಚಂದ್ರಪ್ಪಗೌಡರಿಗೆ ಕೂಡಲೇ ಕೃತಜ್ಞತೆ ಸಲ್ಲಿಸಿಬಿಡುತ್ತೇನೆ. ಶ್ವೆಯಿಟ್ಸರ್ ಆಗಲೇ ಹೇಳಿದ್ದಾರಲ್ಲವೇ. ಕೃತಜ್ಞತೆಗೆ ಕಾಯಬಾರದು ತಡವರಿಸಬಾರದು ಎಂದು.''

**ಪ್ರೊ|| ಕು. ಶಿ. ಹರಿದಾಸಭಟ್ಟರು,** ಉದಯವಾಣಿ ೮-೯-೯೦

....ನೀವು ಬರೆದ ಶ್ವೆಯಿಟ್ಸರ್ ಪುಸ್ತಕವನ್ನು ಬಸ್ಸು ಪ್ರಯಾಣದ ಅವಧಿಯಲ್ಲಿ ಓದಿ ಮುಗಿಸಿದೆ. ಅದ್ಭುತವಾದ ರಚನೆ, ಮನಃಪೂರ್ವಕವಾಗಿ ನಿಮ್ಮನ್ನು ನಾನು ಅಭಿನಂದಿಸ ಬಯಸುತ್ತೇನೆ. ಎಂತಹ ಮಹಾನ್ ವ್ಯಕ್ತಿ; ಎಂತಹ ಪರಿಣಾಮಕಾರಿ ಪುಸ್ತಕ; ಕನ್ನಡ ನಾಡು ನಿಮ್ಮ ಈ ಕೊಡುಗೆಯನ್ನು ಎಂದೂ ಮರೆಯಲಾರದು. ಈ ಪುಸ್ತಕ ಪಠ್ಯಪುಸ್ತಕವಾಗಬೇಕು. ಈ ದಿಸೆಯಲ್ಲಿ ನೀವು ಪ್ರಯತ್ನಿಸಿ.

**ಡಾ|| ಸಿ. ಆರ್. ಚಂದ್ರಶೇಖರ್,** ೧೫-೧೦-೯೨

## THE MAGICIAN AT WORK

..... A few days back, I picked up one book out of ocean and began to read. It turned out to the compulsive reading. The book was "Dr. Albert Schweitzer," The Life Story of a Medical Missonary by Dr. H. D. Chandrappa Gowdá.

Kannada writers usually write biographies about the sons and daughters of their own soil. But I think it is challenging to write about great foreign personalities, too;

Dr. Gowda's interests in Schweitzer began twenty years ago when he came across a book on the famous missionary. It sparked off a literary search,... and he collected all the facts he could about the man known in those parts as "The Magician."

.... The book gives us some illuminating facts. Scheweitzer's hospital at Lambarene was not like a modern hospital. It was just a collection of huts with a few rough beds. The table on which Scheweitzer operated was a wooden one. He and his wife cared for the patients personally. The doctor worked day and night and cured hundereds of people. This was why he was thought of as a magician. People came to him sick and miserable and when he cured them they thought it was sheer magic.

Dr. Gowda (then) takes us to Alsace Schweitzer's birthplace. His family background, his love of music, getting doctorates in theology and philosophy in his thirtiath year and becoming professor in Strasbourg University are all touched upon.

He shows us how Schweitzer's mental make up did not limit him only to the classroom: he had a greater vision. One day, he saw a pamphlet from the Paris Missionary Society extending an open invitation to those who wished to serve the Negroes in Africa. Schweitzer immediately thought : 'Lord, I will come to you'. This was how the story of the Lamberene hospital began.

The entire world soon came to hear about him and he received many honours, the greatest of them being the Noble Prize for his work in Lambarene.

**–Na D 'Souza,** Indian Express, 16-2-91

The work in Kannada, a worthy addition to its literary output, is a gripping and elevating life sketch of one of the 20th century's greatest personalities, Dr. Albert Schweitzer, the Christian medical missionary and the Nobel Laureate.

As graphically portrayed in the work, Dr. Schweitzer blazed new trails as an apostle of mercy, succour and peace. He dedicated his whole life in the service of the depraved bushmen of the Dark continent of Africa, administering medical care to the thousands of the sick aborigines and spreading awakening among them.

The setting for the missionary's sphere of humanitarian work is the hospital he build from scratch and against heavy odds in the dense and forbidding forests of Lamberence in the French colony of Gabon, along the Equator, it became his laboratory, over half a century, where he found the fulfilment of his life's mission and the purpose of life, as he understood it, in recognition of his 'reverence for life.'

The author quotes Dr. Albert Einstein as grading Schweitzer and Gandhiji as the two most outstanding personages of the century and draws comparisons between them for the simplicity of living and humility.......

The many splendoured personality of the medical missionary is very well brought out in the sketch. He was an erudite scholar in Christian theology and Christlore and wrote a number of weighty dissertations. He was an accomplished piano and organ player.

Schweitzer abhorred war. The 1914 and the 1939 world wars, followed by the Hiroshima tragedy and their ravages and deeply distrubed and moved him. His broadcast from Olso, in April 1957, having for its theme 'The Declaration of Conscience' let Bertrand Russel and 2000 scientists to issue a call for the end of nuclear warfare.

**C. M. RAMACHANDRA**

THE HINDU 9-02-1991

# ನವಕರ್ನಾಟಕ ಶೈಕ್ಷಣಿಕ ಪುಸ್ತಕಗಳು

ಪ್ರಾಥಮಿಕ ಶಿಕ್ಷಣ : ಸಮಸ್ಯೆಗಳು - ಸವಾಲುಗಳು *ಡಾ|| ಮಹಾಬಲೇಶ್ವರ ರಾವ್* 110-00

ಪ್ರೌಢಶಾಲೆಗಳಲ್ಲಿ ಕನ್ನಡ ಬೋಧನೆ *ಡಾ|| ಮಹಾಬಲೇಶ್ವರ ರಾವ್* 60-00

ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಬೋಧನೆ (5ನೇ ಮು.) *ಡಾ|| ಮಹಾಬಲೇಶ್ವರ ರಾವ್* 30-00

ಸಂಶೋಧನ ಮಾರ್ಗ *ಡಾ|| ಮಹಾಬಲೇಶ್ವರ ರಾವ್* 25-00

ಸೃಜನಶೀಲತೆ (3ನೇ ಮುದ್ರಣ) *ಡಾ|| ಮಹಾಬಲೇಶ್ವರ ರಾವ್* 35-00

ನವಕರ್ನಾಟಕ ಪ್ರೌಢಶಾಲಾ ಕನ್ನಡ ಕೈಪಿಡಿ (3ನೇ ಮುದ್ರಣ)
*ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ* 45-00

ನವಕರ್ನಾಟಕ ವ್ಯಾಕರಣ ಕೈಗನ್ನಡಿ (6ನೇ ಮುದ್ರಣ) *ಕೆ. ದಾಮೋದರ ಐತಾಳ* 28-00

ಇಂಗ್ಲಿಷ್ ಕಲಿಯುವ ಮುನ್ನ (2ನೇ ಮುದ್ರಣ) *ಎಸ್. ಎಲ್. ಎನ್. ಶರ್ಮ,*
*ಕೆ. ಶಂಕರನಾರಾಯಣ* 10-00

ಬಾಲಕರಿಗಾಗಿ ಸ್ಕೌಟಿಂಗ್ *ಲಾರ್ಡ್ ಬೇಡನ್ ಪೊವೆಲ್*
*(ಅನು : ಆರ್. ಚಂದ್ರಶೇಖರನ್)* 110-00

ದೇಶ-ವಿದೇಶಗಳ ಪರಿಚಯ *ಪಾಂಡುರಂಗ ಶಾಸ್ತ್ರೀ, ಸಿ. ಆರ್. ಕೃಷ್ಣರಾವ್* 135-00

ಸಾಹಿತ್ಯ ಸಂದರ್ಭ *(ಸಂ. ಪ್ರೊ|| ಎಂ. ರಾಜಗೋಪಾಲಾಚಾರ್ಯ ಮತ್ತಿತರರು)* 40-00
(ಟಿ.ಸಿ.ಎಚ್. ತರಗತಿ ಪ್ರಥಮ ಭಾಷೆ ಕನ್ನಡ ಪಠ್ಯಪುಸ್ತಕ)

ಡಾ|| ಆಲ್ಬರ್ಟ್ ಶ್ವೆಯಿಟ್ಸರ್ *ಡಾ|| ಎಚ್. ಡಿ. ಚಂದ್ರಪ್ಪಗೌಡ* 38-00
(ಕುವೆಂಪು ವಿಶ್ವವಿದ್ಯಾಲಯ ಪದವಿ ತರಗತಿ ಪಠ್ಯಪುಸ್ತಕ)

ಗೆಲಿಲಿಯೊ (ನಾಟಕ) *ಡಾ|| ಎಚ್. ಕೆ. ರಾಮಚಂದ್ರಮೂರ್ತಿ*
(ಕುವೆಂಪು ವಿಶ್ವವಿದ್ಯಾಲಯ ಪದವಿ ತರಗತಿ ಪಠ್ಯಪುಸ್ತಕ) *ಪ್ರೊ|| ಜೆ. ಆರ್. ಲಕ್ಷ್ಮಣರಾವ್* 28-00

ಜೆಹಾದ್ *ಬೊಳುವಾರು ಮಹಮ್ಮದ್ ಕುಂಞ* 32-00
(ಕರ್ನಾಟಕ ವಿಶ್ವವಿದ್ಯಾಲಯದ ಪದವಿ ತರಗತಿ ಪಠ್ಯಪುಸ್ತಕ)

ಉಚಲ್ಯಾ *ಮರಾಠಿ ಮೂಲ : ಲಕ್ಷ್ಮಣ ಗಾಯಕವಾಡ*
(ಬೆಂಗಳೂರು ವಿಶ್ವವಿದ್ಯಾಲಯ ಪದವಿ ತರಗತಿ ಪಠ್ಯಪುಸ್ತಕ) *(ಅನು : ಚಂದ್ರಕಾಂತ ಪೋಕಳೆ)* 45-00



**ಡಾ॥** ಎಚ್. ಡಿ. ಚಂದ್ರಪ್ಪಗೌಡರು ಹೊಸನಗರ ತಾಲ್ಲೂಕಿನ ಹೊಳೇಗದ್ದೆಯಲ್ಲಿ ೧೯೨೯ರಲ್ಲಿ ಜನಿಸಿದರು. ೧೯೫೬ರಲ್ಲಿ ಮೈಸೂರು ಮೆಡಿಕಲ್ ಕಾಲೇಜಿನಿಂದ ಎಂ.ಬಿ.ಬಿ.ಎಸ್. ಮತ್ತು ೧೯೬೬ರಲ್ಲಿ ಮಂಗಳೂರಿನ ಕಸ್ತೂರ್ಬಾ ಮೆಡಿಕಲ್ ಕಾಲೇಜಿನಿಂದ ಎಂ.ಎಸ್. ಪದವಿ ಪಡೆದರು. ವೈದ್ಯರಾಗಿ ಕರ್ನಾಟಕದ ಹಲವು ಊರುಗಳಲ್ಲಿ ಸೇವೆ ಸಲ್ಲಿಸಿ, ಡಿಸ್ಟ್ರಿಕ್ಟ್ ಸರ್ಜನ್ ಆಗಿ ನಿವೃತ್ತರಾದರು (೧೯೮೪). 'ಮೈಸೂರು ಚಲೋ' ಚಳುವಳಿಯಲ್ಲಿ ಭಾಗವಹಿಸಿದ್ದಕ್ಕಾಗಿ ಜೇಲು ಶಿಕ್ಷೆ ಅನುಭವಿಸಿದರು. ನಿವೃತ್ತಿಯ ನಂತರ ಶಿವಮೊಗ್ಗ ಜಿಲ್ಲಾ ಪರಿಸರ ಸಂರಕ್ಷಣಾ ವೇದಿಕೆ, 'ಪಶ್ಚಿಮ ಘಟ್ಟ ಉಳಿಸಿ' ಆಂದೋಲನದಲ್ಲಿ ಸಕ್ರಿಯ ಪಾತ್ರ ವಹಿಸಿದರು.

ವೈದ್ಯಕೀಯ ಸಾಹಿತ್ಯ ಕ್ಷೇತ್ರಗಳಲ್ಲಿ ತಮ್ಮ ಬಿಡಿಬರಹಗಳು ಮತ್ತು ವೈದ್ಯಕೀಯ ಪುಸ್ತಕಗಳ ಮೂಲಕ ಸಾಕಷ್ಟು ಪರಿಚಿತರಾದವರು. ಈವರೆಗೆ ೧೫೦ಕ್ಕೂ ಹೆಚ್ಚು ಬಿಡಿಲೇಖನಗಳನ್ನು, ೨೦ ವೈದ್ಯಕೀಯ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಈ ಪೈಕಿ **ಡಾ॥ ಆಲ್ಬರ್ಟ್ ಶ್ವೆಯಿಟ್ಸರ್, ಶತಮಾನದ ವಿಜ್ಞಾನಿ ಡಾ॥ ಯಲ್ಲಪ್ರಗಡ ಸುಬ್ಬರಾವ್, ಜೋಸೆಫ್ ಲಿಸ್ಟರ್ ಮತ್ತು ವ್ಲಾದಿಮಿರ್ ಹಾಫ್‌ಕಿನ್** – ಮುಂತಾದವು ಜೀವನ ಚರಿತ್ರೆಗಳು. **ಮಾನವ ಯಂತ್ರ ಕುಸಿದು ಬೀಳದಂತೆ ತಡೆಯುವುದು ಹೇಗೆ?** ಮತ್ತು **ಮಾದಕ ಮದ್ದುಗಳು** ಅನುವಾದಿತ ಕೃತಿಗಳು.

**'ವೈದ್ಯಲೋಕದ ಕೌತುಕಗಳು'** ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು, **'ಸಾಮಾನ್ಯ ಶಸ್ತ್ರವೈದ್ಯದ ಕಾಯಿಲೆಗಳು'** ಆರ್ಯಭಟ ಸಾಹಿತ್ಯ ಪ್ರಶಸ್ತಿಯನ್ನು, **'ಕ್ಯಾನ್ಸರ್ ಲೋಕ'** – ಕನ್ನಡ ವೈದ್ಯ ಸಾಹಿತ್ಯ ಪರಿಷತ್ತಿನ ರಸಋಷಿ ಕುವೆಂಪು ಪುರಸ್ಕಾರವನ್ನು ಮತ್ತು **'ಮಾನವ ಯಂತ್ರ ಕುಸಿದು ಬೀಳದಂತೆ ತಡೆಯುವುದು ಹೇಗೆ?'** ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅನುವಾದ ಬಹುಮಾನವನ್ನು ಗಳಿಸಿವೆ. ಅಲ್ಲದೆ ಇನ್ನೂ ಹಲವು ಪ್ರಶಸ್ತಿಗಳನ್ನು ಗಳಿಸಿದ್ದಾರೆ.

ಪ್ರಸ್ತುತ, ಮಹಾನ್ ಮಿಷನರಿ ಆಲ್ಬರ್ಟ್ ಶ್ವೆಯಿಟ್ಸರ್‌ನ ಜೀವನ ಚರಿತ್ರೆಯನ್ನು ಒಂದು ಸ್ವತಂತ್ರ ಸಾಹಿತ್ಯ ಕೃತಿಯಂತೆ ಸೊಗಸಾಗಿ ಬರೆದಿದ್ದಾರೆ.

---

**ರೂ. 38**

**ISBN 81-7302-421-9**